# ಶ್ರೀನಿವಾಸ ಕಲ್ಯಾಣ

## (ವೆಂಕಟೇಶ ಮಹಾತ್ಮ್ಯ)




ಲೇಖಕರು

**ಚಿ. ಶ್ರೀ ಕುಲಕರ್ಣಿ,** ಎಸ್. ಟಿ. ಸಿ.

ಶಿಕ್ಷಕ ಹೈಸ್ಕೂಲ ಮಾಳಮಾರುತಿ,

ಧಾರವಾಡ





ಪ್ರಕಾಶನ ಸ್ಥಳ

**ಸರಸ್ವತಿ ಪುಸ್ತಕ ಭಾಂಡಾರ**

ಬಸವನ ಬೀದಿ, ವೆಂಕಟೇಶ ದೇವರ ಗುಡಿಯ ಹತ್ತಿರ

**ಬೆಳಗಾಂವ**

೧೯೫೧

ಬೆಲೆ : ] [೧-೮-೦

॥ ಶ್ರೀ ॥

ಶ್ರೀಯಃ ಕಾಂತಾಯ ದೇವಾಯ । ಕಲ್ಯಾಣ ನಿಧಯೇಽರ್ಥಿನಾಮ್ ॥
ಶ್ರೀ ವೇಂಕಟ ನಿವಾಸಾಯ । ಶ್ರೀನಿವಾಸಾಯ ಮಂಗಳಮ್ ॥

# ಶ್ರೀ ವೆಂಕಟೇಶನ ಆರತಿ

ಜಯ ಜಯ ವೆಂಕಟರಮಣಾ । ಭವಸಂಕಟ ಹರಣಾ ॥
ಪಯನಿಧಿ ಶಯನ ಕೃಪಾಘನ । ಭಕ್ತಜನೋದ್ಧರಣಾ ॥
ಜಯದೇವ ಜಯದೇವ ॥ ಪಲ್ಲವಿ ॥

ಶ್ರೀಪತಿ ಪದ್ಮಾವತಿ ಪತಿ । ತಿರುಪತಿ ಗಿರಿವಾಸಾ ॥
ರೂಪವ ಮೋಹಕ ಧರಿಸಿದೆ । ಕೊರವಂಜಿಯ ವೇಷಾ ॥
ಪ್ರಾಪಂಚಿಕ ತಾಪತ್ರಯ । ನಾಶಕ ಜಗದೀಶಾ ॥
ಸ್ಥಾಪಿತ ಭೂವೈಕುಂಠವ । ಸುಲಭಮೋಕ್ಷವಿನಾಶಾ ॥ ೧ ॥

ಬಕುಳಾವತಿ ವಾತ್ಸಲ್ಯದ । ನುಡಿ ಕೇಳಿಸಿದ ದೇವಾ ॥
ಪ್ರಕಟಿ ಮಹಾಮಹಿಮನ್ನು । ಜನಮನ ಮುದದೀವಾ ॥
ಕಕ್ಕುಲತೆಯಲಿ ಬಯಕೆಗಳ । ನ್ನೀಡೇರಿಸುವ ದೇವಾ ॥
ಸಕಲ ಜನಂಗಳ ಕೃಪೆಯಿಂ । ಕೈಕೊಳ್ಳುವಿ ಸೇವಾ ॥ ೨ ॥

ಇಷ್ಟದಿ ಭಜಕರಿಗೊಲಿಯುವ । ಬಿರುದಾವಳಿ ಧರನ ॥
ವಿಗ್ರಹ ಕಲ್ಯಾಣಾದ್ಭುತ । ಸುಮನ ಮನೋಹರನೆ ॥
ಜಾಗೃತ ದೇವತ ನಿಂತಿಹೆ । ಕಲಿಯುಗದಲಿ ನೀನೆ ॥
ರಾಘವ ದಾಸರು ನಲಿಯುವರು । ಪಾಡುತ ಕೀರ್ತಿಯನೇ ॥ ೩ ॥

ಶ್ರೀಮತ್ಸುಂದರ ಜಾಮಾತೃ ಮುನಿಮಾನಸವಾಸಿನೇ ॥
ಸರ್ವ ಲೋಕ ನಿವಾಸಾಯ ಶ್ರೀನಿವಾಸಾಯ ಮಂಗಳಮ್ ॥

— ಶ್ರೀರಸ್ತು —

ಮುದ್ರಕರು **ಶ್ರೀ ಎಮ್. ಜಿ. ಪಾಲೇಕರ,** ವಸಂತ ಮುದ್ರಣಾಲಯ, ಧಾರವಾಡ

ಪ್ರಕಾಶಕರು. **ಸೌ. ಸರಸ್ವತೀಬಾಯಿ ಕುಲಕರ್ಣಿ** (ಹಿರೇಬಾಗೇವಾಡಿ), ಇವರು ಬೆಳಗಾಂವಿಯ ಬನವನ ಬೀದಿಯಲ್ಲಿರುವ ತಮ್ಮ ಸ್ವಂತ್ರ ಮಾಲಕಿಯ ಸರಸ್ವತಿ ಪುಸ್ತಕ ಭಾಂಡಾರದಲ್ಲಿ ಪ್ರಸಿದ್ಧಪಡಿಸಿದರು

# ಬಿನ್ನಹ

ಶ್ರೀನಿವಾಸನ ದಯಾಪ್ರೇರಣೆಯಿಂದ ಹಾಗು ಶ್ರೀಮತ್ಪೂಜ್ಯ ವಾಲುಕೇಶ್ವರ ಭಾರತಿ ಶ್ರೀಗಳವರ ಕೃಪಾಪ್ರಸಾದದಿಂದಲೂ ಈ "ಶ್ರೀನಿವಾಸ ಕಲ್ಯಾಣ" ಗ್ರಂಥವನ್ನು ನಾಳಿನ ನವರಾತ್ರಿಯೊಳಗಾಗಿಯೇ ಪ್ರಕಟಿಸುವ ಸಂಕಲ್ಪವನ್ನು ಮೊನ್ನಿನ ಕೃಷ್ಣಾಷ್ಟಮಿಯ ಸುದಿನದಲ್ಲಿಯೇ ನಾವು ಮಾಡಿಕೊಂಡೆವು. ಆ ನಮ್ಮ ಬಯಕೆಯಿಂದು ಪೂರ್ಣವಾಯಿತೆಂಬದನ್ನು ತಿಳಿಸಲು ಆನಂದವೆನಿಸುವದು. ಇದೊಂದು ಸಾಹಿತ್ಯದೇವಿಯ ನವರಸವೆಂಬ ನವರಾತ್ರಿಯಲ್ಲಿ ನವರತ್ನಗಳ ನಂದಾದೀಪಗಳಂತೆ ನವವಿಧ ಭಕ್ತರಿಗೆ ಪಾರಾಯಣ ಗ್ರಂಥವಾಗಲೆಂದು ನಮ್ಮ ಹಾರೈಕೆ.

ಈ ಮೊದಲು ನಮ್ಮ ಅಧ್ಯಾತ್ಮನಿಲಯದಿಂದ ಗುರು ಚರಿತ್ರೆ, ದತ್ತ ಮಹಾತ್ಮ್ಯ, ಭಗವಾನ್ ಶ್ರೀಕೃಷ್ಣ ಮೊದಲಾದ ಗ್ರಂಥಗಳಲ್ಲದೆ ಮೊನ್ನೆ ಮೊನ್ನೆ ಪ್ರಕಟಿಸಿದ, ಶ್ರೀಗುರು ವಾಲುಕೇಶ್ವರಭಾರತಿ ಸ್ವಾಮಿಗಳವರ ಸಂಕ್ಷಿಪ್ತ ಚರಿತ್ರೆಯಿಂದ ಸಹಿತವಾದ 'ಭಗವಾನ್ ಶ್ರೀರಾಮ' (ಸಂಪೂರ್ಣ ರಾಮಾಯಣ) ಗ್ರಂಥವು ಇವೆಲ್ಲವು ಭಾವಿಕ ಭಕ್ತರ ಮನಸ್ಸನ್ನು ತೃಪ್ತಿಗೊಳಿಸಲೆಂದು ನಮ್ಮ ಆಶೆಯಿರುವದು. ನವ್ಯದ 'ಶ್ರೀನಿವಾಸ ಕಲ್ಯಾಣ'ವು ಕೂಡ ಅದೇ ಅಪೇಕ್ಷೆಯಿಂದ ಹೊರಬಿದ್ದಿದೆ.

ಭಾಷಾಸೇವೆಯು ಮಿಗಿಲೆಂಬದನ್ನು ಸಾಹಿತಿಗಳೆಲ್ಲರೂ ಒಪ್ಪುವ ಮಾತಾಗಿದೆ. ನಾಲಿಗೆಯು ಭೋಜ್ಯ ವಸ್ತುಗಳಲ್ಲಿಯ ಷಡ್ರಸಗಳ ರುಚಿಯನ್ನಷ್ಟೇ ತಿಳಿಯುವದು. ಆದರ ಹೃದಯವು ಸಾಹಿತ್ಯದಲ್ಲಿಯ ನವರಸ ಬಯಸುವದು. ಅದಕ್ಕಾಗಿಯೇ ಭಾಷೆಯಲ್ಲಿ ಹೃದಯಂಗಮ ಗ್ರಂಥಗಳ ಆವಶ್ಯಕತೆಯುಂಟು. ಅದರ ಪೂರ್ಣತೆಗಾಗಿಯೇ ನಾವು ನಮ್ಮ ಮೇಲಿನ ಗ್ರಂಥಗಳೊಂದಿಗೆ ಈ 'ಶ್ರೀನಿವಾಸ ಕಲ್ಯಾಣ' ವನ್ನು ಪ್ರಕಟಗೊಳಿಸುವೆವು.

'ಶ್ರೀನಿವಾಸ ಕಲ್ಯಾಣ' ಎಂದು ಈ ಗ್ರಂಥವು ಕರೆಯಲ್ಪಟ್ಟರೂ ಇದು ವೆಂಕಟೇಶ ಮಹಾತ್ಮ್ಯದ ಪೂರ್ವಭಾಗವಾಗಿರುವದು. ಈ ಭಾಗದಲ್ಲಿ ಮೊದಲಿನ ೧೦ ಅಧ್ಯಾಯಗಳು ಮಾತ್ರ ಬರುವವು. ಭಾವಿಕರಾದ ವೇಂಕಟೇಶನ ಭಕ್ತರು ನವರಾತ್ರಿಯಲ್ಲಿ ಇವನ್ನಿಷ್ಟೇ ಪಾರಾಯಣ ಮಾಡುವ ಪರಿವಾರವುಂಟು.

ಇದಕ್ಕೂ ಮೊದಲು 'ವೆಂಕಟೇಶ ಮಹಾತ್ಮ್ಯ' ಎಂಬ ಹೆಸರಿನಿಂದ ಒಂದೆರಡು ಪುಸ್ತಕಗಳು ಬರೆಯಲ್ಪಟ್ಟು ಪ್ರಕಟವಾಗಿರುವವು. ಅವುಗಳನ್ನು

ಬರೆದವರೆಲ್ಲರು ತಮ್ಮ ಪುಸ್ತಕವು ಓದುಗರಿಗೆ ರುಚಿಕಟ್ಟಾಗಬೇಕು. ಸುಲಭ ಹಾಗು ಸರಳ ಭಾಷೆಯದಾಗಬೇಕು. ಎಂಬ ಸ್ತುತ್ಯವಾದ ಉದ್ದೇಶಗಳಿಂದಲೇ ಬರೆದಿರುವರು ಆದರೆ ಅವರ ಉದ್ದೇಶವು ಎಷ್ಟರ ಮಟ್ಟಿಗೆ ಸಾಧಿಸಿರುವದೆಂಬದರ ನಿರ್ಣಯವನ್ನು ವಾಚಕರ ಮತಿಗೇ ಬಿಟ್ಟುಗೊಟ್ಟು ಈ 'ಶ್ರೀನಿವಾಸ ಕಲ್ಯಾಣ' ಗ್ರಂಥಕ್ಕಾಗಿ ಬರೆದಿರುವ ನಮ್ಮ ಹೃದ್ಗತವನ್ನು ಮುಗಿಯಿಸುವಾ.

ಈ ಗ್ರಂಥವು ಪೂರ್ಣ ಅಚ್ಚಾಗಿ ಹೊರಬೀಳುವ ವರೆಗೆ ನಮಗೆ ಸಹಾಯಕರಾಗಿ ಶ್ರಮವಹಿಸಿದ ಶ್ರೀ ಕಾ. ರಾ. ಕುಲಕರ್ಣಿಯವರಿಗೆ, ಮತ್ತು ಅಚ್ಚುಕಟ್ಟಾಗಿ ಮುದ್ರಿಸಿ ಕೊಟ್ಟ ವಸಂತ ಪ್ರೆಸ್ಸಿನ ಸಂಚಾಲಕರಾದ ಶ್ರೀಯುತ ಎಸ್. ಜಿ ವಾಲೇಕರ ಅವರಿಗೂ ಚಿರಋಣಿಯಾಗಿರುವೆನು.

ಅಧ್ಯಾತ್ಮನಿಲಯ
ಮಾಳಮಡ್ಡಿ, ಧಾರವಾಡ
ಅನಂತನ ಚತುರ್ದಶಿ

ಸಜ್ಜನರ ಸೇವಕ,
— ಚಿ. ಶ್ರೀ. ಕುಲಕರ್ಣಿ

## ಪರಿವಿಡಿ


| | | | |
|---|---|---|---|
| ೧ ನೆಯ ಅಧ್ಯಾಯ ... | ೧ | ೭ ನೆಯ ಅಧ್ಯಾಯ.... | ೭೨ |
| ೨ ,, ,, .. | ೨೭ | ೮ ,, ,, .... | ೮೧ |
| ೩ ,, ,, .. | ೩೬ | ೯ ,, ,, .... | ೧೦೭ |
| ೪ ,, ,, .. | ೪೪ | ೧೦ ,, ,, .... | ೧೩೩ |
| ೫ ,, ,, .... | ೫೦ | ೧೧ ,, ,, .... | ೧೪೩ |
| ೬ ,, ,, ... | ೫೭ | ೧೨ ,, , .... | ೧೫೧ |


### ಚಿತ್ರಗಳ ಪರಿವಿಡಿ


| | | ಪುಟ |
|---|---|---|
| ೧ | ಪದ್ಮಾವತಿದೇವಿ (ಮೂರು ಬಣ್ಣದ ಚಿತ್ರ) .... | ೧ |
| ೨ | ಹುತ್ತಿಗೆ ಆಕಳು ಹಾಲು ಸುರಿಸುವದು .... | ೪೦ |
| ೩ | ಪದ್ಮಾವತಿಯಿಂದ ಪರಾಜಿತ ಶ್ರೀನಿವಾಸನು .... | ೭೯ |
| ೪ | ಕೊರವಂಜಿ ವೇಷದ ಶ್ರೀನಿವಾಸನು .... | ೧೦೪ |
| ೫. | ಪದ್ಮಾವತಿ—ಶ್ರೀನಿವಾಸರ ಕಲ್ಯಾಣ ಮಹೋತ್ಸವವು | ೧೭೬ |

॥ ಶ್ರೀ ॥

# ಶ್ರೀನಿವಾಸ ಕಲ್ಯಾಣ

## (ವೆಂಕಟೇಶ ಮಹಾತ್ಮ್ಯ)

---

## ೧ ನೆಯ ಅಧ್ಯಾಯ

★

### ಕೃತಯುಗದ ವೃಷಭಾಚಲವು

ಕೃತಯುಗದಲ್ಲಿ 'ವೃಷಭಾಸುರ' ಎಂಬ ದುಷ್ಟ ದೈತ್ಯನು ಈ[illegible] ವೆಂಕಟಾಚಲವನ್ನು ಆಶ್ರಯಿಸಿಕೊಂಡಿದ್ದನು. ಅವನು ಅಲ್ಲಿಯ ಆಶ್ರಮವಾಸಿಗಳಾದ ಋಷಿಗಳನ್ನು ಬಹುಪರಿಯಿಂದ ಪೀಡಿಸುತ್ತಿದ್ದನು. ಅವರು ಮಾಡುವ ಹೋಮ-ಹವನಗಳನ್ನೆಲ್ಲ ವಿಧ್ವಂಸಮಾಡಿಬಿಡುತ್ತಿದ್ದನು. ಇಡೀ ಪರ್ವತವನ್ನು ತನ್ನದೆಂದೇ ತಿಳಿದುಕೊಂಡು ಮನಸ್ಸಿಗೆ ಬಂದಂತೆ ಕ್ರೂರ ಕರ್ಮಗಳನ್ನು ಮಾಡುತ್ತಿದ್ದನು. ಆತನ ಉಪದ್ರವವನ್ನು ತಾಳಲಾರದೆ ಅಲ್ಲಿರುವ ಋಷಿಗಳೆಲ್ಲ ಬಹಳ ಚಿಂತೆಗೊಳಗಾದರು. ಅವರು ಮಾಡುವ ಜಪ-ತಪಗಳಿಗೆ ಅವನಿಂದ ತೊಂದರೆಯಾಗುತ್ತಿದ್ದರೂ ಆ ರಾಕ್ಷಸನನ್ನು ಲಕ್ಷಿಸದೆ ಕೆಲದಿನ ಕಾಲ ಕಳೆದರು. ಬರಬರುತ್ತ ಅವರಿಗೆ ಆ ಪರ್ವತದಲ್ಲಿ ಇರುವದೇ ಅಸಾಧ್ಯವಾಯಿತು. ಹಲವು ಬಗೆಯಿಂದ ಅವರು ನಿರ್ವೀರ್ಯರಾದರು. ಒಟ್ಟಿನಮೇಲೆ ಆ ರಾಕ್ಷಸನ ಕಾಟದ ಕಾಲವು ಅವರಿಗೊಂದು ಕಷ್ಟದ ಕಾಲವೇ ಆಗಿತ್ತು.

ಜಗತ್ತಿನಲ್ಲಿ ಪ್ರತಿಯೊಂದು ಸಂಗತಿಯು ವರ್ತಿಸಲ್ಲು ಕೆಲವೊಂದು ಕಾಲವು ನಿಯಮಿತವಿರುತ್ತದೆ. ಅದರಂತೆಯೇ ಅದರ ನಾಶಕ್ಕೂ ಒಂದು

ಕಾಲವಿರುವದು ಆ ಕಾಲವನ್ನು ತಪ್ಪಿಸುವದು ಯಾವುದರಿಂದಲೂ ಸಾಧ್ಯವಿಲ್ಲ. ಅದೇ ಪ್ರಕಾರವಾಗಿ ಈ ರಾಕ್ಷಸನ ವಿಷಯವಾಗಿಯೂ ಅರಿಯಬಹುದು. ಋಷಿಗಳು ಎಷ್ಟೋ ವರ್ಷಗಳ ವರೆಗೆ ಅವನಿಂದಾಗುವ ತಾಪವನ್ನು ಸಹನ ಮಾಡಿದರು, ಸುರಕ್ಷಿತ ಸ್ಥಳವನ್ನು ಹುಡುಕಿಕೊಂಡು ಆ ಪರ್ವತದಲ್ಲಿ ಬೇರ ಕಡೆಗೆ ಇರಹತ್ತಿದರು ಅಲ್ಲಿಯೂ ರಾಕ್ಷಸನ ಬಾಧೆಯಾಗದಿರಲಿಲ್ಲ ಆಗ ಮಾತ್ರ ಋಷಿಗಳ ತಾಳ್ಮೆ ಕೆಡಹತ್ತಿತು ಅದರಿಂದ ಅವರ ಮನಸ್ಸು ಆ ರಾಕ್ಷಸನ ನಾಶಕ್ಕಾಗಿ ಹಾತೊರೆಯಹತ್ತಿತು. ಆ ಎಲ್ಲ ಋಷಿಗಳು— 'ನಾವು ಇದುವರೆಗೆ ಮಾಡಿದ ತಪಸ್ಸಿನ ಫಲ ಹೋದರೂ ಚಿಂತೆಯಿಲ್ಲ, ಮಾತ್ರ ಈ ದೈತ್ಯನ ಸಂಹಾರವು ಆಗಲೇಬೇಕು' ಎಂಬ ವಿಚಾರವುಳ್ಳವರಾದರು ಕಡೆಗೆ ಅವರು ತಮ್ಮ ಈ ಹವಣಿಕೆಯನ್ನು ಕೊನೆಗಾಣಿಸಿಕೊಳ್ಳುವದಕ್ಕಾಗಿ ವೈಕುಂಠಕ್ಕೆ ಹೋದರು ಅಲ್ಲಿ ಭಕ್ತಪರಿಪಾಲಕನೆಂಬ ಹುಟ್ಟು ಬಿರುದು ಉಳ್ಳ ಶ್ರೀಹರಿಯನ್ನು ಕಂಡರು ಆತನನ್ನು ಬಹುಪರಿಯಾಗಿ ಸ್ತೋತ್ರ ಮಾಡಿದರು. ತಮಗೆ ವೃಷಭಾಸುರನಿಂದ ಆಗುತ್ತಿದ್ದ ಉಪದ್ರವವನ್ನೆಲ್ಲ ಒಂದೂ ಬಿಡದೆ ಹೇಳಿದರು ಸಂತಾಪದಿಂದ ಆ ಶ್ರೀಹರಿಗೆ ಮೊರೆಯಿಟ್ಟರು ಆ ಸದ್ಗುಣಸ್ವರೂಪದ ಹರಿಯನ್ನು ಕಂಡು ಅವರೆಲ್ಲರು— "ನಾರಾಯಣಾ! ದಯಾನಿಧೆ! ಶರಣಾರ್ತರನ್ನು ರಕ್ಷಿಸುವವನೆಂಬದಾಗಿ ಹೊಗಳಿಸಿಕೊಳ್ಳುವವನೆ— ನಾವು ವಾಸವಾಗಿರುವ ಪರ್ವತದಲ್ಲಿ ವೃಷಭನೆಂಬ ದೈತ್ಯನಿರುವನು ಅವನು ಯಾವಾಗಲೂ ಕ್ರೂರ ಕರ್ಮಗಳನ್ನು ಕೈಕೊಂಡು ಆ ಪರ್ವತ ಪ್ರದೇಶದಲ್ಲೆಲ್ಲ ಸಂಚರಿಸುತ್ತಿರುವನು. ನಾವು ಮಾಡುವ ಹೋಮ-ಹವನಗಳಿಗೆಲ್ಲ ಅವನು ತೊಂದರ ಕೊಡುವನು. ಅವನ ರಾಕ್ಷಸೀಕೃತಿಗಳಿಂದ ನಾವೆಲ್ಲರೂ ಗತಿಗಾಣದವರಾಗಿರುವೆವು ದೇವಾ! ಇನ್ನು ಮೇಲೆ ನಾವು ಅವನ ಉಪಟಳವನ್ನು ಸಹಿಸಲಾರೆವು. ಅವನು ನಮಗೆ ಕೊಡುವ ಪೀಡಗಳನ್ನು ತಾಳಿಕೊಳ್ಳುವದಕ್ಕಿಂತ ನಮ್ಮ ಪ್ರಾಣ ಬಿಡುವದೇ ನಮಗೆ ಸುಖವೆನ್ನಿಸುವದು ದಯಾಸಾಗರ! ಇಷ್ಟೆಲ್ಲ ನಮ್ಮ ಹೀನಾವಸ್ಥೆಯನ್ನು ನಿಮಗೆ ತಿಳಿಸಿದೆವು. ಇನ್ನು ಮೇಲೆ ನೀನು ನಮ್ಮನ್ನು ರಕ್ಷಿಸಬೇಕು. ಆ ನೀಚ ದೈತ್ಯನನ್ನು ಸಂಹಾರಮಾಡಿ ನಿನಗಿದ್ದ 'ದುಷ್ಟದಮನ' ಎಂಬ ಹೆಸರನ್ನು ಜಗತ್ತಿನಲ್ಲಿ ಬೀರಬೇಕು. ವಿಪನ್ನಾವಸ್ಥ ಹೊಂದಿ ಪ್ರಾಣಬಿಡುವ

ನಮ್ಮನ್ನು ರಕ್ಷಿಸಿ 'ಶರಣಾಗತ ರಕ್ಷಕ' ಎಂಬ ನಿನ್ನ ಬಿರುದನ್ನು ಸಾರ್ಥಕ ವಾಗಿಮಾಡಿಕೊಳ್ಳು " ಎಂದು ಆ ಋಷಿಗಳೆಲ್ಲ ಕಂಗಾಲರಾಗಿ ಬಾಯ್ದೆರೆದು ಬೇಡಿಕೊಂಡರು. ಪುನಃ ಪುನಃ ಆ ಶ್ರೀಹರಿಯನ್ನು ವಂದಿಸಿದರು. ಮತ್ತು ಅವರು ಶ್ರೀಹರಿಯ ಮೇಲಿನ ತಮ್ಮ ಸತ್ತೆಯಿಂದ 'ಆ ದುಷ್ಟರಾಕ್ಷಸನನ್ನು ನೀನು ಕೊಲ್ಲಲಿಕ್ಕೇಬೇಕು' ಎಂದು ಹಟಹಿಡಿದರು. ಕೊನೆಗೆ ಶ್ರೀಹರಿಯ ಮುಖದಿಂದ ಅಭಯವಾಕ್ಯವು ಹೊರಡುವ ವರೆಗೆ ಅವರೆಲ್ಲರು ಕೈ ಮುಗಿದು ನಿಂತರು.

ತನ್ನನ್ನು ಅನನ್ಯಭಾವದಿಂದ ಮೊರೆಹೊಕ್ಕ ಋಷಿಗಳನ್ನೆಲ್ಲ ಭಗವಂತನು ತನ್ನ ಕೃಪಾದೃಷ್ಟಿಯಿಂದ ನೋಡಿದನು. ಅವರ ಕಷ್ಟಮಯ ಸ್ಥಿತಿಯನ್ನು ಕೇಳಿ ಆ ರಾಕ್ಷಸನ ಮೇಲೆ ಸಂತಪ್ತನಾದನು. ಅವನಲ್ಲಿ ಈಗ ಸಿಟ್ಟೆಂಬ ಬೆಂಕೆಯು ಪ್ರಜ್ವಲಿಸ ಹತ್ತಿತು ಆಗ ಅವನು ಆ ಋಷಿಗಳನ್ನು ಕುರಿತು— "ಒಳ್ಳೇದು ಇನ್ನು ನೀವೆಲ್ಲರು ನಿಮ್ಮ ನಿಮ್ಮ ಆಶ್ರಮಗಳಿಗೆ ಹೋಗಿರಿ. ಮನ ಸಿನಲ್ಲಿಯ ಅಂಜಿಕೆಯನ್ನು ಬಿಟ್ಟು ಬಿಡಿರಿ ನಾನು ಆ ನೀಚ ರಾಕ್ಷಸನನ್ನು ಸೀಳುವೆನು. ಇದುವರೆಗೆ ನಿಮಗೆ ಒದಗಿದ್ದ ಕಷ್ಟವನ್ನು ಮರೆಯಿರಿ ಇನ್ನು ಮುಂದೆ ಸುಖವಾಗಿ ಇರಿರಿ. ಆ ರಾಕ್ಷಸನ ಪ್ರಾಣಗಳನ್ನು ಹೀರುವದಕ್ಕೆ ನಾನು ಇಂದಿನಿಂದಲೇ ಸಿದ್ಧನಾದೆನೆಂದು ತಿಳಿಯಿರಿ " ಎಂದು ತನ್ನಲ್ಲಿ ಬಂದಂಥ ಋಷಿಗಳಿಗೆಲ್ಲ ಧೈರ್ಯ ಹೇಳಿದನು. ಹಾಗು ಅವರನ್ನೆಲ್ಲ ಭೂಲೋಕಕ್ಕೆ ಕಳಿ ಸಿದನು. ಬಳಿಕ ತಾನು ಅವಕಾಶ ಮಾಡದೆ ವೈಕುಂಠದಿಂದ ಇಳಿದು ವೃಷ ಭಾಸುರನು ಇದ್ದ ಪರ್ವತಕ್ಕೆ ಬಂದನು.

ಶ್ರೀಹರಿಯು ವೈಕುಂಠದಿಂದ ಭೂಲೋಕಕ್ಕೆ ಬಂದನು. ಭೂಲೋಕ ದಲ್ಲಿ ವೃಷಭಾಸುರನಿರುವ ಪರ್ವತಕ್ಕೆ ತೆರಳಿದನು. ಆ ವೃಷಭಾಸುರನಿರುವ ಸ್ಥಾನ–ನಿಟ್ಟುಗಳನ್ನು ನಿರೀಕ್ಷಿಸಿದನು.

ಆ ವೃಷಭಾಸುರನೆಂದರೆ ಸಾಮಾನ್ಯ ರಾಕ್ಷಸನಲ್ಲ. ಅವನು ಪ್ರತಿದಿನವೂ ತುಂಬುರ ತೀರ್ಥದಲ್ಲಿ ಸ್ನಾನಮಾಡಿ ನಾರಸಿಂಹ ಶಾಲಿಗ್ರಾಮವನ್ನು ಪೂಜಿಸುತ್ತಿದ್ದನು. ಅದೇ ಅವನ ಅಭೀಷ್ಟ ದೇವತೆಯಾಗಿತ್ತು. ಆ ಶಾಲಿಗ್ರಾಮ ಶಿಲೆಯಲ್ಲಿಯೇ ಶ್ರೀವಿಷ್ಣುದೇವನು ಇರುವನೆಂದು ಅವನ ದೃಢ

ನಂಬಿಗೆಯಿತ್ತು. ಆ ರಾಕ್ಷಸನು ತನ್ನ ಹದನವಾದ ಖಡ್ಗದಿಂದ ತನ್ನ ಶಿರಸ್ಸನ್ನು ಕತ್ತರಿಸಿಕೊಳ್ಳುತ್ತಿದ್ದನು. ಬಳಿಕ ಅದನ್ನೇ ನಾರಸಿಂಹ ಶಾಲಿಗ್ರಾಮಕ್ಕೆ ಹೂ ಎಂದು ಕಲ್ಪಿಸಿ ಏರಿಸುತ್ತಿದ್ದನು ಈ ಅವನ ಕ್ರಮವು ದಿನದಿನವೂ ನಡೆಯುತ್ತಿತ್ತು. ಆ ರಾಕ್ಷಸನ ಈ ಕೃತಿಯಿಂದ ಅವನ ಶಿರಸ್ಸು ಪುನಃ ಹುಟ್ಟುತ್ತಿತ್ತು. ಈ ಪ್ರಕಾರ ಆ ರಾಕ್ಷಸನ ೫ ಸಾವಿರ ವರುಷಗಳು ಕಳೆದವು. ಕೊನೆಗೆ ಆತನಿಗೆ ಸಾಕ್ಷಾತ್ ಶ್ರೀ ನಾರಸಿಂಹನೇ ಪ್ರತ್ಯಕ್ಷನಾದನು. ಆಗ ವೃಷಭಾಸುರನು ಆ ನಾರಸಿಂಹನಲ್ಲಿ ಮೋಕ್ಷ ಮೊದಲಾದವುಗಳನ್ನು ಅಪೇಕ್ಷೆ ಮಾಡಲಿಲ್ಲ ಸ್ವರ್ಗ ಮತ್ತು ಬ್ರಹ್ಮ ಪದವಿಯನ್ನು ಬೇಡಲಿಲ್ಲ. ಆತನು ಕೇವಲವಾಗಿ 'ದೇವಾ ನಾರಸಿಂಹ ನಿನ್ನ ಕೂಡ ನಾನು ಯುದ್ಧಮಾಡಬೇಕು ಎಂಬ ಆಸೆ ನನ್ನಲ್ಲಿ ಹುಟ್ಟಿದೆ ಈ ನನ್ನ ಇಚ್ಛೆಯನ್ನು ಪೂರ್ಣಮಾಡಬೇಕು.' ಎಂದು ಗರ್ವವೂ ನಮ್ರತೆಯೂ ಕೂಡಿದ ಮಾತಿನಿಂದ ವರವನ್ನು ಬೇಡಿದನು

ವೃಷಭಾಸುರನ ಬಯಕೆಯನ್ನು ನಾರಸಿಂಹನು ಒಪ್ಪಿದನು. ಹಾಗೂ ಆತನು 'ವೃಷಭಾ ಇನ್ನು ಸ್ವಲ್ಪದಿನಗಳಲ್ಲೇ ನಿನ್ನೊಡನೆ ಕಾದಿ ನಿನ್ನ ಆಶೆಯನ್ನು ಈಡೇರಿಸುವೆನು' ಎಂದು ಹೇಳಿದನು.

ಮೇಲೆ ಹೇಳಿದ ಬಲಶಾಲಿ ರಾಕ್ಷಸನ ಕೂಡ ನಾರಸಿಂಹಾವತಾರಿಕನಾದ ಶ್ರೀಹರಿಗೆ ಯುದ್ಧವು ಅನಿವಾರ್ಯವಾಯಿತು ಈ ಯುದ್ಧಕ್ಕೆ ಕೇವಲ ಋಷಿಗಳೇ ಕಾರಣವಾದರೂ ಜಗತ್ಕಲ್ಯಾಣವು ಮುಖ್ಯವಾಗಿದೆ.

ನಾರಸಿಂಹರೂಪಿಯಾದ ಹರಿಯು ವೃಷಭಾಸುರನಿರುವ ಗುಡ್ಡವನ್ನೇರಿ ಹೋದನು. ಅವನು ಅಲ್ಲಿಯ ಅರಣ್ಯವನ್ನು ಹುಡುಕಿದನು. ಒಂದು ಕಡೆಗೆ ಪರ್ವತದ ಹಾಗೆ ಬಿದ್ದುಕೊಂಡಿರುವ ಆ ರಾಕ್ಷಸನನ್ನು ಕಂಡನು. ರಾಕ್ಷಸನೂ ಸಹ ನಾರಸಿಂಹನನ್ನು ದುರದುರನೆ ನೋಡಿದನು ಶ್ರೀಹರಿಯು ಆತನನ್ನು ನೋಡಿ— 'ವೃಷಭಾ! ನೀನು ಹಿಂದಕ್ಕೆ ನನ್ನನ್ನು ಆರಾಧಿಸಿದಿ ನನ್ನಿಂದ ಯುದ್ಧದ ಭಿಕ್ಷೆಯನ್ನು ಬೇಡಿಕೊಂಡೆ ಆ ನಿನ್ನ ಆಶೆಯನ್ನು ಪೂರ್ಣ ಮಾಡುವದಕ್ಕಾಗಿ ಸದ್ಯಕ್ಕೆ ನಾನು ಇಲ್ಲಿಗೆ ಬಂದಿರುವೆ ನಿನ್ನಲ್ಲಿ ಯುದ್ಧ ಮಾಡುವ ಹಂಬಲವುನಾಶವಾಗಿ ನೀನು ಬಿದ್ದಿದ್ದರೂ ಕೂಡ ನಾನು ಕೇಳುವದಿಲ್ಲ. ಏಳು! ಏಳು! ಸಿದ್ಧನಾಗು ಏಳು! ಹೇಡಿಯಂತೆ ಬಿದ್ದುಕೊಂಡು

ಬಿಟ್ಟರೆ ನಿನ್ನ ಬಯಕೆ ಹೇಗೆ ಕೊನೆಗಾಣಬೇಕು? ಎಂದು ಮೂದಲಿಸಿದನು. ವೃಷಭಾಸುರನಿಗೆ ಶ್ರೀಹರಿಯ ಮಾತು ಕೇಳಿದಕೂಡಲೇ ಬಹಳ ಕೋಪ ಉಂಟಾಯಿತು. ತಾನು ಹಿಂದಕ್ಕೆ ನಾರಸಿಂಹನನ್ನು ಬೇಡಿಕೊಂಡ ಪ್ರಸಂಗ ವನ್ನು ನೆನಪಿಗೆ ತಂದುಕೊಂಡನು. ಆ ಕೂಡಲೆ ಅವನು ಶ್ರೀಹರಿಯನ್ನು ಕಂಡು ತನ್ನ ಬಾಹುಗಳನ್ನು ಚಪ್ಪರಿಸುತ್ತ ಯುದ್ಧಕ್ಕೆ ಅಣಿಯಾದನು. ಶ್ರೀಹರಿಯೂ ಅವನ ಮುಂದೆ ಬಂದು ನಿಂತನು.

ಹಿಂದಕ್ಕೆ ದೇವ–ದೈತ್ಯರ ಯುದ್ಧವಾಗಿತ್ತಷ್ಟೇ? ಆ ಯುದ್ಧದಲ್ಲಿ ಎಲ್ಲ ದೇವತೆಗಳೂ ಎಲ್ಲ ದೈತ್ಯರೂ ಭಾಗವಹಿಸಿದ್ದರು. ಈಗ ಶ್ರೀಹರಿ ಹಾಗು ವೃಷಭಾಸುರರ ಯುದ್ಧವೂಕೂಡ ದೇವ–ದೈತ್ಯರ ಯುದ್ಧವೆನಿಸಿದರೂ ಆಗಿ ನಂತೆ ಎಲ್ಲ ದೇವ–ದೈತ್ಯರು ಕೂಡಿರಲಿಲ್ಲ. ಆಗಿನ ಯುದ್ಧವು ಸಾಮೂಹಿಕ ಯುದ್ಧವೆನ್ನಿಸಿತ್ತು; ಈಗ ದೇವದೈತ್ಯರ ಒಂದೊಂದೇ ವ್ಯಕ್ತಿಯ ಯುದ್ಧದಂತೆ ಆಯಿತು.

ಯೋಧಕರಿಬ್ಬರೂ ಸರಿಯಾದ ಕಸುವಿನಿಂದ ಕಾಳಗಮಾಡ ಹತ್ತಿದರು. ಒಳ್ಳೇ ಚಮತ್ಕಾರವಾಗಿ ಹೋರಾಡಹತ್ತಿದರು. ಅವರ ಈ ಯುದ್ಧವನ್ನು ನೋಡುವದಕ್ಕೆ ದೇವತೆಗಳೆಲ್ಲ ಅಂತರಿಕ್ಷದಲ್ಲಿ ಬಂದು ನಿಂತರು. ಒಮ್ಮೊಮ್ಮೆ ಶ್ರೀಹರಿಯನ್ನು ಹಿಮ್ಮೆಟ್ಟಿಸಿ ಕಾದುವ ರಾಕ್ಷಸನ ಪರಾಕ್ರಮದಿಂದ ಆ ದೇವತೆ ಗಳಿಗೆಲ್ಲ ಭಯವೆನಿಸುತ್ತಿತ್ತು. ಬಹಳವೇಕೆ ? ಸಾಕ್ಷಾತ್ ಹರಿಯೂಕೂಡ ತನ್ನ ಒಂದಾನೊಂದುಕಾಲದ ಭಕ್ತನೂ ಸದ್ಯಕ್ಕೆ ಒಳ್ಳೆ ಶೂರನಾದ ವೈರಿಯೂ ಆಗಿದ್ದ ವೃಷಭಾಸುರನ ರಣಕುಶಲತೆಗೆ ಮೆಚ್ಚಿದನು. 'ಶಬಾಸ್ ವೃಷಭಾ' ಎಂದು ಆತನನ್ನು ಉತ್ಸಾಹಗೊಳಿಸಿದನು. ಆ ಉತ್ಸಾಹದಲ್ಲೇ ಆ ರಾಕ್ಷಸನು ಮತ್ತೂ ಮತ್ತೂ ಮುಂದರಿದು ಯುದ್ಧಮಾಡಹತ್ತಿದನು. ಶ್ರೀಹರಿಯು ತನ್ನ ಲೀಲಾಜಾಲದಿಂದ ಆ ಭಕ್ತನೊಡನೆ ಆತನ ಶಕ್ತಿಯು ಕುಂದುವವರೆಗೆ ಕಾದಿದನು. ತಾನು ಯುದ್ಧಮಾಡುತ್ತಲೆ ಆ ರಾಕ್ಷಸನಿಗೆ ತನ್ನ ಭಯಂಕರ ವಾದ ವಿಶ್ವರೂಪವನ್ನು ತೋರಿದನು. ಆದರೂ ಆ ದೈತ್ಯನು ಕಾದುವ ಭರದಲ್ಲಿ ಶ್ರೀಹರಿಯ ವಿಶ್ವರೂಪವನ್ನು ಅಣಕಿಸಿದನು. ತಾನೂ ತನ್ನ ರಾಕ್ಷಸ ಮಾಯೆಯಿಂದ ಪ್ರತಿವಿಶ್ವರೂಪವನ್ನು ನಿರ್ಮಿಸಿ ಹರಿಯೆದುರಿಗೆ ತೋರಿಸಿ ದನು. ಈ ಎರಡು ವಿಶ್ವರೂಪಗಳ ಹೋರಾಟ ಹಾಗು ದರ್ಶನದಿಂದ ದೇವ

ತೆಗಳು ಬೆರಗಾದರು ರಾಕ್ಷಸನ ಮಾಯೆಗೆ ಭಯಗೊಂಡರು. ಇಷ್ಟಾದರೂ ಯುದ್ಧ ಮುಗಿಯುವ ಲಕ್ಷಣ ತೋರಲಿಲ್ಲ. ವೃಷಭಾಸುರನಿಗೆ ಅಪಜಯ ವುಂಟಾಗುವ ಭಾಗವೂ ಕಾಣಿಸಲಿಲ್ಲ. ಆಗ ಶ್ರೀಹರಿಯು ಮನಸಿನಲ್ಲಿ 'ನಾನು ಇವನಿಗೆ ವರವನ್ನು ಕೊಟ್ಟಂತೆ ಇವನೊಡನೆ ಇದುವರೆಗೆ ಯುದ್ಧಮಾಡಿದೆನು. ಇನ್ನು ಆ ಋಷಿಗಳಿಗೆ ವಚನವನ್ನು ಕೊಟ್ಟಂತೆ ಈ ರಾಕ್ಷಸನನ್ನು ಸಂಹರಿಸ ಬೇಕು' ಎಂದು ವಿಚಾರಿಸಿದನು. ಅದರಂತೆ ತನ್ನ ಸುದರ್ಶನ ಚಕ್ರವನ್ನು ತೆಗೆದು ಆ ವೃಷಭಾಸುರನ ಮೇಲೆ ಪ್ರಯೋಗಿಸಲು ಸಿದ್ಧನಾದನು.

ವೃಷಭಾಸುರನು ಶ್ರೀಹರಿಯು ತನ್ನ ಚಕ್ರವನ್ನು ಸರಿಪಡಿಸುವ ಬಗೆ ಯನ್ನು ಕಂಡು ತನ್ನ ಮನಸಿನಲ್ಲಿ— 'ಈ ವಿಷ್ಣು ಚಕ್ರವನ್ನು ತಡೆಯುವದು ನನ್ನಿಂದಾಗುವದಿಲ್ಲ, ಇನ್ನು ಈತನಿಗೆ ಶರಣು ಹೋಗದೆ ಗತ್ಯಂತರವಿಲ್ಲ ಈ ಚಕ್ರವನ್ನು ನಾನು ಎದುರಿಸಿನಿಂತರೆ ನನ್ನ ಶಿರಸ್ಸು ಸಹಸ್ರ ಹೋಳಾಗುವದು ನಿಶ್ಚಯ. ಇನ್ನು ಇವನನ್ನು ಶರಣುಹೋಗಲೇಬೇಕು ಎಂದು ನಿರ್ಧಾರಮಾಡಿ ದನು. ಮತ್ತು ಆಕೂಡಲೇ ತಾನು ಯುದ್ಧಮಾಡುವ ಹವಣಿಕೆಯನ್ನು ಬಿಟ್ಟು ಕೈಕಟ್ಟಿಕೊಂಡು ಶ್ರೀಹರಿಯಮುಂದೆ ಬಂದು ನಿಂತನು. ಶ್ರೀಹರಿಯ ರೂಪವನ್ನು ಕಣ್ದುಂಬ ನೋಡಿ ಆ ರಾಕ್ಷಸನು— 'ದೇವಾ! ಚಕ್ರಪಾಣಿಯೇ! ಶ್ರೀಹರಿಯೇ! ನಿನಗೆ ನನ್ನ ಅನಂತ ವಂದನೆಗಳು ನಾನು ತಿಳಿಗೇಡಿಯಾಗಿ ನಿನ್ನಕೂಡ ಯುದ್ಧಬಯಸಿ ಕಾದಿದೆನು ಆದರೂ ನನ್ನ ಬಹುದಿವಸದ ಆಶೆ ತೀರಿದಂತಾಯಿತು ಇನ್ನುಮೇಲೆ ನಿನ್ನ ಕೈಯಿಂದ ನಾನು ಮರಣವೊಂದನ್ನೆ ಅಪೇಕ್ಷಿಸುತ್ತೇನೆ. ನೀನು ಕರದಲ್ಲಿ ಧರಿಸಿರುವ 'ಸುದರ್ಶನ'ವು ಆ ನನ್ನ ಅಪೇಕ್ಷೆಯನ್ನು ಪೂರ್ಣಮಾಡಲು ಸಿದ್ಧವಾಗಿದೆ. ಈ ನಿನ್ನ ಚಕ್ರದಿಂದ ಹತ ನಾದವನು ಭವಚಕ್ರದಿಂದ ಮುಕ್ತನಾಗಿ ಕಲ್ಪಾಂತ್ಯದವರೆಗೂ ಕೀರ್ತಿವಂತ ನಾಗುವನಂತೆ ಆ ಸುಯೋಗವು ಇಂದು ನನಗೆ ನಿನ್ನ ಕೃಪೆಯಿಂದ ಪ್ರಾಪ್ತ ವಾಯಿತು. ಈ ನಿನ್ನ ಚಕ್ರದಿಂದ ನನ್ನ ಪಂಚಪ್ರಾಣಗಳನ್ನು ಹೀರು; ನನ್ನನು ಈ ಭವದಿಂದ ದೂರಮಾಡು ಹಾಗು ಇದುವರೆಗೆ ಕ್ರೂರಕರ್ಮಗಳಿಗೆ ಆಸ್ಪದವಾಗಿದ್ದ ಈ ನನ್ನ ದೀರ್ಘ ದೇಹವನ್ನು ನೆಲಕ್ಕೆ ಉರುಳಿಸು. ನಿನ್ನ ಚಕ್ರವನ್ನು ಪ್ರಯೋಗಿಸಿ ಇದನ್ನು ದಹಿಸಿಬಿಡು! ದೇವಾ! ಎಂದು ವೃಷಭಾ ಸುರನು ಶ್ರೀಹರಿಯನ್ನು ನಮಸ್ಕರಿಸುತ್ತ ಬೇಡಿಕೊಂಡನು.

ಶ್ರೀಹರಿಯು ವೃಷಭಾಸುರನ ಬಯಕೆಯನ್ನು ಚಕ್ರದಿಂದ ಪೂರ್ಣ ಮಾಡುವ ಮೊದಲೇ ರಾಕ್ಷಸನು ತನ್ನ ಕೊನೆಯ ಬೇಡಿಕೆಯನ್ನು ಶ್ರೀಹರಿಗೆ ವಿದಿತಪಡಿಸಿದನು. ಅದೇನೆಂದರೆ— 'ದೇವಾ! ಈ ಪರ್ವತ ಪ್ರದೇಶವು ಇದುವರೆಗೆ ನನಗೆ ಒಳ್ಳೇ ಆಶ್ರಯವನ್ನು ಕೊಟ್ಟಿತು. ಜಗತ್ತಿನಲ್ಲಿ ನನ್ನ ಖ್ಯಾತಿಯು ನನಗೆ ರಕ್ಷಣೆಯನ್ನು ಕೊಟ್ಟಿದ್ದು ಈ ಪರ್ವತದಿಂದಲೇ ಉಂಟಾಯಿತು ಕೊನೆಗೆ ಸಾಕ್ಷಾತ್ ನಿನ್ನ ಕರದಿಂದಲೇ ನನ್ನ ಪಂಚಪ್ರಾಣಗಳು ಈ ದೇಹದಿಂದ ದೂರಾಗಿ ಮುಕ್ತಿಗೆ ಹೊರಟ ಸ್ಥಾನವೂ ಈ ಪರ್ವತವಾಯಿತು. ಅಂದಮೇಲೆ ನನ್ನ ವಾಸವಾಗಿದ್ದ ಈ ಸ್ಥಾನಕ್ಕೆ ನನ್ನ ಹೆಸರನ್ನಿಟ್ಟು ಇನ್ನು ಮುಂದೆ ಅದು ಎಲ್ಲರಿಂದಲೂ 'ವೃಷಭಾಚಲ' ಎಂದು ಕರೆಯಿಸಿಕೊಳ್ಳಬೇಕು ಇಂಥ ವರವನ್ನು ದಯಪಾಲಿಸಬೇಕು' ಎಂದು ಅಪೇಕ್ಷಿಸಿ ಶ್ರೀಹರಿಯ ಪಾದ ಗಳಿಗೆ ದಂಡವತ್ ನಮಸ್ಕರಿಸಿದನು

ಶ್ರೀಹರಿಯು ಭಕ್ತ ವೃಷಭನನ್ನು ಕುರಿತು— ವೃಷಭಾ! ಈ ನಿನ್ನ ಮನೋರಥವು ಈಡೇರಲಿ ಎಂದು ಆಶೀರ್ವಾದವಿತ್ತನು.

ಶ್ರೀಹರಿಯ ಕೃಪೆಗೆ ಪಾತ್ರನಾದ ವೃಷಭರಾಕ್ಷಸನು ಆ ಕೂಡಲೆ ಹರಿಯ ಪಾದಗಳ ಮೇಲೆ ಬಿದ್ದು ಉರುಳಾಡಿ ದೇಹಬಿಟ್ಟನು.

ಈ ಮೇಲೆ ಹೇಳಿದ ವೃಷಭಾಸುರನ ನಿಮಿತ್ತವಾಗಿಯೇ ವೈಕುಂಠ ಪರ್ವತಕ್ಕೆ 'ವೃಷಭಾಚಲ' ಎಂಬ ಹೆಸರು ಕೃತಯುಗದಲ್ಲಿ ಉಂಟಾಯಿತು.

## ತ್ರೇತಾಯುಗದ ಅಂಜನಾಚಲವು

ಇನ್ನು ತ್ರೇತಾಯುಗದಲ್ಲಿ ಈ ವೈಕುಂಠ ಪರ್ವತಕ್ಕೆ 'ಅಂಜನಾಚಲ' ಎಂಬ ಹೆಸರು ಇದ್ದಿತು. ಈ ಹೆಸರು ಉಂಟಾಗಲು ಕಾರಣವೆಂದರೆ—

ಆ ಯುಗದಲ್ಲಿ ವಾನರರಲ್ಲಿ ವೀರನಾದ ಕೇಸರಿ ಎಂಬಾತನಿದ್ದನು. ಅವನಿಗೆ 'ಅಂಜನೆ' ಎಂಬವಳು ಪ್ರೇಮದ ಹೆಂಡತಿಯಿದ್ದಳು. ಎಷ್ಟೋ ದಿನ ಗಳ ವರೆಗೆ ಆ ದಂಪತಿಗಳ ಹೊಟ್ಟೆಯಿಂದ ಮಕ್ಕಳಾಗಲಿಲ್ಲ. ಇನ್ನು ತಮಗೆ 'ಪರಲೋಕದ ಹಾದಿಯೇ ಕಟ್ಟಾಯಿತು' ಎಂದು ಆ ದಂಪತಿಗಳಿಗೆ ಭಾವನೆ

ಯುಂಟಾಯಿತು ಈ ಭಯದಿಂದ ಅವರು ಬಹಳ ದುಃಖಿತರಾಗಿದ್ದರು. ತಮ್ಮ ಇಹಜನ್ಮ ಸಾರ್ಥಕವಾಗಿ ಏನುಮಾಡಬೇಕು? ಎಂದು ಅವರಿಗೆ ತಿಳಿಯದಾಯಿತು ಕೊನೆಗೆ ಅವರು ತಮ್ಮ ಗುರು ಮತಂಗ ಋಷಿಯ ಬಳಿಗೆ ಹೋಗಿ ತಮ್ಮ ವ್ಯಸನ ತಿಳಿಸುವದನ್ನು ಗೊತ್ತುಮಾಡಿದರು

ಬಳಿಕ ಒಂದು ದಿವಸ ಆ ದಂಪತಿಗಳು ಸಮೀಪದಲ್ಲಿದ್ದ ಮತಂಗರ ಆಶ್ರಮಕ್ಕೆ ಹೋದರು. ಮಕ್ಕಳ ಚಿಂತೆಯಿಂದ ಕೊರಗುವ ಅವರನ್ನು ಕಂಡು ಋಷಿಯು ಅವರನ್ನು ಬರಮಾಡಿಕೊಂಡನು. ಹಾಗು ಅವರು ತನ್ನಲ್ಲಿ ಬಂದ ಕಾರಣವನ್ನು ವಿಚಾರಿಸಿದನು.

ಆಗ ದಂಪತಿಗಳು ತಮ್ಮ ಮನಸಿನ ದುಗುಡವನ್ನೆಲ್ಲ ಆ ಋಷಿಗಳಿಗೆ ತಿಳಿಸಿದರು ತಮ್ಮ ಜೀವನ ಸಾರ್ಥಕತೆಗೆ ಏನುಮಾಡಬೇಕು ಎಂಬದಾಗಿಯೂ ಕೇಳಿದರು. ಅದಕ್ಕೆ ಋಷಿಯು ಅಂಜನೆಯನ್ನು ಕುರಿತು— 'ಅಂಜನಾದೇವಿ ಭೂಲೋಕದಲ್ಲಿ 'ಪಂಪಾ' ಎಂಬ ಹೆಸರಿನ ಸರೋವರವಿದೆ. ಅದರ ಪೂರ್ವಕ್ಕೆ ಐವತ್ತು ಹರದಾರಿಯಮೇಲೆ ನಾರಸಿಂಹನ ಆಶ್ರಮವು ಇರುವದು, ದಕ್ಷಿಣದಲ್ಲಿ ನಾರಾಯಣ ಗಿರಿಯು ಇರುವದು. ಆ ಗಿರಿಯ ತಟದಲ್ಲಿ 'ಸ್ವಾಮಿತೀರ್ಥ' ಎಂಬ ಪುಣ್ಯ ತೀರ್ಥವಿದೆ. ಹಾಗು 'ಆಕಾಶಗಂಗೆ' ಎಂಬ ತೀರ್ಥವೂ ಇರುವದು. ಅಂಜನಾದೇವಿ! ನೀನು ಆ ಪುಣ್ಯಕರ ತೀರ್ಥಗಳಲ್ಲಿ ಸ್ನಾನವನ್ನು ಮಾಡುತ್ತ ಹನ್ನೆರಡು ವರುಷಗಳನ್ನು ಕಳೆಯಲು ನಿನ್ನ ಮನಸ್ಸಿನ ಬಯಕೆಯಂತೆ ಒಳ್ಳೆ ಫಲವು ದೊರಕುವದು ಅಂದರೆ ಇದರ ಅರ್ಥವಿಷ್ಟೇ ನಿನ್ನ ಹೊಟ್ಟೆಯಿಂದ ಮಹಾಗುಣ–ಬಲಶಾಲಿಯಾದ ಮಗನೊಬ್ಬನು ಹುಟ್ಟುವನು' ಎಂಬ ಭವಿಷ್ಯವನ್ನು ಹೇಳಿದನು

ಮತಂಗ ಋಷಿಯ ವಚನದಿಂದ ಸಂತೋಷಭರಿತರಾದ ಕೇಸರಿ ಅಂಜನೆಯರು ಅಲ್ಲಿಂದ ಹಿಂತಿರುಗಿದರು.

ಮತಂಗರ ಹೇಳಿಕೆಯಂತೆ ಅಂಜನಾದೇವಿಯು ಕೂಡಲೇ ನಾರಾಯಣ ಗಿರಿಗೆ ತೆರಳಿದಳು. ಅಲ್ಲಿ ಪ್ರತಿದಿನವೂ ಸ್ವಾಮಿತೀರ್ಥದಲ್ಲಿ ಸ್ನಾನಮಾಡುವಳು. ಅಶ್ವತ್ಥವೃಕ್ಷವನ್ನು ಸುತ್ತರಿಯುವಳು, ವರಾಹ ರೂಪಿಯಾದ ಶ್ರೀಹರಿಯನ್ನು ಭಕ್ತಿಯಿಂದ ಆರಾಧಿಸುವಳು. ಆಕಾಶಗಂಗೆಯಲ್ಲಿ ಪುನೀತಳಾಗಿ

ತಪಸ್ಸನ್ನು ಕೈಕೊಳ್ಳುವಳು ಈಪ್ರಕಾರವಾಗಿ ಆಕೆಯ ನಿತ್ಯಕ್ರಮವು ನಡೆಯಿತು. ಅದರಲ್ಲಿ ಏನೊಂದು ತೊಂದರೆ ಉಂಟಾಗಲಿಲ್ಲ. ಊಟದಲ್ಲಿ ಕಡಿಮೆಮಾಡುತ್ತ ಕೊನೆಗೆ ಆಹಾರ ಸ್ವೀಕರಿಸುವದನ್ನೇ ಬಿಟ್ಟು ಬಿಟ್ಟಳು. ದೈಹಿಕ ಸುಖಗಳನ್ನೆಲ್ಲ ಮರೆತುಬಿಟ್ಟಳು ತಡೆಯ-ಲಿಕ್ಕೆ ಅಶಕ್ಯವೆನಿಸುವ ಮನಸ್ಸನ್ನು ತಡೆದಳು. ಹೀಗೆ ಅವಳು ಒಂದು ವರುಷದ ವರೆಗೆ ತಪವನ್ನು ಆಚರಿಸಲು ಅವಳು ಶರೀರದಿಂದ ಕೊರಗಿ ಸೊರಗಿದಂತಾದಳು. ಆಕೆಗೆ ಸಾಕ್ಷಾತ್ ವಾಯುದೇವನೇ ದಿನದಿನಕ್ಕೂ ಪಾಯಸ ಪ್ರಸಾದವನ್ನು ತಂದು ಅವಳ ಕೈಯಲ್ಲಿ ಬೀಳುವಂತೆ ಚಲ್ಲಹತ್ತಿದನು. ಆಕೆಗೆ ಇಚ್ಛೆಯಿಲ್ಲದೆ ಹಾಗು ಶ್ರಮವಿಲ್ಲದೆ ತನಗೆ ದೊರಕುತ್ತಿರುವ ಪ್ರಸಾದ ಸ್ವೀಕರಿಸಿ ಶಾಂತಳಾಗಿ ಇರಹತ್ತಿದಳು. ಇದು ದೇವನು ತನಗೆ ಕೊಟ್ಟ ಫಲವೆಂದೇ ಅವಳ ಭಾವನೆಯಾಗುತ್ತಿತ್ತು. ಹೀಗೆ ಅವಳ ನಿತ್ಯದ ಕ್ರಮವಾಗಿತ್ತು. ಅಂಜನಾದೇವಿಯು ಮೇಲೆ ಹೇಳಿದ ಪ್ರಕಾರ ತಪಸ್ಸಿನಿಂದ ಕಾಲಕಳೆಯುತ್ತಿರಲು ಮುಂದೆ ಅವಳ ಪ್ರಯತ್ನಕ್ಕೆ ಪೂರ್ಣ ಫಲದೊರೆಯುವ ಕಾಲಉಂಟಾಯಿತು. ವಾಯುವು ಆಕೆಯ ತಪಸ್ಸಿಗೆ ಮೆಚ್ಚಿ ಅವಳ ಮನಸ್ಸಿನ ಬಯಕೆಯನ್ನು ಪೂರ್ಣ ಮಾಡಲು ಒಂದು ಪಾಯಸ ಪಾತ್ರೆಯನ್ನು ಪ್ರಸಾದವೆಂದು ಕಳಿಸಿಕೊಟ್ಟನು. ಅಂಜನಾದೇವಿಯು ಆ ಪೂರ್ಣಪ್ರಸಾದವನ್ನು ಭಕ್ಷಿಸಿಯೇ ಬಿಟ್ಟಳು. ದಿನದ ಪ್ರಸಾದಕ್ಕಿಂತಲೂ ಅಂದು ದೊರೆತದ್ದು ಆಕೆಗೆ ಬಲು ಮಧುರವೆನಿಸಿತು ಅದನ್ನು ಸ್ವೀಕರಿಸಲು ಆ ಹೊತ್ತೇ ಅಂಜನಾದೇವಿಗೆ ಗರ್ಭಧಾರಣವಾಯಿತು. ತನ್ನ ಗರ್ಭವು ಬೆಳೆಯುತ್ತಿರುವ ಚಿಹ್ನ ನೋಡಿಕೊಂಡು ಅವಳಿಗೆ ಹಿಡಿಸಲಾರದಷ್ಟು ಸಂತೋಷವಾಗಹತ್ತಿತು ಮತಂಗ ಋಷಿಗಳ ಹೇಳಿಕೆಯಂತೆ ತಾನು ಮಾಡಿದ ತಪಸ್ಸಿನ ಫಲವು ತೀವ್ರವಾಗಿಯೇ ದೊರೆಯುವದೆಂದು ಅವಳಿಗೆ ಭರವಸಯಾಯಿತು ಆ ಹಿಗ್ಗಿನಲ್ಲೇ ಆಕೆಯ ಗರ್ಭಕ್ಕೆ ಒಂಭತ್ತು ತಿಂಗಳುಗಳು ತುಂಬಿದವು. ಮುಂದೆ ತುಸು ದಿನಗಳಲ್ಲೆ ನೋಡಿದವರ ಕಣ್ಣನ್ನು ಕುಕ್ಕಿಸುವ ಗಂಡುಮಗನು ಆಕೆಯ ಹೊಟ್ಟೆಯಿಂದ ಹುಟ್ಟಿದನು.

ಅಂಜನಾದೇವಿಯು ಗಂಡುಮಗುವನ್ನು ಹಡೆದ ಸುದ್ದಿಯು ಆಕೂಡಲೆ ಎಲ್ಲ ಆಶ್ರಮವಾಸಿ ಋಷಿಗಳಿಗೆ ಗೊತ್ತಾಯಿತು. ಎಲ್ಲರಿಗೂ ಎಂದೂ ಹೊಂದದೆ ಇದ್ದಂಥ ಆನಂದವಾಯಿತು! ಮತಂಗ ಋಷಿಯು ತೀವ್ರವೆ

ಅಂಜನಾದೇವಿಯಿದ್ದಲ್ಲಿಗೆ ವಾನರವೀರ ಕೇಸರಿಯನ್ನು ಕೂಡಿಕೊಂಡು ಬಂದನು ಕೂಸನ್ನು ಕಂಡರು ಒಳ್ಳೇ ಹರುಷವನ್ನು ಹೊಂದಿದರು ವೇದೋಕ್ತವಾಗಿ ಮಗುವಿಗೆ ಜನನ ಸಂಸ್ಕಾರ ವಿಧಿಯನ್ನು ಮಾಡಿದರು. ಮಗುವು ಒಳ್ಳೆ ಮನೋಹರವಾಗಿದ್ದು ಎಲ್ಲ ಲಕ್ಷಣಗಳಿಂದ ಕೂಡಿತ್ತು. ಅದರ ಗದ್ದವು ಉದ್ದವಾಗಿದ್ದುದರಿಂದ ಆ ಕೂಸಿಗೆ 'ಹನು' ಎಂದರೆ ಉದ್ದವಾದ ಗದ್ದವುಳ್ಳವನಾದ್ದರಿಂದ ಕೂಸಿಗೆ 'ಹನೂಮಂತ' ಎಂದು ನಾಮಕರಣ ಮಾಡಿದರು ಸಂಭ್ರಮದಿಂದ ಜನನೋತ್ಸವವನ್ನು ಜರುಗಿಸಿದರು

ಮೇಲೆ ಬರೆದ ಪ್ರಕಾರವಾಗಿ ಅಂಜನಾದೇವಿಯು ಆ ವೈಕುಂಠಗಿರಿಯಲ್ಲಿ ತಪಸ್ಸುಮಾಡಿದಳು. ಹಾಗು ತನ್ನ ತಪಸ್ಸಿನ ಫಲವಾಗಿ 'ಹನೂಮಂತ' ಎಂಬ ಸತ್ಪುತ್ರನನ್ನು ಪಡೆದಳು ಆದುದರಿಂದ ಈ ಗಿರಿಯನ್ನು ಅಂದಿನಿಂದ ಅಂಜನಾದೇವಿಯ ಹೆಸರಿನಿಂದ ಕರೆಯ ಹತ್ತಿದರು ಈ ಬಗೆಯಾಗಿ ತ್ರೇತಾಯುಗದಲ್ಲಿ ವೈಕುಂಠಪರ್ವತಕ್ಕೆ 'ಅಂಜನಾಚಲ' ಎಂಬ ಹೆಸರು ಉಂಟಾಯಿತು

## ದ್ವಾಪರಯುಗದ ಶೇಷಾಚಲವು

ಹಿಂದೆ ಹೇಳಿದಂತೆ ವೈಕುಂಠಗಿರಿಯು ಕೃತಯುಗದಲ್ಲಿ 'ವೃಷಭಾಚಲ' ಎಂಬ ಹೆಸರನ್ನು ಹೊಂದಿತು; ತ್ರೇತಾಯುಗದಲ್ಲಿ 'ಅಂಜನಾಚಲ'ಎಂದು ಪ್ರಸಿದ್ಧವಾಯಿತು. ಇನ್ನು ಮುಂದೆ ದ್ವಾಪರಯುಗದಲ್ಲಿ ಇದೇ ಪರ್ವತವು 'ಶೇಷಾಚಲ' ಎಂಬದಾಗಿ ಮೆರೆಯಿತು ಈ ಹೆಸರು ಉಂಟಾಗಲು ಕಾರಣವೇನಂದರೆ—

ವೈಕುಂಠಾಧಿಪನಾದ ಶ್ರೀವಿಷ್ಣುವು ಒಂದುದಿನ ತನ್ನ ವೈಕುಂಠಮಂದಿರದಲ್ಲಿ ತನ್ನ ಪತ್ನಿ ಲಕ್ಷ್ಮೀಸಮೇತ ಕುಳಿತಿರುವನು ತನ್ನ ಮಂದಿರದಲ್ಲಿ ಹೊರಗಿನಿಂದ ಯಾರೂ ಆ ಕಾಲಕ್ಕೆ ಬರಬಾರದೆಂದು ಆತನು ಆದಿಶೇಷನನ್ನು ಆದ್ವಾರಕ್ಕೆ ಪಾಲಕನನ್ನಾಗಿ ನೇಮಿಸಿದ್ದನು. ಹಾಗು ಅವನಿಗೆ 'ಯಾರನ್ನೂ ಯಾವ ಕಾರಣದಿಂದಲೂ ಒಳಗೆ ಬಿಡಬಾರದು' ಎಂದು ಕಟ್ಟಪ್ಪಣೆ ವಿಧಿಸಿದ್ದನು.

ಆದಿಶೇಷನು ದ್ವಾರರಕ್ಷಕನಾಗಿ ವೈಕುಂಠಮಂದಿರದ ದ್ವಾರಕಾಯ ಹತ್ತಿದನು ಆಗ ಪ್ರಾಣೇಶವಾಯುವು ಆ ವಿಷ್ಣುವಿನ ದರ್ಶನಕ್ಕಾಗಿ ಅಲ್ಲಿಗೆ

ಬಂದನು. ನೆಟ್ಟಗೆ ವೈಕುಂಠಮಂದಿರದ ಬಾಗಿಲಕ್ಕೇ ಹೋದನು. ಅಲ್ಲಿ ಕಾವಲುಮಾಡುತ್ತಿದ್ದ ಆದಿಶೇಷನನ್ನು ಕೇಳಿ ಒಳಗೆ ಹೋಗಬೇಕೆಂದು ಅಪ್ಪಣೆ ಕೇಳಿದನು. ಆಗ ಶೇಷನು ಅವನನ್ನು ಒಳಗೆ ಹೋಗಲು ತಡೆದನು. ತನ್ನ ಕೈಯಲ್ಲಿಯ ಹೇಮದಂಡದಿಂದ ವಾಯುವನ್ನು 'ಮುಂದೆ ಅಡಿ ಇಡತಕ್ಕದ್ದಲ್ಲ' ಎಂದು ಅಡ್ಡಿಮಾಡಿದನು ಆಗ ವಾಯುವು ಬಲು ಸಿಟ್ಟಾಗಿ— ಶೇಷ ! ನಾನು ಸಾಕ್ಷಾತ್ ಶ್ರೀಹರಿದರ್ಶನಕ್ಕಾಗಿ ಬಂದಿರುವೆನು. ಈಗ ನೀನು ನನ್ನನ್ನು ತಡೆಯುವದು ನಿನ್ನ ಮೂರ್ಖತನವಾಗುವದು ಹಿಂದಕ್ಕೆ ಇದೇ ವೈಕುಂಠ ದ್ವಾರದ ಕಾವಲು ಮಾಡುತ್ತಿದ್ದ ಜಯ–ವಿಜಯರ ಅವಸ್ಥೆ ಏನಾಯಿ ತೆಂಬದು ನಿನಗೆ ತಿಳಿದಿರಲಿಲ್ಲವೇ ? ಅವರು ಸನಕಾದಿ ಋಷಿಗಳನ್ನು ತಡೆದು ಶಾಪಹೊಂದಿ ರಾಕ್ಷಸ ಜನ್ಮಹೊಂದಿದರು ಅದೇ ಹಾಡು ನಿನಗೆ ದೊರಕೀತು. ಎಚ್ಚರವಿರಲಿ ! " ಎಂದು ಗರ್ವಯುಕ್ತ ನುಡಿಗಳನ್ನಾಡಿದನು.

ವಾಯುವಿನ ಮಾತುಕೇಳಿ ಶೇಷನಿಗೆ ಬಲು ಕೋಪ ಬಂದಿತು. ಆಗ ತನ್ನ ದೊಡ್ಡಿಸ್ತಿಕೆಯಿಂದ ಶೇಷನು— ' ಎಲೈ ವಾಯುವೆ ! ನೀನು ಸಿಕ್ಕಲ್ಲಿ ಹೊಕ್ಕು ಅವಮಾನಕ್ಕೆ ಗುರಿಯಾಗುವಿ ನನ್ನ ಬಲಕ್ಕೆ ನಿನ್ನ ಬಲವು ಸರಿ ಯಾಗಲಾರದು ಜ್ಞಾನ–ವೈರಾಗ್ಯಗಳಲ್ಲಿಯೂ ವಿಷ್ಣುಭಕ್ತಿಯಲ್ಲಿಯೂ ನೀನು ನನ್ನನ್ನು ಸರಿಗಟ್ಟಲಾರಿ. ನಾನು ಸಾಕ್ಷಾತ್ ಶ್ರೀಹರಿಯ ಅಂತಃ ಪುರವಾಸದಲ್ಲಿ ಆತನಿಗೆ ಮೃದು ತಲ್ಪನಾಗಿ ನನ್ನ ಭಕ್ತಿಭಾವವನ್ನು ನೀಡು ವೆನು. ಇದರಿಂದಲೂ ನಾನು ಆ ಶ್ರೀಹರಿಗೆ ಶಿಶುವಿನಂತೆ ವಾತ್ಸಲ್ಯವುಳ್ಳವ ನಾಗಿರುವೆನು. ನಾನು ಜಗತ್ಕಲ್ಯಾಣಕ್ಕಾಗಿ ಆ ಶ್ರೀಹರಿಯ ಅಪ್ಪಣೆಯನ್ನು ಪಡೆದು ದ್ವಾರವನ್ನು ಕಾಯುತ್ತಿರುವೆನು. ಈ ಎಲ್ಲ ರೀತಿಯಿಂದ ನಾನು ಅಸಾಮಾನ್ಯನಾಗಿರುವೆನು. ನನ್ನನ್ನು ಯಾವ ಬಗೆಯಿಂದಲೂ ಎದುರಿಸ ಲಾರೆ. ಅಂಥ ಸಾಮರ್ಥ್ಯವೂ ನಿನ್ನಲ್ಲಿ ಇರುವದಿಲ್ಲ ಇನ್ನುಮೇಲೆ 'ಬಂದ ದಾರಿಗೆ ಸುಂಕವಿಲ್ಲ' ಎಂಬಂತೆ ನೀನು ಇಲ್ಲಿಂದ ಹಿಂದೆ ತಿರುಗುವದೇ ಲೇಸು. ಇಲ್ಲವಾದರೆ ಬಲು ಕಷ್ಟ–ನಷ್ಟಗಳಿಗೆ ಒಳಗಾಗಬೇಕಾದೀತು. " ಎಂದು ತನ್ನ ಆತ್ಮಪೌರುಷವನ್ನು ಮುಂದೆ ಇಟ್ಟುಕೊಂಡು ವಾಯುವನ್ನು ಹೀಯಾ ಳಿಸಿ ನುಡಿದನು.

ಶೇಷನು ತನ್ನನ್ನು ಜರೆದು ಆಡಿದ ನುಡಿಗಳನ್ನು ಕೇಳಿ ವಾಯುವು ಆ ಶೇಷನ ತಿಳಿಗೇಡಿತನವನ್ನು ತನ್ನ ಬುದ್ಧಿಯ ಮಾತುಗಳಿಂದ ಕಳೆಯಲು ಪ್ರಯತ್ನಮಾಡಿದನು. ಅದೆಲ್ಲವೂ ವ್ಯರ್ಥವಾಯಿತು. ಶೇಷನ ಬಿರುಸು ಮಾತುಗಳು ಹೆಚ್ಚಿ ಕಡೆಗೆ ವಾಯುವಿನ ತಾಳ್ಮೆಯನ್ನು ಮೀರಿಸಿದವು ಅವರಿಬ್ಬರಲ್ಲಿ ವಾದ-ವಿವಾದವು ಬೆಳೆಯಿತು. ಕರ್ಕಶ–ಕಠೋರ ಮಾತುಗಳು ಉಚ್ಚರಿಸಲ್ಪಡಹತ್ತಿದವು ಅವರ ಆ ವಿಕ್ರೋಶದ ನುಡಿಗಳು ಹವೆಯ ತೆರೆಗಳೊಡನೆ ಬೆರೆತು ಹರಿಮಂದಿರದ ಅಂತಃಪುರವನ್ನು ಸೇರಿದವು ಲಕ್ಷ್ಮೀ ಮಹಾದೇವಿಯ ಕಿವಿಗಳನ್ನು ಸೇರಿದವು. ಆ ಕೂಡಲೇ ಲಕ್ಷ್ಮೀದೇವಿಯು ತನ್ನ ಪತಿಗೆ ಆ ಶೇಷ-ವಾಯುಗಳ ಜಗಳಾಟ ನಡೆದದ್ದನ್ನು ತಿಳಿಸಿದಳು. ಇಷ್ಟೇ ಅಲ್ಲ ಅವಳು ತನ್ನ ಪತಿಗೆ— 'ನೀವು ಈಗಲೇ ದ್ವಾರದ ವರೆಗೆ ಹೋಗಿರಿ, ಆ ಶೇಷ–ವಾಯುಗಳ ನ್ಯಾಯವನ್ನು ಬಗೆಹರಿಸಿರಿ; ಅವರಿಬ್ಬರಲ್ಲಿ ಪ್ರೇಮ ಸಮನ್ವಯವುಂಟಾಗುವಂತೆಮಾಡಿರಿ' ಎಂದು ಬೇಡಿಕೊಂಡಳು

ಲಕ್ಷ್ಮೀದೇವಿಯು ನುಡಿದ ಮಾತುಗಳನ್ನು ಕೇಳಿ ಶ್ರೀಹರಿಯು ಕೂಡಲೆ ಗರುಡನನ್ನು ಆಹ್ವಾನಿಸಿದನು ಅಷ್ಟರಲ್ಲೇ ಗರುಡನು ಬರಲು ಅದನ್ನೇರಿ ಹರಿಯು ಮಹಾದ್ವಾರಕ್ಕೆ ಬಂದನು ಶೇಷ–ವಾಯುಗಳು ತೆಕ್ಕೆಮುಕ್ಕೆ ಬಿದ್ದು ಒಬ್ಬರನ್ನೊಬ್ಬರು ಈಡಾಡುವದನ್ನು ಕಂಡನು.

ಬಡಿದಾಟದ ಭರದಲ್ಲಿ ಹರಿಯು ಅಲ್ಲಿಗೆ ಬಂದುದನ್ನು ಅವರು ಕಾಣಲಿಲ್ಲ ಕಡೆಗೆ ಶ್ರೀಹರಿಯ ಶಂಖನಾದವು ಅವರಿಬ್ಬರನ್ನು ಹೋರಾಟದಿಂದ ಹಿಂದೆಳೆಯಿತು ಅವರ ವಾದ–ವಿವಾದಕ್ಕೆ ಇಳಿಗಳೆಯು ಉಂಟಾಯಿತು. ತನ್ನೆದುರಿಗೆ ಗರುಡನನ್ನೇರಿ ನಿಂತ ಹರಿಯನ್ನು ಕಂಡು ವಾಯುವು ಭಯಚಕಿತನಾದನು. ಅವರು ತಮ್ಮ ಮೂರ್ಖತನಕ್ಕೆ ತಾವೇ ನಾಚಿಕೊಂಡು ಕೆಳಗೆ ಮೋರೆಹಾಕಿದರು. ಶ್ರೀಹರಿಯು ಅವರಿಬ್ಬರನ್ನು ಕುರಿತು— "ಮೂರ್ಖರೇ! ಇದೇನು ನಿಮ್ಮ ಅಶಿಕ್ಷಿತತನವು?" ಎಂದು ನುಡಿದು ವಾಯುವನ್ನು ಕಂಡು— "ವಾಯುವೇ! ಈ ಕಲಹದ ಮೂಲ ಕಾರಣವೇನು?" ಎಂದು ಕೇಳಿದನು. ಆಗ ವಾಯುವು ಮನಸ್ಸಿನಲ್ಲಿ 'ನಾನು ಶ್ರೀಹರಿಯ ದರ್ಶನಕ್ಕಾಗಿ ಬಂದು ಶೇಷನ ಕೂಡ ನ್ಯಾಯಮಾಡಿದೆನಲ್ಲ! ಆದರೂ ಅನಾಯಾಸವಾಗಿ ನನ್ನ ಉದ್ದೇ

ಶವು ಸಫಲವಾಯಿತು' ಎಂದು ಆನಂದಭರಿತನಾದನು. ಆಗ ಅವನು ಶ್ರೀಹರಿಯ ಮುಂದೆ ಬಂದು ನಮಸ್ಕರಿಸಿದನು. ಹಾಗು ಶ್ರೀಹರಿಗೆ ಆದಿ ಶೇಷನ ಉನ್ಮತ್ತತೆಯನ್ನು ಸಾಗ್ರವಾಗಿ ತಿಳಿಸಹತ್ತಿದನು. ಶ್ರೀಹರಿ-ವಾಯು ಗಳು ಇನ್ನೂ ತಮ್ಮ ಮಾತು ಮುಗಿಸಿರಲಿಲ್ಲ. ಅಷ್ಟರಲ್ಲಿ ಶೇಷನು ಮುಂದೆ ಬಂದು ನಡುವೆ ಬಾಯಿಹಾಕಿದನು ಹಾಗು ವಾಯುವಿನನ್ನು ಅಲ್ಲಗಳೆದು ಹರಿಯೆದುರು ಹೇಳಹತ್ತಿದನು ಇಷ್ಟೇ ಅಲ್ಲ ತನ್ನ ಸಾಮರ್ಥ್ಯವನ್ನು ಮತ್ತೆ ಹೊಗಳಿಕೊಳ್ಳ ಹತ್ತಿದನು.

ಆಗ ಶ್ರೀಹರಿಯು ವಿಚಾರದಿಂದ— ಶೇಷನಿಗೆ ಗರ್ವವು ಉಂಟಾದುದು ನಿಜ. ಅದನ್ನು ಯುಕ್ತಿಯಿಂದ ದೂರಮಾಡತಕ್ಕದ್ದು' ಎಂದು ಮನಸ್ಸಿನಲ್ಲಿ ನಿಶ್ಚಯಿಸಿದನು. ಆಗ ಅವನು ಮತ್ತೊಂದು ವಿಚಾರಮಾಡದೆ ಶೇಷ-ವಾಯು ಗಳನ್ನು ಹತ್ತಿರ ಕರೆದನು ಅವರಿಬ್ಬರನ್ನು ಕುರಿತು 'ನೀವಿಬ್ಬರು ನನ್ನ ಭಕ್ತರು. ಇದರಲ್ಲೇನೂ ಸಂಶಯವಿಲ್ಲ ಸದ್ಯ ನಿಮ್ಮಿಬ್ಬರಲ್ಲಿ 'ನಾ ಹೆಚ್ಚು, ನೀ ಕಡಿಮೆ' ಎಂಬ ಅಹಂಕಾರವು ಉತ್ಪನ್ನವಾಗಿದೆ ಇದು ಇಬ್ಬರಿಗೂ ಭೂಷಣವಲ್ಲ. ಆದರೂ ನೀವಿಬ್ಬರೂ ನನ್ನನ್ನು ಮರ್ಯಾದಿಸುವಿರಿ ಎಂದ ಮೇಲೆ ನಾನು ಧನ್ಯನೆಂದೇ ತಿಳಿಯುವೆನು. ಈಗ ನಾನು ನಿಮ್ಮ ಸಾಮರ್ಥ್ಯ ವನ್ನು ಪರೀಕ್ಷಿಸುವ ಹಂಬಲವುಳ್ಳವನಾಗಿರುವೆನು. ಅದಕ್ಕೆ ನೀವಿಬ್ಬರೂ ಒಪ್ಪಿಕೊಳ್ಳುವಿರೆಂದು ನನಗೆ ನಂಬಿಕೆಯದೆ" ಎಂದು ನುಡಿದನು.

ಶ್ರೀಹರಿಯ ಇಂಗಿತವನ್ನರಿಯದೆ ಅವರಿಬ್ಬರೂ ಆತನ ಮಾತು ಮನ್ನಿಸು ವದಕ್ಕೆ ಸಿದ್ಧರಾದರು ಶೇಷನಂತೂ ತನ್ನ ಬಲದಿಂದ ಜಯಪಡೆಯುವೆನೆಂದು ಬಲು ಕುಣಿದಾಡಹತ್ತಿದನು. ವಾಯುವು ಈ ಸಾಮರ್ಥ್ಯ ಪರೀಕ್ಷೆಯಲ್ಲಿ ಜಯವಡೆಯುವ ಕುರಿತು ಮನಸ್ಸಿನಲ್ಲಿ ಶ್ರೀಹರಿಯನ್ನು ಧ್ಯಾನಿಸಹತ್ತಿದನು.

ಬಳಿಕ ಶ್ರೀಹರಿಯು ಅವರಿಬ್ಬರಿಗೆ 'ನೀವಿಬ್ಬರು ನಾನು ಹೇಳುವ ಪಣ ವನ್ನು ಕೈಗೊಳ್ಳಿರಿ. ಆ ಪಣವನ್ನು ನಿಮ್ಮಿಬ್ಬರಲ್ಲಿ ಗೆದ್ದವನೇ ಇನ್ನೊಬ್ಬನಿಂದ ಬಲವಂತನು' ಎಂದು ನಾನು ತಿಳಿಯುತ್ತೇನೆ. ಎಂದು ನುಡಿದು ಶೇಷನನ್ನು ಕುರಿತು— 'ಶೇಷ! ನೀನು ನಿನ್ನ ಶರೀರದಿಂದ ಮೇರು ಪರ್ವತದ ಪುತ್ರನೆನ್ನಿ ಸಿದ ಆನಂದ ಪರ್ವತವನ್ನು ಬಿಗಿಯಾಗಿ ಸುತ್ತುಗಟ್ಟು. ಹಾಗು ಭಯಂಕರ

ವಿಷಕಾರುವಂತೆ ಫೂತ್ಕರಿಸುತ್ತ ಕುಳಿತುಕೊಳ್ಳು' ಎಂದು ಹೇಳಿದನು ಬಳಿಕ ವಾಯುವಿಗೆ— 'ವಾಯುವೇ ನೀನು ಶೇಷನು ಸುತ್ತುಹಾಕಿದ ಆ ಪರ್ವತವನ್ನು ಅಹಮುತ್ತಾಗಿ ಮೇಲೆ ಎತ್ತು. ಅದು ಅಗಳಾಡದಿದ್ದರೆ ಶೇಷನು ಸಾಮರ್ಥ್ಯವುಳ್ಳವನು. ಪರ್ವತವು ಅಲ್ಲಾಡಿದರೆ ವಾಯುವು ಬಲವುಳ್ಳವನು ಎಂದು ಪಣದ ತನ್ನ ವಿಚಾರವನ್ನು ಶ್ರೀಹರಿಯು ಹೇಳಿದನು ಮತ್ತು ಆ ಪಣಕ್ಕೆ ಅವರಿಬ್ಬರೂ ಅಣಿಯಾಗುವಂತೆ ಅವರನ್ನು ಹುರಿದುಂಬಿಸಿದನು

ಶ್ರೀಹರಿಯ ಹಂಚಿಕೆಯು ಬಹಳ ಯೋಗ್ಯವಾದದ್ದು ಎಂದು ಶೇಷನು ಶ್ರೀಹರಿಯನ್ನು ಕೊಂಡಾಡುತ್ತ ಆ ಆನಂದ ಪರ್ವತದ ಸನಿಹಕ್ಕೆ ಬಂದನು ಹಾಗು ತನ್ನ ಉದ್ದವಾದ ಶರೀರವನ್ನು ಉಬ್ಬಿಸಿ ಆನಂದ ಪರ್ವತವನ್ನು ಸುತ್ತುಹಾಕಿದನು ಅಲ್ಲದೆ ಭಯಂಕರ ವಿಷಕಾರಿ ಫೂತ್ಕರಿಸುತ್ತ ವಾಯುವು ಪರ್ವತವನ್ನು ಎತ್ತಲು ಬರುವ ಹಾದಿ ನೋಡಹತ್ತಿದನು

ವಾಯುವೂ ಪಣಕ್ಕಾಗಿ ಅಲ್ಲಿಗೆ ಬಂದನು ಬರುವ ಕಾಲಕ್ಕೆ ಶ್ರೀಹರಿಯನ್ನು ನಮಸ್ಕರಿಸಿ ಬಂದನು ಆಕೂಡಲೆ ವಾಯುವು ತನ್ನ ಕಿರಿಬೆರಳಿನಿಂದ ಆ ಪರ್ವತವನ್ನು ಗಿವುಚಿ ಬಿಸಾಡಿದನು.

ಪರಾಕ್ರಮಿಯಾದ ವಾಯುವಿನ ಈ ಕ್ರಿಯೆಯಿಂದ ಆ ಆನಂದ ಪರ್ವತವು ತನ್ನನ್ನು ಸುತ್ತುಹಾಕಿ ಕುಳಿತಿದ್ದ ಶೇಷನಸಹಿತ ಅಂತರಿಕ್ಷಕ್ಕೆ ಹಾರಿ, ದಕ್ಷಿಣ ದಿಕ್ಕಿಗೆ ಗಮನಿಸಹತ್ತಿತು.

ಆನಂದ ಪರ್ವತದ ಈ ಸ್ಥಿತಿಯನ್ನು ಅದರ ತಂದೆ ಮೇರುಗಿರಿಯು ಕಂಡನು. ಇನ್ನು ಅಂತರಿಕ್ಷದಿಂದ ಕೆಳಗೆ ಬಿದ್ದರೆ ತನ್ನ ಪುತ್ರನ ಅವಸ್ಥೆ ಸರಿಯಾಗುವದಿಲ್ಲ ಎಂದು ಅರಿತು ಕೂಡಲೆ ಆ ಪರ್ವತವು ವಾಯುವಿನ ಹತ್ತರ ಬಂದಿತು. ಹಲವು ರೀತಿಯಿಂದ ಬೇಡಿಕೊಂಡಿತು. ತನ್ನ ಮಗನನ್ನು ರಕ್ಷಿಸಬೇಕು ಗಾಸಿಗೊಳಿಸಬಾರದು ಎಂದು ಬೇಡಿಕೊಂಡಿತು.

ಮೇರು ಪರ್ವತದಂತೆ ಆನಂದ ಪರ್ವತವನ್ನು ಸುತ್ತರಿದ ಶೇಷನೂ ಕೂಡ ಅಂಜಿದನು. ತಾನೆಲ್ಲಿ ಅಂತರಿಕ್ಷದಿಂದಬಿದ್ದು ಸಾಯುವೆನೋ ಎಂಬ ಅಂಜಿಕೆ ಶೇಷನಿಗಾಯಿತು. ಆಗ ಅವನೂ ಕೂಡ ಬಾಯಿತೆಗೆದು ವಾಯು

ವನ್ನು ಒದರಿ ಬೇಡಿಕೊಂಡನು. — ' ಮಹಾರಾಯಾ, ಪ್ರಾಣೇಶ ನಾನು ಸೋತೆ. ನನಗೆ ಜೀವದಾನಕೊಡು, ಬಲದಲ್ಲಿ ನಿನ್ನನ್ನು ಮೀರುವವನು ಯಾವನೂ ಇಲ್ಲ ನನ್ನನ್ನು ಈಗ ರಕ್ಷಿಸು " ಎಂದು ಬೇಡಿಕೊಂಡನು.

ಮೇರು ಹಾಗು ಶೇಷರ ಬಿನ್ನಹಕೇಳಿ ವಾಯುವು ಕರುಣಾಭರಿತ ನಾದನು ಅವನು ಆ ಕೂಡಲೆ ಅಂತರಿಕ್ಷದಿಂದ ಕೆಳಗೆ ಬೀಳುವ ಪರ್ವತ ವನ್ನು ಸಶೇಷವಾಗಿ ತನ್ನ ಅಂಗೈಯಲ್ಲಿ ಹಿಡಿದನು. ಬಳಿಕ ಅದನ್ನು ಸುವರ್ಣ ಮುಖರೀ ನದಿಯ ಉತ್ತರದಲ್ಲಿ ಇಟ್ಟು ಬಿಟ್ಟನು.

ಈ ಬಗೆಯಾಗಿ ಶ್ರೀಹರಿಯ ಹಂಚಿಕೆಯಿಂದಲೂ ವಾಯುವಿನ ಬಲ ದಿಂದಲೂ ಶೇಷನ ಗರ್ವವು ಹರಣವಾಯಿತು ಆಗ ಶೇಷನು ಗತಬಲನಾಗಿ ಶ್ರೀಹರಿಯ ಮುಂದೆ ಬಂದು ನಿಂತನು. ತನ್ನ ಅವಿವೇಕತನವನ್ನು ತಾನೇ ಹಳಿದುಕೊಂಡನು. ಮತ್ತು ತಾನು ಶ್ರೀಹರಿಯನ್ನು ಕುರಿತು—' ನಾನು ಸುತ್ತಿರಿದ ಗಿರಿಸಹಿತವಾಗಿ ವೈಕುಂಠಗಿರಿಯನ್ನು ನನ್ನ ಹೆಸರಿನಿಂದಲೇ ಕರೆಯಬೇಕು ಎಂದು ಬೇಡಿದನು. ಉದಾರಮೂರ್ತಿ ಶ್ರೀಹರಿಯು 'ಹಾಗೇ ಆಗಲಿ' ಎಂದು ವರವನ್ನುಕೊಟ್ಟನು. ಅಂದಿನಿಂದ ಆ ವೈಕುಂಠಗಿರಿಯನ್ನು 'ಶೇಷಾಚಲ' ಎಂದು ಕರೆಯಹತ್ತಿದರು.

## ಕಲಿಯುಗದ ವೇಂಕಟಾಚಲವು

ಪೂರ್ವದಲ್ಲಿ ಕಾಲಹಸ್ತಿ ಎಂಬ ಹೆಸರಿನ ಪಟ್ಟಣವೊಂದಿತ್ತು. ಅಲ್ಲಿ 'ಪುರಂದರ' ಎಂಬ ಬ್ರಾಹ್ಮಣನಿದ್ದನು. ಅವನು ಒಳ್ಳೆ ಸತ್ಯವಂತನಾಗಿ ಯಾಗ–ಹೋಮಾದಿ ನಿತ್ಯ–ನೈಮಿತ್ತಿಕ ಕರ್ಮಗಳಲ್ಲಿ ತತ್ಪರನಾಗಿದ್ದನು. ಬಹುದಿನಗಳ ವರೆಗೆ ಆತನಿಗೆ ಮಕ್ಕಳಾಗಲಿಲ್ಲ. ಅವನ ಮುಪ್ಪಿನಕಾಲದಲ್ಲಿ ಪೂರ್ವ ಪುಣ್ಯದಫಲವಾಗಿ ಒಬ್ಬ ಮಗನು ಹುಟ್ಟಿದನು. ತನಗೆ ಇಹ–ಪರ ಗತಿಗಾಗಿ ಪುತ್ರನು ಜನಿಸಿದ್ದರಿಂದ ಆ ಪುರಂದರ ಬ್ರಾಹ್ಮಣನಿಗೆ ಹಿಡಿಸಲಾರ ವಷ್ಟು ಸಂತೋಷವಾಯಿತು. ಅಪರೂಪವಾಗಿ ಹುಟ್ಟಿದ ಮಗನಿಗೆ ಜಾತ-ಕರ್ಮ ವಿಧಿಯನ್ನು ಮಾಡಿದನು. ಅವನಿಗೆ 'ಮಾಧವ' ಎಂದು ನಾಮಕರಣ ಮಾಡಿ ಸಡಗರದಿಂದ ಉತ್ಸವವನ್ನು ಮಾಡಿದನು.

ಮಾಧವನು ಶುಕ್ಲಪಕ್ಷದ ಚಂದ್ರನಂತೆ ಬೆಳೆಯುಹತ್ತಿದನು. ಶಿಶುವಾಗಿ ಬಾಲಕನಾದನು ಎಂಟನೆ ವರುಷವು ಆತನಿಗೆ ಪ್ರಾಪ್ತವಾಯಿತು. ಶಾಸ್ತ್ರ ನೇಮದಂತೆ ಆತನಿಗೆ ಎಂಟುವರ್ಷಗಳು ತುಂಬಲು ಪುರಂದರ ಬ್ರಾಹ್ಮಣನು ಮಗನ ಮುಂಜಿಯನ್ನು ಮಾಡಿದನು ವೇದಾಧ್ಯಯನವನ್ನು ಮಾಡಿಸಹತ್ತಿದನು ವೇದ ಮಂತ್ರಗಳನ್ನೂ ಶಾಸ್ತ್ರ-ಸಿದ್ಧಾಂತಗಳನ್ನೂ ಕಲಿತು ಮಾಧವನು ಪಂಡಿತನಾದನು ಈ ಪ್ರಕಾರ ಎಲ್ಲ ವಿದ್ಯಗಳಲ್ಲಿ ಪಾರಂಗತನಾದ ಆ ಮಾಧವನಿಗೆ ಅವನ ತಂದೆಯು ಪಾಂಡ್ಯದೇಶದ 'ಚಂದ್ರರೇಖೆ' ಎಂಬ ಕನ್ಯೆಯನ್ನು ಗೊತ್ತುಮಾಡಿ ವಿವಾಹ ಸಮಾರಂಭವನ್ನು ನೆರವೇರಿಸಿದನು

ಮಾಧವ ಬ್ರಾಹ್ಮಣನು ತಂದೆಯ ಹಾಗೆ ಸುಶೀಲನಾಗಿದ್ದಂತೆ ಅವನ ಹೆಂಡತಿ ಚಂದ್ರರೇಖೆಯು ಕೂಡ ಒಳ್ಳೆ ನಡತೆಯುಳ್ಳಾಕೆಯಾಗಿದ್ದಳು. ಪತಿವ್ರತಾಶಿರೋಮಣಿಯಾದ ಆಕೆಯು ಉತ್ತಮಗೃಹಿಣಿಯೆನ್ನಿಸಿದಳು

ತನಗೆ ಅನುಕೂಲಳಾದ ಹೆಂಡತಿಯಿಂದ ಮಾಧವನ ಸಂಸಾರವು ಒಳ್ಳೆ ಸುಖಮಯವಾಗಿ ಸಾಗಹತ್ತಿತು ಮನೆಯಲ್ಲಿ ಮುದುಕರಾದ ತಂದೆ-ತಾಯಿಗಳು ಮಾಧವ-ಚಂದ್ರರೇಖೆಯರಿಂದ ಸೇವೆಹೊಂದುತ್ತ ಆನಂದದಲ್ಲಿದ್ದರು. ಮಾಧವನು ತನ್ನ ಶುಭ್ರಾಚರಣೆಯಿಂದಲೂ ಪಾಂಡಿತ್ಯದಿಂದಲೂ ಲೌಕಿಕದಲ್ಲಿ ಎಲ್ಲರಿಂದ ಗೌರವಪಡೆದಿದ್ದನು.

ಹೀಗೆ ಮಾಧವ ಬ್ರಾಹ್ಮಣನು ಆನಂದದಿಂದ ಕಾಲಕಳೆಯುತ್ತಿರಲು ಒಂದಾನೊಂದುದಿನ ಕಾಲಕರ್ಮದಿಂದ ಅವನ ಜೀವನದ ದುರ್ಘಟನೆಯು ಒದಗಿತು ಅವನು ಸದಾಸತ್ಕರ್ಮದಲ್ಲಿ ನಿರತನಾಗಿದ್ದರೂ ಅವನ ಪೂರ್ವ ಜನ್ಮದ ಕೃತಕರ್ಮಫಲವನ್ನು ಈ ಜನ್ಮದಲ್ಲಿ ಅವನು ಅನುಭೋಗಿಸಬೇಕಾಯಿತು ವಿಷಯವಾಸನೆಗೆ ಸಿಕ್ಕವನು ಪಂಡಿತನೇ ಇರಲಿ ಪಾಮರನೇ ಇರಲಿ ಸುಶೀಲನೇ ಇರಲಿ, ದುಶ್ಶೀಲನೇ ಇರಲಿ, ಯಾರೇ ಇದ್ದರೂ ಕೂಡ ಅವರ್‍ಯ ಕ್ಷಣದಲ್ಲಿ ತಮ್ಮ ಬುದ್ಧಿಯನ್ನು ಕಳೆದುಕೊಳ್ಳುವರು. ಸ್ವೇಚ್ಛಾಚಾರಿಗಳಾಗುವರು, ದುಷ್ಟಕರ್ಮ ಪ್ರವೃತ್ತರಾಗುವರು. ಕೊನೆಗೆ ತಮಗಿರುವ ಮಾನ-ಮರ್ಯಾದೆಗಳಿಂದ ಹೊರತಾಗಿ ಜನತೆಯಿಂದ ತಿರಸ್ಕರಣೆಯನ್ನು ಹೊಂದುವರು ಈಗ ಮಾಧವ ಬ್ರಾಹ್ಮಣನ ಸ್ಥಿತಿಯೂ ಈ ಮಾರ್ಗವನ್ನು ಹಿಡಿ

ಯಿತು ಅವನಿಗೆ ಒಂದು ದಿನದಲ್ಲಿ ಸಹಿಸಲು ಅಸಾಧ್ಯವಾದ ಕಾಮವಾಸನೆ ಹುಟ್ಟಿತು ತನ್ನ ಹೆಂಡತಿ ಚಂದ್ರರೇಖೆಯು ಗೃಹಕರ್ಮದಲ್ಲಿ ತೊಡಗಿದಾಗ ಆಕೆಯನ್ನು ಕರೆದು ತನ್ನ ವಾಸನೆಯನ್ನು ಪೂರ್ಣಮಾಡಿಕೊಳ್ಳಲು ಹವಣಿಸಿದನು ಆಗ ಆ ಚಂದ್ರರೇಖೆಯು ತನ್ನ ಗಂಡನ ವಿಕಾರ ಭಾವನೆಯನ್ನು ಅರಿತಳು. ಮತ್ತು ತನ್ನ ಬುದ್ಧಿಯಿಂದ ಉಪದೇಶ ಮಾಡಹತ್ತಿದಳು ಆಕೆಯು ತನ್ನ ಗಂಡನಿಗೆ– 'ಪ್ರಿಯರೆ ಇದೇನು ತಮ್ಮ ವಿಪರೀತಭಾವನೆಯು? ರವಿರಾಯನು ಬೆಳಗುತ್ತಿರುವ ಈ ಹಗಲು ನಿಮ್ಮ ದೃಷ್ಟಿಗೆ ಮರೆಯಾಗಿದೆಯೇ ? ಹಗಲಿನಲ್ಲಿ ನಿಷೇಕವು ನಿಷೇಧವೆಂದು ನೀವು ಶಾಸ್ತ್ರಗಳಲ್ಲಿ ಓದಿ ಅರಿತಿರಲಿಲ್ಲವೇ ? ಮನೆಯಲ್ಲಿ ಗೃಹ್ಯಾಗ್ನಿಯು ಆರಾಧಿಸುವಿರಲ್ಲವೇ ? ಮೇಲಾಗಿ ಮನೆಯ ಮುಪ್ಪಿನ ಹಿರಿಯರು ನಮ್ಮ ಸೇವೆಬಯಸುತ್ತ ಇರುವರಲ್ಲವೇ ? ಇವೆಲ್ಲವೂ ನಿಮಗೆ ತಿಳಿದಿದ್ದು ನೀವು ಈಗ ವಾಸನೆತಾಳುವದು ನಿಮ್ಮ ದುರ್ಬುದ್ಧಿಯಿಂದೊದಗುವ ವಿನಾಶದ ಪೂರ್ವಸೂಚನೆಯಲ್ಲವೇ ? ನೋಡಿರಿ ಇನ್ನೊ ವಿಚಾರಮಾಡಿರಿ ಈ ನಾನು ಹೇಳುವ ಮಾತುಗಳನ್ನು ತಿರಸ್ಕರಿಸಬೇಡಿರಿ " ಎಂದು ಪಲವು ಬಗೆಯಾಗಿ ಹೇಳಿದಳು.

'ತನ್ನ ಹೆಂಡತಿಯು ತನಗೆ ಹಿತವಾದ ನುಡಿಗಳನ್ನು ಹೇಳುವಳು' ಎಂಬ ವಿಚಾರವು ಆತನಲ್ಲಿ ಹುಟ್ಟಲಿಲ್ಲ ಅದರ ವಿಪರೀತವಾಗಿ 'ನನ್ನ ಆಜ್ಞೆಯನ್ನು ನೀನು ಮೀರುವಿ. ಇದರಿಂದ ನಿನಗೆ ಪಾಪ ತಟ್ಟುವದು. ಅದೇನೇ ಇರಲಿ ನೀನು ಈಗಲೇ ನನ್ನ ಬಯಕೆಯ ಪ್ರಕಾರ ನಡೆದುಕೊಳ್ಳಲಿಕ್ಕೇಬೇಕು ಎಂದು ಕಠೋರವಾಗಿ ನುಡಿದನು.

ಗಂಡನು ಎಂದೂ ನುಡಿಯುವ ಕಠೋರ ಮಾತುಗಳನ್ನು ಚಂದ್ರರೇಖೆಯು ಕೇಳಿ ದಿಗಿಲುಗೊಂಡಳು, ಏನೂ ವಿಚಾರಗಾಣದಾದಳು. ಇದೊಂದು ಧರ್ಮಸಂಕಟವೆಂಬ ಇಕ್ಕಟ್ಟಿನ ಬಲೆಯಲ್ಲಿ ಆಕೆ ಸಿಕ್ಕುಬಿದ್ದಳು. ಕೊನೆಗೆ ಆಕೆಯು ಮನಸಿನಲ್ಲಿ— 'ಇದೇನೋ ನಮಗೆ ವಿನಾಶಕಾಲವೆಂದು ತೋರುತ್ತದೆ. ಇಲ್ಲವಾದರೆ ನನ್ನ ಧರ್ಮಿಷ್ಠನಾದ ಪತಿಯಲ್ಲಿ ಈಬಗೆಯ ದುರ್ಬುದ್ಧಿ ಹುಟ್ಟುತ್ತಿರಲಿಲ್ಲ' ಎಂದು ಅಂದುಕೊಂಡಳು. ಹಾಗು ಅವಳು 'ಪತಿಯ ಆಜ್ಞೆಯೇ ಪರಮವು' ಎಂಬದನ್ನು ಸ್ಮರಿಸಿಕೊಂಡು ತನ್ನ ಸತೀಧರ್ಮಕ್ಕಾಗಿ

ಸಿದ್ಧಳಾದಳು. ಆಗ ಆಕೆಯು ತನ್ನ ಗಂಡನನ್ನು ಕುರಿತು:— "ಪ್ರಿಯರೆ ನಿಮ್ಮ ವಾಸನೆಯು ಪೂರ್ಣವಾಗಲು ಈಗ ಮನೆಯಲ್ಲಿ ಅವಸರವಿಲ್ಲ. ನಾನು ನೀರು ತರುವ ಕಾರಣವನ್ನು ಮನೆಯಲ್ಲಿಯ ಹಿರಿಯರಿಗೆ ಹೇಳುವೆನು. ಅವ ರಿಂದ ಅಪ್ಪಣೆಪಡೆಕೊಂಡು ಊರಿಂದ ದೂರದಲ್ಲಿರುವ ಜಲಾಶಯಕ್ಕೆ ತೆರಳು ವೆನು. ನೀವು ಅದಕ್ಕಿಂತಲೂ ಮೊದಲೇ ದರ್ಭೆ–ಪತ್ರ್ಯಾದಿಗಳನ್ನು ತರುವ ನೆವವನ್ನು ಹೇಳಿ ಮುಂದೆ ನಡೆಯಿರಿ. ನಾನು ಅಲ್ಲಿಗೆ ಬಂದನಂತರ ಮನು ಷ್ಯರಿಲ್ಲದ ಸ್ಥಳದಲ್ಲಿ ನಿಮ್ಮ ಇಚ್ಛೆಯನ್ನು ಪೂರ್ಣಮಾಡಿಕೊಳ್ಳಿರಿ" ಎಂಬದಾಗಿ ಹೇಳಿಕೊಂಡಳು.

ವಿಷಯವಾಸನೆಯಿಂದ ಪೀಡಿತನಾದವನಿಗೆ ನಾಚಿಕೆ, ಅಂಜಿಕೆಗಳು ಇರುವದಿಲ್ಲ. ಅದರಂತೆ ಅವನ ಬುದ್ಧಿಯೂ ಕೂಡ ಮಸಣಿಸಿ ಹೋಗುವದು. ಈಗ ಮಾಧವನ ಗತಿಯಾದರೂ ಹಾಗೇ ಆಯಿತು. ತನ್ನ ಹೆಂಡತಿಯ ಹಂಚಿಕೆಯು ಅವನಿಗೆ ಒಪ್ಪಿಗೆಯಾಯಿತು. ಈ ವಿಚಾರಕ್ಕಾಗಿ ಆತನು ಆಕೆಯನ್ನು ಬಲು ಹೊಗಳಿದನು. ಆ ಕೂಡಲೆ ಆತನು ತನ್ನ ತಾಯಿ–ತಂದೆ ಗಳಿಗೆ–ದರ್ಭೆ–ಪತ್ರಿ ಮೊದಲಾದ ಸಾಹಿತ್ಯ ತರುವ ಕುರಿತು ವನಕ್ಕೆ ಹೋಗು ತ್ತೇನೆ ಎಂದು ಹೇಳಿ ಅವರಿಂದ ಅಪ್ಪಣೆಪಡೆದು ಹೊರಬಿದನು.

ಮಧ್ಯಾಹ್ನ ಸಮಯ ಉರಿಯುತ್ತಿರುವ ಬಿಸಿಲಿನಲ್ಲಿ ಮಾಧವ ಬ್ರಾಹ್ಮ ಣನು ಮನೆಬಿಟ್ಟು ಹೊರಬಿದ್ದನು. ಊರದಾಟಿ ಕೆಲವು ಅಂತರದಮೇಲಿದ್ದ ಒಂದು ಮನುಷ್ಯ ಸಂಚಾರವಿಲ್ಲದ ಗಿಡದ ಗುಂಪಿನ ವನದಲ್ಲಿ ನೇರಿದನು. ಹೆಂಡತಿ ಬರುವ ಮಾರ್ಗದ ಕಡೆಗೇ ದೃಷ್ಟಿಯಿಟ್ಟು ನೋಡುತ್ತ ನಿಂತನು.

ಚಂದ್ರರೇಖೆಯೂ ಕೂಡ ಗಂಡನು ಹೋದ ಕೆಲ ನಿಮಿಷಗಳಿಗೆ ಬಗ ಲ್ಲಿ ಕೊಡವನ್ನಿಟ್ಟುಕೊಂಡು ಹೊರಟಳು. ಮಾರ್ಗದಲ್ಲಿ ಗಂಡನ ಹೆಜ್ಜೆ ಗಳನ್ನು ಗುರುತಿಸುತ್ತ ಹಾಗೇ ಬಿಸಿಲಲ್ಲಿ ನಾಗಿದಳು. ಕಡೆಗೆ ಒಂದು ಗಿಡದ ಗುಂಪಿನಲ್ಲಿ ನಿಂತ ತನ್ನ ಪತಿಯು ತನ್ನನ್ನು ಕೈಮಾಡಿ ಕರೆಯುವದನ್ನು ಕಂಡಳು, ಖಿನ್ನಮನಸ್ಸಿನಿಂದ ಗಂಡನ ಬಳಿಗೆ ನೇರಿದಳು.

ಹೆಂಡತಿಯು ತನ್ನ ಅಪ್ಪಣೆಯನ್ನು ಅಲ್ಲಗಳೆಯದೆ ಬಂದುದಕ್ಕೆ ಮಾಧವ ನಿಗೆ ಬಹಳ ಸಂತೋಷವಾಯಿತು! ತನ್ನ ಹತ್ತರ ಬಂದು ನಿಂತ ಆಕೆಯ

ಮುಖದ ಉದಾಸೀನತೆಯನ್ನು ಕಂಡು ಕೆಲ ನಿಮಿಷ ಆತನು ವಿಚಾರದಲ್ಲಿ ಬಿದ್ದನು. ಬಳಿಕ ಅವನು ಅತ್ತಿತ್ತ ನೋಡುತ್ತಿರಲು ಸಮೀಪದ ಒಂದು ಮರದ ಬುಡದಲ್ಲಿ ಕುಳಿತ ಒಬ್ಬ ಸುಂದರಳಾದ ಯುವತಿಯನ್ನು ಆತನು ಕಂಡನು. ಮೊದಲೇ ವಿಕಾರವಶನಾದ ಮಾಧವನು ಆ ಯುವತಿಯನ್ನು ನೋಡಿದ ಕೂಡಲೆ ತನ್ನ ಬಳಿಯಲ್ಲಿ ನಿಂತ ಚಂದ್ರರೇಖೆಯನ್ನು ಮರೆತು ಬಿಟ್ಟನು.

ಮರದಡಿಯಲ್ಲಿ ಕುಳಿತ ಯುವತಿಯು ತನ್ನ ಸಹಜವಾದ ರೂಪ-ಲಾವಣ್ಯಗಳಿಂದ ಮಾಧವನ ದೃಷ್ಟಿಯನ್ನು ತನ್ನ ಕಡೆಗೆ ಸೆಳೆದಳು. ಹೀಗೆ ಅವರಿಬ್ಬರ ದೃಷ್ಟಿಗಳು ಅನ್ಯೋನ್ಯವಾಗಿ ಕೂಡಿದವು.

ಬಳಿಕ ಮಾಧವನಿಗೆ ಆ ಯುವತಿಯನ್ನು ಕೂಡಿಕೊಳ್ಳುವ ಹವ್ಯಾಸವು ಹೆಚ್ಚಾಯಿತು. ಈ ಕಾರ್ಯಕ್ಕೆ ತನ್ನ ಹೆಂಡತಿ ಚಂದ್ರರೇಖೆಯಿಂದ ಆತಂಕವಾಗುವದೆಂದು ಅವನು ತಿಳಿದನು. ಆ ಕೂಡಲೆ ಆತನು ತನ್ನ ಹೆಂಡತಿಯನ್ನು ಕುರಿತು— " ಪ್ರಿಯೆ ನೀನು ನನ್ನ ಆಜ್ಞೆಯನ್ನು ಮೀರದೆ ಉರಿಯುವ ಬಿಸಿಲಲ್ಲಿ ಬಂದು ಶ್ರಮ ಹೊಂದಿದೆ. ನಿನ್ನ ಈ ಸತೀಧರ್ಮದಿಂದ ನಾನು ಸಂತುಷ್ಟನಾದೆನು. ಇನ್ನು ನೀನು ಈ ಮೊದಲು ಹೇಳಿದಂತೆ ನಾವು ಕೈಕೊಳ್ಳುವ ಕ್ರಿಯೆಯು ಧರ್ಮ ಹಾಗು ಶಾಸ್ತ್ರಗಳಿಗೆ ವಿರುದ್ಧವೆಂಬುದನ್ನು ನಾನೀಗ ಅರಿತೆ. ಇನ್ನು ಮೇಲೆ ನಾನು ದುಷ್ಟವಿಕಾರದಿಂದ ಮನಸ್ಸನ್ನು ಹಿಂದೆ ತಿರುಗಿಸಿದೆನು. ನೀನು ಇನ್ನು ಮನಸಿನಲ್ಲಿ ಏನೊಂದು ವಿಕಲ್ಪಭಾವನೆಯನ್ನು ತಾರದೆ ಈಗಲೆ ಮನೆಗೆ ಹೋಗು. ಗೃಹಕೃತ್ಯದಲ್ಲಿ ತೊಡಗು, ನಾನು ಹಿಂದಿನಿಂದ ಬರುವೆನು " ಎಂದು ಜೊಳ್ಳು ಮಾತುಗಳನ್ನು ಹೇಳಿ ಅವಳನ್ನು ಮನೆಗೆ ಕಳಿಸಿದನು. ಅವಳು ತನ್ನ ಕಣ್ಣಿಗೆ ಮರೆಯಾಗುವವರೆಗೆ ನಿರೀಕ್ಷಿಸಿದನು. ಬಳಿಕ ಮೆಲ್ಲ ಮೆಲ್ಲನೆ ಹೆಜ್ಜೆಯನ್ನು ಇಡುತ್ತ ಮರದಬುಡದಲ್ಲಿ ಕುಳಿತ ಯುವತಿಯ ಕಡೆಗೆ ನಡೆದನು.

ಮಾಧವನು ಆ ಯುವತಿಯ ಸಮೀಪಕ್ಕೆ ಹೋಗ ಹತ್ತಿದಕೂಡಲೆ ಆಕೆಯು ಹಿಂದೆ ಸರಿಸರಿದು ನಿಲ್ಲಹತ್ತಿದಳು. ಹಾಗು ಆಕೆಯು ಅವನಿಗೆ— ' ಸ್ವಾಮಿ ನಾನು ಚಾಂಡಾಲಳು ' ಎಂಬ ಮಾತನ್ನು ನುಡಿದು ಸಾವರಿಸಿಕೊಂಡು ಮತ್ತೆ ಹಿಂದೆ ಸರಿದಳು.

ತನ್ನಿಂದ ಅಂತರಿಸುತ್ತ ಸರಿಯುವ ಯುವತಿಯ ರೂಪ-ಲಾವಣ್ಯ ಗಳನ್ನು ಮಾಧವನು ತನ್ನ ಕಾಮುಕದೃಷ್ಟಿಯಿಂದ ಎವೆಯಿಕ್ಕದೆ ನೋಡ ಹತ್ತಿದನು. ಆಕೆಯ ಮುಖವು ಕಲಾಪೂರ್ಣ ಚಂದ್ರಬಿಂಬವನ್ನು ಧಿಕ್ಕರಿಸು ತ್ತಿದ್ದಿತು. ಆಕೆಯು ಉಟ್ಟ ಬಿಳಿಯಪತ್ತಲವೂ, ಆಕೆಯ ನಡುವನ್ನು ಬಿಗಿ ಯಾಗಿ ಸುತ್ತಿಕೊಂಡಿದ್ದ ಒಡ್ಯಾಣವೂ ಹಾಗು ಆಕೆಯ ಎದೆ-ತೋಳುಗಳನ್ನು ಚಿಟಿಚಿಟಿಯಾಗುವಂತೆ ಬಿಗಿದ ಬೆಲೆಯುಳ್ಳ ಕುಪ್ಪಸವೂ ಆತನನ್ನು ಆ ಅಂತ್ಯ ಜಳ ಸನಿಹಕ್ಕೆ ಬರಮಾಡಲು ಆತುರತೆಯನ್ನು ಉಂಟುಮಾಡುತ್ತಿದ್ದವು ಆ ಚಾಂಡಾಲ ಕನ್ನಿಕೆಯ ಮೂಗಿನಲ್ಲಿ ನೇತಾಡುವ ಮೂಗುತಿಯೂ ಕಮಲ ದಂತಿರುವ ಆಕೆಯ ಕಣ್ಣಿನ ತಟದಲ್ಲಿ ಲೇಪಿಸಿದ ಕಾಡಿಗೆಯೂ, ಪುಷ್ಟವೂ ಕಠಿಣವೂ ಆಗಿ ತೋರುವ ಆಕೆಯ ಸ್ತನಗಳೂ, ಭ್ರಮರಗಳ ಹಿಂಡಿನಂತೆ ಆಕೆಯ ಮುಂದಲೆಯಮೇಲೆ ಹಾರಾಡುವ ಮುಂಗುರುಳುಗಳೂ ಆ ಮಾಧ- ವನನ್ನು ಮರುಳ್ತನದಲ್ಲಿ ತಂದಿಸಿಳಿದವು. ಆಕೆಯ ಶಿರಸ್ಸಂಬ ಕೃಷ್ಣಾಚಲ ವನ್ನು ಅಡರಿ ಏರುವಂತಿದ್ದ ಕೃಷ್ಣಸರ್ಪದಂತಹ ಹೆಳಲೂ ಆ ಮರುಳ ಬ್ರಾಹ್ಮ ಣನನ್ನು ಮೋಹದ ಮಡುವಿನಲ್ಲಿ ನೂಕಿತು ಅವಳು ಮಂಜುಳ ಸ್ವರದಿಂದ ಗುನುಗುನುವಾಗಿ ಹಾಡುವ ಪದಗಳೂ ಅತ್ತಿತ್ತ ಮಂದಗತಿಯಿಂದ ಓಡಾಡುವ ಆಕೆಯ ಪಾದಗಳೂ ಮಾಧವನ ಚಿತ್ತವನ್ನು ಸ್ವಾಸ್ಥ್ಯವಾಗಿ ಇಡಿಸಲಿಲ್ಲ. ಇಂಥ ಆ ಮೋಹಿನೀ ಸ್ವರೂಪದ ಆ ಚಾಂಡಾಲಕನ್ನಿಕೆಯನ್ನು ಅವಳು ನಿಜ ವಾಗಿಯೂ ಹೊಲೆಯಳಾಗಿದ್ದರೂ ಮಾಧವನು ಅವಳನ್ನು ದೇವಲೋಕದ ಅಪ್ಸರೆಯರಿಗಿಂತ ಶ್ರೇಷ್ಠಳೆಂದು ಭಾವನೆಯುಳ್ಳವನಾದನು. ಈಕೆಯನ್ನು ಇನ್ನೊಬ್ಬರು ಮುಟ್ಟಬಾರದೆಂದೇ ಅರಿತು ಬ್ರಹ್ಮನು ಅಂತ್ಯಜರಲ್ಲಿಯೇ ಈಕೆ ಯನ್ನು ಏಕೆ ಹುಟ್ಟಿಸಿರಬಾರದು? ಎಂದು ಮಾಧವನ ತರ್ಕವು. ಇಂಥ ನಾರೀ ಮಣಿಯು ತನಗೆ ಲಭ್ಯವಾದರೆ ತನ್ನ ಇಹಜನ್ಮದ ಸಾಫಲ್ಯವಾಯಿತು. ಎಂದು ಆತನ ಗ್ರಹಿಕೆಯಾಯಿತು ಇನ್ನು ಚಂದ್ರರೇಖೆಯನ್ನು ಈ ಮೊದಲೇ ಮನೆಗೆ ಕಳಿಸಿಕೊಟ್ಟದು ಒಳ್ಳೆಯದಾಯಿತು. ಈ ಚಾಂಡಾಲಿಯೊಡನೆ ಬೆರೆಯಲು ಏನೊಂದು ಆತಂಕವಿಲ್ಲದಾಯಿತು. ಹಾಗೇ ಮಾಡುವೆನು ಎಂಬ ಮನೋ ನಿರ್ಧಾರವನ್ನು ಮಾಡಿದನು.

ಮಾಧವನಲ್ಲಿ ವಿಷಯವಿಕಾರವು ಹೆಚ್ಚಿತು. ಆತನು ಅತ್ತಿತ್ತ ನೋಡಿ ನಾವಕಾಶವಾಗಿ ಮತ್ತೂ ಅಂತ್ಯಜಳ ಸಮೀಪಕ್ಕೆ ಬಂದನು. ಈ ಸಾರೆ ಅವನು ಅವಳನ್ನು ಮೊದಲು ನುಡಿಯಗೊಡದೆ ತಾನೇ ಎಲೈ 'ಶುಭಾಂಗಿಯೇ' ನಿನ್ನ ಹೆಸರೇನು ? ಎಂದು ನುಡಿದು ಮಾತಿಗೆ ಸುರುವಾಡಿದನು. ಆಗ ಆ ಚಾಂಡಾಲೆಯು ' ಕುಂತಳೆ ' ಎಂದು ನನ್ನನ್ನು ಕರೆಯುವರು, ಎಂದು ಹೇಳಿ ತುಸು ನಾಚಿದಂತೆ ನಟಿಸಿ ಅವನಿಂದ ದೂರ ಸರಿಯಲು ಹವಣಿಸಿದಳು. ಮಾಧವನು ಮತ್ತೂ ಮುಂದೆ ಸರಿದನು. ಆಗ ಆ ಕುಂತಳೆಯು ಅವನ ವಿಕಾರದ ಹುಚ್ಚುತನವನ್ನು ಅರಿತು— " ಎಲೈ ಬ್ರಾಹ್ಮಣಶ್ರೇಷ್ಠನೆ ಯಾವಾಗಲೂ ಹಿಂಸೆಯ ಕ್ರಿಯೆಗಳನ್ನು ಕೈಕೊಂಡು ಜೀವಿಸುವ ಹೊಲೆಯರಲ್ಲಿ ಹುಟ್ಟಿದಾಕೆ ನಾನು. ಹೀಗಿದ್ದು ನೀನು ನನ್ನ ಹತ್ತರ ಸರಿದು ಬರುವ ಕಾರಣವೇನು? ನೀವು ಕುಲೀನರು, ವೇದವನ್ನು ಕಲಿತವರು, ಹಾಗು ಮಡಿವಂತರು ಚಾಂಡಾಲರ ಮೋರೆಸಹ ನೋಡದಂಥ ಕಠೋರ ನಡೆವಳಿಕೆಯುಳ್ಳವರು. ಅಂದ ಮೇಲೆ ಈಗ ನನ್ನೊಡನೆ ಕೂಡಲು ಹವಣಿಸುವಿರಲ್ಲ ? ಈ ನಿಮ್ಮ ನಿಂದ್ಯ ವರ್ತನವು ನನಗಂತೂ ಸರಿಬಾರದು. ಎಂದು ಹೀಯಾಳಿಸಿ ನುಡಿದಳು. ಮತ್ತೂ ಅವನಿಂದ ಹಿಂದೆಸರಿದಳು. ಆಕೆ ಸರಿಸರಿದಂತೆ ಮಾಧವನ ವಿಕಾರ ಮತ್ತಿಷ್ಟು ತಲೆಗೇರಹತ್ತಿತು ಆತನು ಓದಿದ ಕಾವ್ಯ–ಅಲಂಕಾರಗಳು ಆಕೆಯ ಚೆಲುವಿಕೆಯನ್ನು ಬಣ್ಣಿಸುವದಕ್ಕಾಗಿ ಅವನ ಮುಖದಿಂದ ಹೊರ ಬಿದ್ದು ಬಳಕೆಯಾಗಹತ್ತಿದವು. ಅವನು ತಿಳಿದುಕೊಂಡ ವೇದಾಂತದ ತತ್ವಗಳು ಆಕೆಯ ಜಾತಿಯ ಕೀಳುತನವನ್ನು ಮರೆಯಿಸಲು ಅವನಿಗೆ ಸಹಾಯಕಾರಿಗಳಾದವು. ಕೇವಲ ಪಾಖಂಡಿಯಂತೆಯೇ ಅವನು ದುರಾಚಾರದ ಮಡುವಿನಲ್ಲಿ ಬೀಳುವಂತಾದನು. ಬಹಳ ಹೇಳುವದೇನು ? ಆ ಮಾಧವನನ್ನು ಪುಣ್ಯವು ಸೋಂಕದಾಯಿತು. ಅವನಿಗೆ ಸ್ವರ್ಗವು ಕಾಣದಾಯಿತು. ಇಷ್ಟು ಹೀನಸ್ಥಿತಿಹೊಂದಿದ ಅವನು ಆ ಚಾಂಡಾಲಕನ್ನಿಕೆಯನ್ನು ತನ್ನ ಹೃದಯ ಮಂದಿರದ ದೇವತೆಯನ್ನಾಗಿ ಮಾಡಿಕೊಳ್ಳಲು ಆತುರನಾದನು. ಆ ದಿನೆಯಲ್ಲಿಯೇ ಅವನು ಅಲ್ಲಿ ಆಕೆಯೊಡನೆ ವರ್ತಿಸಹತ್ತಿದನು.

ಬ್ರಾಹ್ಮಣನ ಹೀನಗತಿಯನ್ನು ಕಂಡು ಆ ಚಂಡಾಲಳಾದ ಕುಂತಳೆಯೂ ಕೂಡ ಅಸಹ್ಯ ಪಟ್ಟಳು. ತನಗೆ ತಿಳಿದ ಮಟ್ಟಿಗೆ ಅವನಿಗೆ ಬುದ್ಧೀ ಹೇಳಿ

ದಳು. ಆದು ಯಾವುದರಿಂದಲೂ ಅವನ ಮನಸ್ಸು ತಾಳಿಯ ಮೇಲೆ ಬರಲಿಲ್ಲ. ಇಷ್ಟೇ ಅಲ್ಲ. ಆ ಹೊಲೆಯಳಿಗಾಗಿ ಅವನು ಜೀವಕೊಡಲು ಸಹ ಸಿದ್ಧನಾದನು. ಅವನನ್ನು ಕಂಡು ಕುಂತಳೆಯು ಮನಸ್ಸಿನಲ್ಲಿ— 'ಈ ಬ್ರಾಹ್ಮಣನು ಮತಿಹೀನನಾಗಿ ನನ್ನ ಸಲುವಾಗಿ ಜೀವಕೊಡುವನು ಎಂದಮೇಲೆ 'ಬ್ರಾಹ್ಮಣನನ್ನು ಕೊಂದ ಪಾಪವು' ನನ್ನ ಪಾಲಿನಲ್ಲಿ ಬೀಳುವಂತಾಗುತ್ತದಲ್ಲಾ!" ಎಂದು ವಿಚಾರಕ್ಕೆ ಒಳಬಿದ್ದಳು. ಇವಳು ಜಾತಿಯಿಂದ ಹೀನಳಾದರೂ ಹಿಂದಿನ ಜನ್ಮದ ಅರಿವಿನಿಂದ ಸದೋಪದೇಶ ಮಾಡುವಷ್ಟು ಬುದ್ಧಿಯು ಇವಳಲ್ಲಿತ್ತು. ಮತ್ತು ಸರಿಯಾಗಿ ಹಾಗು ಸಮಂಜಸವಾಗಿ ಮಾತಾಡುವ ಜಾಣತನವು ಅವಳಿಗಿತ್ತು. ಅವಳು ಚಂಚಲೆಯೂ ಹರೆಯದವಳೂ ಆಗಿದ್ದರೂ ಕೂಡ ಸಂಯಮನ ಶಕ್ತಿಯು ಹೆಚ್ಚಿನದಿತ್ತು. ತನ್ನ ಬುದ್ಧಿಯಿಂದ ಆಕೆಯು ಮಾಧವನಿಗೆ ಹಲವು ವಿಷಯಗಳ ಬೋಧಮಾಡಿದಳು. ದುರ್ಮಾರ್ಗದಲ್ಲಿ ನಡೆಯಬಾರದೆಂದು ಉಪದೇಶಿಸಿದಳು. ಆಕೆಯ ಯಾವ ಉಪಾಯಗಳೂ ವಿಕಾರವಂತನಾದ ಮಾಧವನಿಗೆ ನಾಟಲಿಲ್ಲ. ಎಲ್ಲವೂ ಬುಡಮೇಲು ಮಾಡಿದ ಕೊಡದ ಮೇಲೆ ಅಥವಾ ಬೋರ್ಗಲ್ಲಮೇಲೆ ಮಳೆಸುರಿದಂತೆ ಆಯಿತು!

ಕೊನೆಗೆ ಆ ಕುಂತಳೆಯು ಮಾಧವನನ್ನು ಧಿಕ್ಕರಿಸಿ ನುಡಿದಳು. ಅದನ್ನೂ ಅವನು ಲಕ್ಷಿಸಲಿಲ್ಲ, ಭಯಂಕರವಾದ ಸಿಟ್ಟಿನಿಂದ ಬಯ್ಯಹತ್ತಿದಳು, ಅದಕ್ಕೆ ಆತನು ತನ್ನ ಹುಚ್ಚುನಗೆಯನ್ನು ಮಾತ್ರ ತೋರಿಸಿದನು. ಮಾತ್ರ ಆಕೆಯ ಪ್ರಶ್ನೆಗಳಿಗೆ ಪ್ರತಿಯಾಗಿ ಏನೂ ಮಾತಾಡಲಿಲ್ಲ, ದಾರಿಗೆ ಬರಲಿಲ್ಲ. ಆ ಕುಂತಳೆಯು ಸಿಟ್ಟಿನಿಂದ ಇನ್ನೂ ಉಗ್ರಳಾಗಿ ಕಲ್ಲಿನಿಂದ ಎಸೆದಳು, ಬಡಿಗೆಯಿಂದ ಹೊಡೆಯಹೋದಳು. ಆದರ ಮಾಧವನು ನಾಚಿಕೆ ಹಾಗು ಹೆದರಿಕೆಯಿಲ್ಲದೆ ಆಕೆಯ ಮುಂದೆ 'ಹೊಡ ಹೊಡೆ' ಎಂದು ಬೆನ್ನುಮಾಡಿ ನಿಂತನು. ಅಕಟಕಟ! ವಿಷಯ ವಿಕಾರವು ಎಂಥದು ನೋಡಿರಿ? ಕುಂತಳೆಯ ಯಾವ ಪ್ರಯತ್ನಗಳೂ ಆ ವಿಕಾರನಾದ ಮಾಧವನಮೇಲೆ ಪರಿಣಾಮವಾಗಲಿಲ್ಲ. ಆತನು ತನ್ನ ಕೆಟ್ಟ ವಿಚಾರಗಳಿಂದ ದೂರಾಗಲಿಲ್ಲ. ಕಡೆಗೆ ಕುಂತಳೆಯು ಹತಾಶಳಾದಳು! ಮುಂದೆ ಏನೊಂದು ಕಾಣದಾದಳು. ಎಷ್ಟಾದರೂ ಹೆಂಗಸು 'ಅಬಲೆ'ಯಲ್ಲವೇ? ಮಾಧವನಿಂದ ತಪ್ಪಿಸಿಹೋಗಲು ಅವಳಿಗೆ ಸಾಧ್ಯವಿರಲಿಲ್ಲ,

ಅವನನ್ನು ಹಿಂದೂಡಿ ಓಡಿಹೋಗಲು ಅವನಷ್ಟು ಸಾಮರ್ಥ್ಯವು ಅವಳಲ್ಲಿ ಇಲ್ಲ; ಅವನು ಆಕೆಗಾಗಿ ಜೀವ ಕೊಡಲು ಸಿದ್ಧನಾದಂತೆ ಆಕೆಯು ಆ ಮಾಧವನ ಕೈಯಿಂದ ತಪ್ಪಿಸಿಕೊಳ್ಳಲು ತನ್ನ ಪ್ರಾಣಬಿಡುವ ಧೈರ್ಯವು ಅವಳಿಗಾಗ ಲಿಲ್ಲ. ಹೀಗಾಗಿ ಎಲ್ಲ ಬಲದಿಂದಲೂ ಆ ಕುಂತಳೆಯು ಏನೊಂದನ್ನು ತಿಳಿಯ ದಂತಾದಳು. ಕೇವಲ ಆಕೆಯು ಮಾಧವನಮುಂದೆ ಹುಲ್ಲಿನ ಗೊಂಬೆ ಯಂತಾಗಿ ನಿಂತು ಬಿಟ್ಟಳು!

ಕೊನೆಗೆ ಆ ನೀಚನೂ, ಕಾಮಾಂಧನೂ ಆದ ಮಾಧವನು ಮನಬಂದಂತೆ ಆಚರಿಸಿ ಆ ಕುಂತಳೆಯೊಡನೆ ಬೆರತನು. ಕ್ಷಣಿಕ ಸುಖಕ್ಕಾಗಿ ನೈತಿಕ ಅಧಃ ಪತನವನ್ನು ಹೊಂದಿದನು. ಹಾಯ್! ಹಾಯ್! ದೈವಗತಿಯು ವಿಚಿತ್ರ ವಾದದ್ದು. ವಿಶ್ವಾಮಿತ್ರ, ಪರಾಶರಾದಿ ಋಷಿಗಳೂ, ಇಂದ್ರಾದಿ ದೇವತೆಗಳೂ ಕೂಡ ಕಾಮನ ಹೊಡೆತಕ್ಕೆ ಸಿಕ್ಕಿರಲಿಲ್ಲವೇ?

ಆಯಿತು! ಮಾಧವನ ಬ್ರಾಹ್ಮಣತ್ವವು ಅವನಿಂದ ದೂರಾಯಿತು! ವಂಶಪರಂಪರೆಯಾಗಿ ಆಚರಣೆಯಿಂದ ಪವಿತ್ರವಾದ ಅವನ ಮನೆತನಕ್ಕೆ ಆ ಮಾಧವನಿಂದ ಕಳಂಕಹತ್ತಿತು. ಕುಂತಳೆಯ ಸಮಾಗಮದಿಂದ ಆತನು ಚಾಂಡಾಲನಾಗಿಬಿಟ್ಟನು. ನಿಂದ್ಯ ಕರ್ಮಗಳನ್ನು ಆಚರಿಸಹತ್ತಿದನು. ಮದ್ಯ ಮಾಂಸಾದಿಗಳನ್ನು ಸೇವಿಸಹತ್ತಿದನು. ಅಲ್ಪಾವಧಿಯಲ್ಲಿಯೇ ತನ್ನ ಮುಪ್ಪಿನ ತಾಯಿ-ತಂದೆಗಳನ್ನೂ ಧರ್ಮಪತ್ನಿಯನ್ನೂ ಮರೆತುಬಿಟ್ಟನು. ಈ ಸ್ಥಿತಿ ಯಲ್ಲಿ ಆತನು ಹನ್ನೆರಡು ವರ್ಷಗಳವರೆಗಿನ ದೀರ್ಘಕಾಲ ಕಳೆದನು. ಆಗ ತನ್ನ ಪ್ರಾಣಕ್ಕಿಂತಲೂ ಪ್ರಿಯಳೆನ್ನಿಸಿ ಅವನ ಹೃದಯವನ್ನು ಆವರಿಸಿದ ಕುಂತಳೆಯು ಮೃತವಾದಳು! ಆನಂತರ ಮಾಧವನ ಕಷ್ಟಕ್ಕೆ ಕಳೆಯೇರಿತು! ಪಶ್ಚಾತ್ತಾಪ ಕ್ಕಾಗಿ ಮನಸು ಹಾತೊರೆಯಹತ್ತಿತು. ಆದರೆ ಮಾಡುವನೇನು? 'ನನ್ನ ಜೀವನವೆಲ್ಲ ಪೂರ್ಣ ಹದಗೆಟ್ಟು ಹೋಯಿತಲ್ಲ!' ಎಂಬ ಹಳಹಳಿಕೆಯು ಅವ ನಲ್ಲಿ ಉಂಟಾಯಿತು. ಕೊನೆಗೆ ಅವನು ತನ್ನ ಜೀವನಕ್ಕೆ ಬೇಸತ್ತು ಆತ್ಮ ಹತ್ಯ ಮಾಡಿಕೊಳ್ಳಲು ಸಿದ್ಧನಾದನು.

ಆದರೆ ಅವನು ಮನಸಿನಲ್ಲಿ— 'ನನ್ನಲ್ಲಿ ಸದ್ಯ ಹಲವು ಪಾಪಗಳು ಒಟ್ಟುಗೂಡಿ ವಾಸವಾಗಿವೆ. ಇನ್ನು ಇವಕ್ಕೆ ಆತ್ಮಹತ್ಯೆಯ ಪಾಪವೊಂದನ್ನು

ಕೂಡಿಸಿ ಇನ್ನೂ ಪಾಪಗಳನ್ನು ಹೆಚ್ಚುಮಾಡಿಕೊಳ್ಳುವದು ಯೋಗ್ಯವಾಗ ಲಾರದು ಅದರಿಂದ ಮುಂದೆ ಬರುವ ಜನ್ಮಗಳೂ ಕೂಡ ನನ್ನ ಈ ಜನ್ಮದ ಅನರ್ಥಕ್ಕಿಂತಲೂ ಹೆಚ್ಚು ಹೀನ ದೆಸೆಯನ್ನು ಹೊಂದುವವು' ಎಂದು ವಿಚಾರಿಸಿದನು ಹಾಗು ತಾನು ಬಲವಂತಿಕೆಯಿಂದ ಪ್ರಾಣ ನೀಗುವ ದುಸ್ಸಾಹಸ ದಿಂದ ಹಿಂಪಾದನು. ಆ ಬಳಿಕ ತಾನು ಇದ್ದಂಥ ಚಾಂಡಾಲ ವಸತಿಯಿಂದ ಹೊರಬಿದ್ದು ಬಂದನು, ದೇಶಾಭ್ರಷ್ಟನಾಗಿ ಹುಚ್ಚನಂತೆ ಸಂಚರಿಸುತ್ತ ಹೊರಟು ಹೋದನು

ಎಲ್ಲಿಯೋ ಹೋದ! ಎಲ್ಲಿಯೋ ಕುಳಿತ! ಏನೋ ತಿಂದ! ದೊರೆಯು ದ್ದನ್ನು ಬಿಟ್ಟ! ಹೀಗಾಗಿದ್ದ ಹುಚ್ಚನ ಸ್ಥಿತಿಯು ಆ ಮಾಧವನದಾಯಿತು 'ಕೆಟ್ಟಮೇಲೆ ಮನುಷ್ಯನ ಕಟ್ಟು-ನಿಟ್ಟುಗಳೆಲ್ಲಿ ಉಳಿಯುವವು?'

ಮಾಧವನು ಊರು—ಕೇರಿಗಳೆನ್ನದೆ ನಾಡು—ಬೀಡುಗಳೆನ್ನದೆ, ಓಣಿ—ಬೀದಿಗಳಲ್ಲಿ ಅಲೆದಾಡುವ ಹುಚ್ಚನಂತಾದನು ಅವನು ಅನೇಕ ಪಾಪಗಳ ದೊಡ್ಡ ಗಂಟನ್ನು ಹೊತ್ತುಕೊಂಡು ತಿರುಗಾಡುತ್ತಿದ್ದರೂ ಅವನ ಜೀವನ ಕೋಶದಲ್ಲಿ ಪೂರ್ವ ಪುಣ್ಯಾಂಶದ ತುಣುಕು ಮಾತ್ರ ಉಳಿದಿತ್ತು ಅದರ ಫಲವನ್ನೇ ಕಾಣುವ ದೈವಯೋಗವು ಆತನಿಗೆ ಕೂಡುವ ಕಾಲವು ಈಗ ಬಂದಿತು

ಒಂದಾನೊಂದು ದಿನದಲ್ಲಿ ಉತ್ತರ ದಿಕ್ಕಿನ ನಾಡುಗಳಿಂದ ಕೆಲ ಧರ್ಮಾತ್ಮ ಶ್ರೀಮಂತರು ಶೇಷಾಚಲ ಯಾತ್ರೆಗಾಗಿ ಇತ್ತ ಕಡೆಗೆ ಬಂದರು ಅವರು ಮಾಧವನು ಉಳಿದಿರುವ ಊರಿನ ಮಾರ್ಗವಾಗಿಯೇ ನಡೆದಿದ್ದರು ಅವರ ಯಾತ್ರೆಯ ಗುಂಪು ಬಲು ದೊಡ್ಡದಾಗಿತ್ತು ಮಾಧವನು ಆ ಜನ ಜಂಗುಳಿಯನ್ನು ಕಂಡನು ತಾನೂ ಆ ಯಾತ್ರಿಕರ ಗುಂಪಿನಲ್ಲಿ ಸೇರಿ ಅವ ರೊಡನೆ ಸಾಗಿದನು. ಆ ಯಾತ್ರಿಕರು ಇಳಿದಲ್ಲಿ ಇವನೂ ಇಳಿಯುವನು ಅವರು ಉಂಡಲ್ಲಿ ಇವನೂ ಉಣ್ಣುವನು. ಒಂದೊಂದು ವೇಳೆ ಕೂಳು ದೊರೆಯದಿದ್ದಾಗ ಆ ಯಾತ್ರಿಕರ ಎಂಜಲೆಲೆಗಳನ್ನು ಸಂಗ್ರಹಿಸಿ ಅವರು ಬಿಟ್ಟ ಉಚ್ಛಿಷ್ಟ ತಿನ್ನುವನು ಈರೀತಿಯಾಗಿ ಆ ಮಾಧವನು ಆ ಯಾತ್ರಿಕ ರೊಡನೆ ತಾನೂ ಶೇಷಾಚಲಕ್ಕೆ ಬಂದನು

ಧರ್ಮಾತ್ಮರಾದ ಯಾತ್ರಿಕರು ಶೇಷಾಚಲದ ಕಪಿಲತೀರ್ಥದಲ್ಲಿ ಸ್ನಾನಮಾಡಿದರು, ಕ್ಷೇತ್ರ ವಿಧಿಯನ್ನು ಕೈಕೊಂಡರು. ಹಾಗೂ ಪಿತೃ ಶ್ರಾದ್ಧವನ್ನುಮಾಡಿ ಪಿತೃಗಳ ಪ್ರೀತ್ಯರ್ಥವಾಗಿ ಪಿಂಡಪ್ರದಾನ ನೀಡಿದರು.

ಮಾಧವನಾದರೂ ಅವರೊಡನೆ ಸ್ನಾನ, ಕ್ಷೇತ್ರವಿಧಿ ಇವನ್ನೆಲ್ಲ ಮುಗಿಯಿಸಿದನು. ಆದರೆ ಪಿತೃಗಳ ಪ್ರೀತ್ಯರ್ಥ ಪಿಂಡಪ್ರದಾನ ಕೊಡುವದು ಇವನಿಗೆ ದುಸ್ತರವೆನ್ನಿಸಿತು ತನಗೇ ಅನ್ನಕ್ಕೆ ಗತಿಯಿಲ್ಲದೆ ಇರುವಾಗ ಅನ್ನದ ಪಿಂಡಗಳು ಇವನಿಗೆ ಹೇಗೆ ದೊರೆಯಬೇಕು? ಈ ಚಿಂತೆಯಲ್ಲಿ ಆತನು ಕೊರಗಹತ್ತಿದನು ಎಲ್ಲ ವಿಧಿಗಳನ್ನು ಮುಗಿಯಿಸಿ ಒಂದರಿಂದಲೇ ಎಲ್ಲವನ್ನು ನಿರರ್ಥಕಮಾಡಿಕೊಳ್ಳಲು ಅವನ ಮನಸ್ಸಾಗಲಿಲ್ಲ. ಕೊನೆಗೆ ಅವನ ವಿಚಾರದಲ್ಲಿ— 'ಮಣ್ಣಿನಿಂದ ಪಿಂಡಗಳನ್ನು ಕಲ್ಪಿಸಿ ಪಿತೃಗಳಿಗೆ ಅವನ್ನು ನೀಡಿ, ಯಾತ್ರಾ ವಿಧಿಯನ್ನು ಪೂರ್ಣಮಾಡಲೇಬೇಕು' ಎಂದು ಬಂದಿತು. ಹಾಗು ಆ ಪ್ರಕಾರವಾಗಿ ಮಣ್ಣಿನ ಪಿಂಡಗಳನ್ನು ಪಿತೃಗಳಿಗಾಗಿ ನೀಡಿದನು. ಇಲ್ಲಿಗೆ ತನ್ನ ಶೇಷಾಚಲ ಯಾತ್ರೆಯು ಸಾರ್ಥಕವಾಯಿತೆಂದು ಸಮಾಧಾನ ತಂದುಕೊಂಡನು.

ಮಾಧವನ ಪೂರ್ವ–ಪುಣ್ಯಾಂಶದಿಂದ ನಿರಾಯಾಸವಾಗಿ ಅವನಿಗೆ ಶೇಷಾಚಲ ದರ್ಶನವಾಯಿತು. ಏನೊಂದು ವೆಚ್ಚ–ವ್ಯಯಗಳಿಲ್ಲದೆ ಯಾತ್ರಾ ವಿಧಿಯು ಪೂರ್ಣವಾಯಿತು. ಇದರಿಂದ ಅವನ ಪಿತೃಗಳು ಮೋಕ್ಷಹೊಂದಿದರು

ಕ್ಷೇತ್ರ ವಿಧಿಯನ್ನು ಮುಗಿಸಿದ ನಂತರ ಮಾಧವನು ಆ ಯಾತ್ರಿಕರೊಡನೆ ವೈಕುಂಠಗಿರಿಯನ್ನು ಏರಿದನು ತಾನು ಬೆಂಬಳಿಸಿಬಂದ ಧರ್ಮಾತ್ಮರನ್ನು ಆತನು ಅವರ ನೆರಳಿನಂತೆ ಹಿಂಬಾಲಿಸಿಯೇ ಇದ್ದನು. ಆ ಗಿರಿಯ ಸಂಪರ್ಕದಿಂದಲೇ ಅವನ ಹೃದಯದಲ್ಲಿ ಬಹುಕಾಲದಿಂದ ಅಂಟಿಕೊಂಡಿದ್ದ ಪಾಪವು ವಾಂತಿಯ ಸ್ವರೂಪದಿಂದ ಅವನ ಮುಖದಿಂದ ಹೊರಬಿದ್ದಿತು. ಅವನು ಇದುವರೆಗೆ ತಿಂದ, ಕುಡಿದ ಪಾಪರೂಪದ ಹೊಲಸೆಲ್ಲ ಅವನ ಶರೀರದಲ್ಲಿ ಹುಟ್ಟಿದ ಅಗ್ನಿಯಿಂದೆ ದಗ್ಧವಾಯಿತು! ಹೀಗೆ ಅವನ ಪಾಪದ ದುರ್ಗಂಧ ಸುಟ್ಟು ಹೊಗೆಯ ರೂಪದಿಂದ ಮೇಲಕ್ಕೆ ಪಸರಿಸಿ ಬಯಲಾಯಿತು.

ಮಾಧವನ ಈ ಘಟನೆಗಳನ್ನೆಲ್ಲ ದೇವತೆಗಳೆಲ್ಲ ಅರಿತುಕೊಂಡು ಕೌತುಕವುಳ್ಳವರಾದರು. ಆಕೂಡಲೆ ಅವರು ತಮ್ಮ ತಮ್ಮ ಸ್ಥಾನಗಳಿಂದ ಅವತರಿಸಿ ಭೂಲೋಕದಲ್ಲಿ ಮಾಧವನಿದ್ದ ವೈಕುಂಠಗಿರಿಗೆ ಬಂದರು. ಅವನ ಇದುವರೆಗಿನ ಚರಿತ್ರವನ್ನು ಹೊಗಳಿದರು ಧನ್ಯ! ಮಾಧವಾ ನೀನು ಧನ್ಯ! ಎಂದು ಕೊಂಡಾಡಿ ಅವನಮೇಲೆ ಹೂವಿನ ಮಳೆಯನ್ನು ಸುರಿಸಿದರು

ಶ್ರೀಹರಿಯು ಪಾಪಿಷ್ಠನಾದ ಅಜಾಮಿಳನನ್ನು ಉದ್ಧರಿಸಿದನು. ಅದ ರಂತೆಯೇ ಈಗ ಬ್ರಹ್ಮನು ಮಾಧವನನ್ನು ಮುಂದೆ ಕರೆದು ಆತನ ನೆತ್ತಿಯನ್ನು ಆಘ್ರಾಣಿಸಿದನು ಮತ್ತು 'ಮಾಧವ! ನೀನು ಇಂದಿನಿಂದ ಪವಿತ್ರನಾದೆ. ಇನ್ನು ನೀನು 'ಸ್ವಾಮಿ ಪುಷ್ಕರಿಣಿ' ತೀರ್ಥದಲ್ಲಿ ಸ್ನಾನಮಾಡಿ ಶ್ರೀ ವರಾಹ ಮೂರ್ತಿ ಯನ್ನು ವಂದಿಸು. ಆಬಳಿಕ ನಿನ್ನ ದೇಹದಿಂದ ಪ್ರಾಣಗಳನ್ನು ಬಿಟ್ಟುಬಿಡು' ಎಂದು ಹೇಳಿದನು ಇಲ್ಲದೆ ಆ ಬ್ರಹ್ಮನು ಮಾಧವನಿಗೆ— 'ನೀನು ನಿನ್ನ ಮುಂದಿನ ಜನ್ಮದಲ್ಲಿ ಪಾಂಡವರ ಸೋಮ್ಮಕ್ಷ್ಯ ವಂಶದಲ್ಲಿ ಹುಟ್ಟಿದ ಸುಧರ್ಮ ರಾಜನಿಗೆ ಮಗನಾಗುವಿ. ಆಕಾಶರಾಜನೆಂದು ಹೆಸರುಹೊಂದುವಿ. ಲೋಕ ಮಾತೆ ಮಹಾಲಕ್ಷ್ಮಿಯು ನಿನಗೆ ಮಗಳೆನ್ನಿಸುವಳು. ಅವಳನ್ನೇ ವರಿಸಿ ಸಾಕ್ಷಾತ್ ವಿಷ್ಣುವು ನಿನ್ನ ಅಳಿಯನಾಗುವನು ಇಷ್ಟೆಲ್ಲ ಸಂಗತಿಗಳು ಒದಗಿದ ನಂತರ ನಿನಗೆ ವೈಕುಂಠಲೋಕವು ಪ್ರಾಪ್ತವಾಗುವದು' ಎಂದು ಭವಿಷ್ಯವನ್ನು ತಿಳಿಸುವ ವರದಿಂದ ಆ ಮಾಧವನನ್ನು ಉದ್ಧರಿಸಿದನು.

ಬ್ರಹ್ಮನು ಮಾಧವನ್ನು ಕರುಣಿಸಿದಂದಿನಿಂದ ಆ ವೈಕುಂಠಗಿರಿಗೆ 'ವೇಂಕಟಾಚಲ' ಎಂಬ ಹೆಸರು ಉಂಟಾಯಿತು. ವೇಂ ಅಂದರೆ ಪಾಪಗಳನ್ನು ಕಟತೀ ಅಂದರೆ ತುಂಡಿಸುತ್ತದೆ. ಪಾಪಗಳನ್ನೆಲ್ಲ ನಾಶಪಡಿಸುವದು ಎಂಬ ಅರ್ಥದ ಶಬ್ದವು ಸಾಕ್ಷಾತ್ ಬ್ರಹ್ಮದೇವನಿಂದಲೇ ಈ ಹೆಸರು ಇಡಲ್ಪಟ್ಟಿತು.

---

# ೩ನೆಯ ಅಧ್ಯಾಯ

ಹಿಂದಕ್ಕೆ ಕಸ್ಯಪ ಮೊದಲಾದ ಸಪ್ತರ್ಷಿಗಳು ಜಗತ್ತಿನ ಕಲ್ಯಾಣ ಕ್ಕಾಗಿ ಭಾಗೀರಥಿ ತೀರದಲ್ಲಿ ಒಂದು ಯಜ್ಞವನ್ನು ಹೂಡಿದರು. ಆ ಯಾಗ ಕ್ಕಾಗಿ ಸುರಲೋಕದಿಂದ ನಾರದರೂ ಬಂದಿದ್ದರು ನಾರದರು ಸಪ್ತರ್ಷಿ ಗಳನ್ನು ಕುರಿತು—'ಈ ಯಜ್ಞದ ಫಲವನ್ನು ತ್ರಿಮೂರ್ತಿಗಳಾದ ಹರಿ—ಹರ—ಬ್ರಹ್ಮರಲ್ಲಿ ಯಾರಿಗೆ ಅರ್ಪಿಸುವಿರಿ?' ಎಂದು ಕೇಳಿದರು ನಾರದರ ಪ್ರಶ್ನೆಯು ಎಲ್ಲ ಋಷಿಗಳಿಗೆ ಯೋಗ್ಯವೆನಿಸಿತು. ಹಾಗು ಯಜ್ಞಫಲವನ್ನು ಯಾರಿಗೆ ಕೊಡಬೇಕೆಂಬುದು ಅವರಿಗೆ ತಿಳಿಯಲಿಲ್ಲ ಆಗ ಅವರೆಲ್ಲರು ನಾರದರ ಸಹಿತ ವಾಗಿ ಭೃಗುಮುನಿಯ ಹತ್ತಿರ ಬಂದು ಈ ವಿಚಾರವನ್ನು ಕೇಳಿದರು ಭೃಗು ಮುನಿಯು ಆ ಋಷಿಗಳನ್ನು ಕುರಿತು—'ನೀವು ಕೇಳುವ ಪ್ರಶ್ನೆಯು ಯೋಗ್ಯ ವಾಗಿದೆ. ಅದರ ವಿಚಾರವನ್ನು ನಾನು ಸುರಲೋಕಕ್ಕೆ ಹೋಗಿ ಆ ಹರಿ—ಹರ—ಬ್ರಹ್ಮರನ್ನು ಕೇಳಿ ತಿಳಿಸುವೆನು. ಅದುವರೆಗೆ ನೀವು ನಿಮ್ಮ ಸ್ಥಾನಕ್ಕೆ ಹೋಗಿರಿ' ಎಂದು ಹೇಳಿ ಅವರನ್ನೆಲ್ಲ ಸಮಾಧಾನ ಪಡಿಸಿ ಕಳಿಸಿದನು

ಭೃಗುಮುನಿಯು ಸಪ್ತರ್ಷಿ ಹಾಗು ನಾರದರನ್ನು ಯಾಗಮಂಟಪಕ್ಕೆ ಕಳಿಸಿ ತಾನು ತಡಮಾಡದೆ ಕೂಡಲೆ ಹೊರಟನು. ಆತನು ಮೊದಲು ಬ್ರಹ್ಮಲೋಕದ ಮಾರ್ಗವನ್ನು ಹಿಡಿದನು. ಹೋಗುವಾಗ ಅವನು ತನ್ನ ಮನಸಿನಲ್ಲಿ—'ಪಿತಾಮಹನಾದ ಬ್ರಹ್ಮನೇ ಎಲ್ಲ ದೇವತೆಗಳಲ್ಲಿ ಹೆಚ್ಚಿನವ ನೆಂದು ಪ್ರಸಿದ್ಧಿಯಿದೆ. ಆದ್ದರಿಂದ ಆ ಬ್ರಹ್ಮನೇ ಸಪ್ತರ್ಷಿಗಳು ಹೂಡಿರುವ ಯಾಗ ಫಲವನ್ನು ಪಡೆಯಲು ತಕ್ಕವನಾಗಿರುವನು ನಾನು ಈಗ ನೇರ ವಾಗಿ ಆ ಬ್ರಹ್ಮನನ್ನು ಭೆಟ್ಟಿಯಾಗಿ 'ಯಜ್ಞಫಲ ಸ್ವೀಕರಿಸಿಕೊಂಡುಹೋಗಲು ಬಿನ್ನಹಮಾಡಿ ಬರಬೇಕು' ಎಂದು ನಿಶ್ಚಯಿಸಿದನು. ತೀವ್ರವಾಗಿ ನಡೆಯುತ್ತ ಬಂದು ಬ್ರಹ್ಮಲೋಕವನ್ನು ಮುಟ್ಟಿದನು. ಕಮಲಾಸನದಲ್ಲಿ ಕುಳಿತಿರುವ ಬ್ರಹ್ಮನನ್ನು ದೂರಿಂದಲೇ ಕಂಡು ನಮಸ್ಕರಿಸಿದನು ತಾನುಬಂದ ಕೆಲಸದ ಉದ್ದೇಶವನ್ನು ಆತನಿಗೆ ತಿಳಿಸುವ ಹವಣಿಕೆಯುಳ್ಳವನಾದನು ಆದರೆ ಬ್ರಹ್ಮನು ತನ್ನ ಎದುರು ಬಂದು ನಮಸ್ಕಾರಮಾಡಿದ ಭೃಗುಮುನಿಯನ್ನು

ಕಣ್ಣೆತ್ತಿ ನೋಡಲಿಲ್ಲ. ಮುಂದಕ್ಕೆ ಕರೆಯಲಿಲ್ಲ. ಕೇವಲ ತನ್ನ ಚತುರ್ಮುಖ ಗಳಿಂದ ವೇದಗಳನ್ನು ಉಚ್ಚರಿಸುವದರಲ್ಲಿಯೂ ತನ್ನ ತಂದೆ ನಾರಾಯಣನನ್ನು ಸ್ತುತಿಮಾಡುವದರಲ್ಲಿಯೂ ಮಗ್ನನಾಗಿ ಬಿಟ್ಟಿದ್ದನು. ಬ್ರಹ್ಮನ ಲಕ್ಷ್ಯವನ್ನು ತನ್ನಕಡೆಗೆ ಸೆಳೆದುಕೊಳ್ಳಲು ಭೃಗುಮುನಿಯು ಹಲವು ಪ್ರಯತ್ನಮಾಡಿದನು ಯಾವದೂ ಉಪಯೋಗಬೀಳಲಿಲ್ಲ. 'ನಮಸ್ಕಾರಮಾಡಿದವರ ನಮಸ್ಕಾರ ವನ್ನು ಸ್ವೀಕರಿಸುವದೂ, ತನ್ನಲ್ಲಿ ಏನಾದರೊಂದು ಕಾರ್ಯಕ್ಕಾಗಿ ಬಂದವರ ಆಗಮನದ ಕಾರಣವನ್ನು ವಿಚಾರಿಸುವದೂ ಗೃಹಸ್ಥನ ಧರ್ಮವಾಗಿರುವದು. ಹೀಗಿದ್ದು ನಾನು ಇದುವರೆಗೂ ಕಾದುನಿಂತರೂ ಈ ವಿಧಿಯು ಲಕ್ಷಿಸಲೊಲ್ಲನು. ಇನ್ನು ಇವನಿಗೆ ಸಪ್ತರ್ಷಿಗಳು ಮಾಡುವ ಯಜ್ಞದ ಫಲವನ್ನು ಕೊಡಿಸುವ ದೆಂದರೆ ಅಪಾತ್ರದಾನದಂತಾಗುವದು' ಎಂಬ ವಿಚಾರದಿಂದ ಭೃಗುಮುನಿಯು ಸಿಟ್ಟಾಗಿ ಕೂಡಲೆ ಅಲ್ಲಿಂದ ಹಿಂದಿರಿಗಿದನು ಬ್ರಹ್ಮ ಮಂದಿರವನ್ನು ಬಿಟ್ಟು ಹೊರಬಂದನು. ಬಾಗಿಲಲ್ಲಿ ನಿಂತು 'ಇನ್ನೆಲ್ಲಿ ಹೋಗಬೇಕು?' ಎಂಬದನ್ನು ತಾನೇ ವಿಚಾರಿಸಿಕೊಂಡು ತ್ರಿಮೂರ್ತಿಗಳಲ್ಲಿ 'ಶಂಕರನೇ ಶ್ರೇಷ್ಠ ಎಂದು ಅರಿತು ನೆಟ್ಟಗೆ ಕೈಲಾಸ ಪರ್ವತಕ್ಕೆ ತೆರಳಿದನು.

ಮನೋಹರವಾದ ಕೈಲಾಸಗಿರಿಗೆ ಭೃಗುಮುನಿಯು ಬಂದನು. ಅಲ್ಲಿಯ ರಮಣೀಯ ದೃಶ್ಯಗಳನ್ನು ಕಂಡು ಸೋಜಿಗಬಟ್ಟನು. ಬ್ರಹ್ಮನಲೋಕದಲ್ಲಿ ತನಗೆ ಉಂಟಾದ ಅನಾದರವೂ ಅವಮರ್ಯಾದೆಯೂ ಅವನಿಗೆ ಅಸಹ್ಯವೆನಿ ಸಿದ್ದವು. ಈ ಕೈಲಾಸಗಿರಿಯ ದರ್ಶನದಿಂದ ಅವನ್ನು ಕೆಲಮಟ್ಟಿಗೆ ಮರೆ ತನು. ಅವನಲ್ಲಿ ಉಂಟಾಗಿದ್ದ ಸಿಟ್ಟು ಮಾಯವಾಗಹತ್ತಿ ಆನಂದವು ಉದಿಸ ಹತ್ತಿತು. ಆ ಸೊಬಗಿನಲ್ಲಿಯೇ ಅವನು ಲಗು ಬಗೆಯಿಂದನಡೆದು ಶಂಕರ–ಪಾರ್ವತಿಯರ ವಾಸಸ್ಥಾನವನ್ನು ಸೇರಿದನು. ತಾನು ಬಂದ ಕಾರ್ಯದ ಉದ್ದೇಶವನ್ನು ಶಂಕರನಿಗೆ ತಿಳಿಸಬೇಕೆಂದು ಆತುರವುಳ್ಳವನಾದನು. ಅತ್ತಿತ್ತ ನೋಡಿದನು ಶಂಕರನು ಎಲ್ಲಿಯೂ ಆ ಮಂದಿರದಲ್ಲಿ ಕಾಣಲಿಲ್ಲ. ಹೆಚ್ಚು ಹೆಚ್ಚು ಮಂದಿರದ ಒಳಹೊಕ್ಕು ನೋಡಹತ್ತಿದನು. ಕೊನೆಗೆ ಒಂದು ದಿವ್ಯ ವಾದ ಜಗುಲಿಯಮೇಲೆ ತನ್ನ ಹೆಂಡತಿಯೊಡನೆ ಜಗತ್ಕಲ್ಯಾಣಕ್ಕಾಗಿ ಕ್ರೀಡಿ ಸುತ್ತ ಕುಳಿತಿರುವ ಶಂಕರನನ್ನು ಕಂಡನು. ನೋಡಿ ಕೂಡಲೆ ಮುನಿಯು ಕೆಂಡದಂತೆ ಕಿಡಿಕಿಡಿಯಾದನು.

ಭೃಗುಮುನಿಯು ಮಂದಿರ ಪ್ರವೇಶಮಾಡಿದ್ದನ್ನು ಶಂಕರನು ಕಂಡಿರಲಿಲ್ಲ. ದೂರಿನಿಂದಲೇ ಬರುವ ಮುನಿಯನ್ನು ಪಾರ್ವತೀದೇವಿಯು ಕಂಡು ನಾಚಿಕೆಬಟ್ಟಳು. ಆಗಲೇ ಜಗುಲಿಯಿಂದ ಎದ್ದು ಕೆಳಗಿಳಿದಳು. ಹಾಗು ತನ್ನ ಪತಿಯನ್ನು ಕುರಿತು 'ಇಲ್ಲಿಗೆ ಭೃಗುಮುನಿಯ ಆಗಮನವಾಯಿತು' ಎಂದು ಹೇಳಿದಳು. ಕೂಡಲೆ ಶಂಕರನು ತನ್ನ ಕಡೆಗೇ ಬರುತ್ತಿರುವ ಆ ಮುನಿಯು ಒಮ್ಮೆಲೇ ನಿಂತುದನ್ನು ಕಂಡನು. ಮುನಿಯು ಇನ್ನೂ ಸಮೀಪಿಸಿರಲಿಲ್ಲ. ಶಂಕರನು ಆ ಮುನಿಯನ್ನು ನೋಡೀ ನೋಡದಂತಾಗಿ ಪಾರ್ವತಿಯನ್ನು ಕುರಿತು—ಆ ಮುನಿಯ ಕಿವಿಗ ತಾಗುವಂತೆ—'ಈಸಮಯದಲ್ಲಿ ಆ ಮುನಿಯು ಇಲ್ಲಿ ಮುಂದಾಗಿ ಸೂಚನೆ ಕಳಿಸದೆ ಬಂದುದು ಆತನ ಘೋರ ಅಪರಾಧವು. ಅವನಿಗೆ ಏನೊಂದು ಜ್ಞಾನವಿಲ್ಲೆಂದು ತಿಳಿಯುತ್ತದೆ. ಇದಕ್ಕಾಗಿ ನಾನು ಅವನನ್ನು ಇದೀಗಲೇ ಶಿಕ್ಷಿಸುವೆನು.' ಎಂದು ಹೇಳಿದನು. ಅಲ್ಲದೆ ಆ ಕೂಡಲೆ ತನ್ನ ಮುಖವನ್ನು ಆ ಮುನಿಯ ಕಡೆಗೆ ಹೊರಳಿಸಿ ಮಹಾಪ್ರಚಂಡವಾದ ತನ್ನ ಉರಿಗಣ್ಣನ್ನು ತೆರೆದನು. ಮತ್ತು ಜಗುಲಿಯಿಂದ ಇಳಿದು ಮುನಿಯ ಎದುರಿಗೆ ಆತನನ್ನು ದಂಡಿಸಲು ಹೋದನು. ಆಗಿನ ಆ ಶಂಕರನ ಉಗ್ರ ಸ್ವರೂಪವು ಭೃಗುಮುನಿಯಾಗದೆ ಇನ್ನೊಬ್ಬ ಯಾವನಾದರೂ ಸುರನರನಾಗಿದ್ದರೆ ತತ್ಕ್ಷಣವೇ ನಾಶಹೊಂದಿ ಹೋಗುತ್ತಿದ್ದನು. ಆದರೆ ತಪೋವೀರನಾದ ಭೃಗುವಿನ ಮುಂದೆ ಶಂಕರನ ಆ ರುದ್ರಪ್ರಭಾವದ ಆಟ ಸಾಗಲಿಲ್ಲ ಇಷ್ಟೇಅಲ್ಲ. ಆ ಮುನಿಯು ಕೊಟ್ಟ ಶಾಪಮಾತ್ರ ಶಂಕರನಿಗೆ ವಜ್ರಲೇಪವಾಯಿತು.

ಕೈಕೊಂಡ ಕಾರ್ಯವನ್ನು ಎಂಥ ಎಡರುಗಳು ಉಂಟಾದರೂ ಕೊನೆಗೆ ಮುಟ್ಟಿಸದೆ ಬಿಡುವದು ವೀರನ ಲಕ್ಷಣವಲ್ಲ ಭೃಗುಮುನಿಯು ತನಗೆ ಬ್ರಹ್ಮನ ಸತ್ಯಲೋಕದಲ್ಲಿಯೂ, ಶಂಕರನ ಕೈಲಾಸಗಿರಿಯಲ್ಲಿಯೂ ಉಂಟಾಗಿದ್ದ ಅಪಮಾನವನ್ನು ಲಕ್ಷಿಸದಾದನು. ಇದುವರೆಗೆ ತನಗೆ ಆಗಿದ್ದ ಹಾದಿಯ ದಣುವನ್ನು ಎಣಿಸದಾದನು. ಆದರೂ ಅವನ್ನು ತಾನು ಹಿಡಿದ ಕೆಲಸದಿಂದ ವಿಮುಖನಾಗಲಿಲ್ಲ.

ಕೈಲಾಸಗಿರಿಯಲ್ಲಿ ಶಂಕರನಿಗೆ ಶಾಪಕೊಟ್ಟು ನಂತರ ಅಲ್ಲಿಂದ ಹೊರಟು ಆತನು ವೈಕುಂಠಕ್ಕೆ ಹೊರಡಲು ಸಿದ್ಧನಾದನು. ಹಾಗೆಯೇ ಹೊರಟು

ಹಾದೀನಡೆದು ತನಗಾದ ಬಳಲಿಕೆಯನ್ನು ನೋಡದೆ ಶ್ರೀಮನ್ನಾರಾಯಣನ ಮಂದಿರವಿರುವ ವೈಕುಂಠನಗರಕ್ಕೆ ಬಂದನು.

ಶ್ರೀಹರಿಯ ವಾಸಸ್ಥಳವಾದ ವೈಕುಂಠವು ತನ್ನಲ್ಲಿ ಬಂದ ಭೃಗು ಮುನಿಯನ್ನು ತನ್ನ ರಮಣೀಯತೆಯಿಂದ ಆನಂದಗೊಳಿಸಿತು ಆತನ ಮನಸಿಗೆ ಉಂಟಾದ ಕಳವಳವು ಶಾಂತವಾಯಿತು ಹರಿ ಮಂದಿರದ ಭವ್ಯವಾದ ಪ್ರಾಕಾರವೂ, ಗೋಪುರ ಶಿಖರಗಳೂ ಆತನನ್ನು ಬೆರಗುಗೊಳಿಸಿದವು ಆ ಮಂದಿರದ ನಾಲ್ಕೂ ಕಡೆಯ ದ್ವಾರಗಳನ್ನು ಹಗಲೂ–ರಾತ್ರಿಯೂ ಕಣ್ಣೆವೆ ಯಿಕ್ಕದೆ ದ್ವಾರಪಾಲಕರು ರಕ್ಷಿಸುತ್ತಿದ್ದರು ಆ ದ್ವಾರ ರಕ್ಷಕರ ದಕ್ಷತೆ ಯನ್ನು ಕಂಡು ಭೃಗುಮುನಿಯು ಸಂತೋಷಬಟ್ಟನು ಒಂದೆ ವಿಧಿ ಯಿಂದಲೂ ಹರನಿಂದಲೂ ತನಗಾದ ಅವಮಾನವನ್ನು ಮರೆತು ಈ ಹರಿ ಮಂದಿರದ ಮಹಾದ್ವಾರದಿಂದ ಏನೊಂದು ಅಡ್ಡಿಯಾಗದೆ ಒಳಸೇರಿದನು

ಭೃಗುಮುನಿಯು ಹರಿಮಂದಿರದಲ್ಲಿ ಸುತ್ತಿತ್ತ ನೋಡುತ್ತ ಮುಂದೆ ನಾಗಿ ದನು ಅಲ್ಲಿ ಒತ್ತಟ್ಟಿಗೆ ಶ್ರೀಮಹಾವಿಷ್ಣುವು ಜಗನ್ಮಾತೆಯಾದ ಮಹಾಲಕ್ಷ್ಮಿ ಯಿಂದ ಸಹಿತವಾಗಿ ಶೇಷತಲ್ಪದ ಮೇಲೆ ಮಲಗಿರುದನ್ನು ಕಂಡನು ಕೂಡಲೆ ಆ ಮುನಿಯಲ್ಲಿ ಅಡಗಿದ ಸಿಟ್ಟು ಮತ್ತೆ ಹುಟ್ಟಿತು ಅವನ ಕಣ್ಣುಗಳು ಕಿಡಿಯನ್ನು ಕಾರುವ ಕೆಂಡದಂತೆ ಕೆಂಪಾದವು. ತುಟಿಗಳೆರಡೂ ಒಂದೇಸವನೆ ಅದುರ ಹತ್ತಿದವು “ ನಾನು ಎಲ್ಲಿ ನೋಡಿದರೂ ಇದೇ ಸ್ಥಿತಿಯು ಕಂಡು ಬರುವದಲ್ಲ!” ತನ್ನಲ್ಲಿ ಮಟಗುಟ್ಟುತ್ತ ಭರದಿಂದ ಶ್ರೀಹರಿಯು ಮುಂದೆ ಬಂದುನಿಂತರು. ಮತ್ತು ಅವನನ್ನು ಏನೂ ವಿಚಾರಿಸದೆ ತನ್ನ ಎಡ ಗಾಲಿನಿಂದ ಅವನ ಎದೆಗೆ ಒದೆದನು! “ಹಾಯ್! ಹಾಯ್!! ಎಂಥ ಅನರ್ಥಕಾರಕ ಪ್ರಸಂಗವಿದು?” ಎಂದು ಲಕ್ಷ್ಮೀದೇವಿಯು ನುಡಿದಳು. ಹಾಗು ತನ್ನ ಮನಸಿನಲ್ಲಿ ತಳಮಳಿಸಹತ್ತಿದಳು ಭೃಗುಮುನಿಯ ಪಾದದ ಹೊಡೆತದಿಂದ ಹರಿಯು ಚೇತರಿಸಿಕೊಂಡು ಎದ್ದುನಿಂತನು. ತನ್ನ ಎದುರಿಗೆ ಮೂರ್ತಿಮತ್ತಾಗಿನಿಂತ ಸಿಟ್ಟಿನ ಭೃಗುಮುನಿಯನ್ನು ಕಂಡು— “ಮುನಿ ವರ್ಯರೆ! ನನ್ನಿಂದ ಅಕ್ಷಮ್ಯವಾದ ಅಪರಾಧವಾಯಿತು ಅದಕ್ಕೆ ತಕ್ಕ ಶಾಸನವೂ ನನಗಾಯಿತು. ತಾವು ಇನ್ನು ನನ್ನನ್ನು ಕ್ಷಮಿಸಬೇಕು.” ಎಂದು

ನುಡಿದನು ಹಾಗೂ ಮುಂದಕ್ಕೆ ಬಂದು ಮುನಿಯ ಪಾದಗಳಿಗೆ ನಮಸ್ಕರಿಸಿದನು. ತನಗಾದ ನೋವನ್ನು ಮರೆತು ಆ ಮುನಿಯನ್ನು ಆಲಿಂಗಿಸಿದನು. ಮತ್ತು ತನ್ನ ರೋಷವಿಲ್ಲದ ಮಾತುಗಳಿಂದ—'ಮುನಿವರ್ಯರೆ! ಕಠಿಣತರವಾಗಿರುವ ಹಾಗು ಮುಪ್ಪು–ಮರಣಗಳಿಲ್ಲದ ನನ್ನ ಈ ಶರೀರವನ್ನು ಸೋಂಕಿದ ನಿಮ್ಮ ಪಾದಗಳು ಎಷ್ಟು ನೊಂದಿರುವವೋ ಏನೋ? ಆ ವ್ಯಥೆಯನ್ನು ತಾವು ತಾಳಿಕೊಳ್ಳಬೇಕು' ಎಂದು ಸಮಾಧಾನ ಬೀರುವ ಮಾತುಗಳನ್ನು ಆಡಿದನು; ಹಾಗು ಮುನಿಯ ಪಾದಗಳನ್ನು ಒತ್ತಹತ್ತಿದನು. ಬಿಸಿನೀರನ್ನು ತರಿಸಿ ಪಾದಗಳನ್ನು ತೊಳೆದು ತನ್ನ ಶಲ್ಯದಿಂದ ಒರಸಿದನು ಆ ಮುನಿಯ ಚರಣತೀರ್ಥವನ್ನು ತನ್ನ ಶಿರಸ್ಸಿನಲ್ಲಿ ಧಾರಣಮಾಡಿದನು ಹಾಗು ವೇದಗಳನ್ನು ಹುಟ್ಟಿಸುವ ತನ್ನ ಮುಖದಿಂದ 'ಸ್ವಾಮಿ! ತಮ್ಮ ದರ್ಶನವು ಇಂದು ನನಗೆ ಲಭಿಸಿತು ನಾನು ಕೃತ್ಯಕೃತ್ಯನಾದೆನು ತಮ್ಮಂಥವರ ಪಾದಮಹಿಮೆಯಿಂದಲೇ ಲೋಕಗಳೆಲ್ಲ ಪವಿತ್ರವಾಗುವವು ಎಂದು ಮತ್ತೆ ಮತ್ತೆ ಸ್ತುತಿಸಿ ಕೊಂಡಾಡಹತ್ತಿದನು.

"ಸಿಟ್ಟಿನ ಭರದಲ್ಲಿ ತಾನು ಶ್ರೀಹರಿಯಮೇಲೆ ಹರಿಹಾಯ್ದುದು ತನ್ನ ದೊಡ್ಡ ತಪ್ಪಾಯಿತು" ಎಂದು ಭೃಗುಮುನಿಯು ಪಶ್ಚಾತ್ತಾಪ ಪಡಹತ್ತಿದನು "ತಾನು ಮಾಡಿದ ಕ್ರಿಯೆಗೆ ಶ್ರೀಹರಿಯು ಏನೂ ಸೇಡುತೀರಿಸಿಕೊಳ್ಳುವ ವಿಚಾರವನ್ನು ಮನಸಿನಲ್ಲಿ ತರಲಿಲ್ಲವಲ್ಲ! ಅವನು ಎಂಥ ದೊಡ್ಡವನು? ವೈಕುಂಠವಾಸಿ ಈ ಹರಿಯ ಯೋಗ್ಯತೆಯೇನು? ಯಃಕಶ್ಚಿತ ಅರಣ್ಯವಾಸಿ ನಾನೊಬ್ಬ ಬಡಮುನಿಯ ಪಾಡೇನು? ನಾನು ಹೀಗೆ ಶ್ರೀಹರಿಯ ಮೇಲೆ ಹರಿಹಾಯ್ದುದ್ದು ನನ್ನದು ತಪ್ಪು. ನಿಜವಾಗಿಯೂ ತಪ್ಪು!" ಎಂದು ಭೃಗುಮುನಿಯು ಬಹಳೇ ಪಶ್ಚಾತ್ತಾಪಪಡಹತ್ತಿದನು. ಭೃಗುಮುನಿಯ ತಲೆಯಲ್ಲಿ ಈ ವಿಚಾರಗಳು ನಡೆದಿರುವಾಗಲೇ ಶ್ರೀಹರಿಯಿಂದ ಮುನಿಗೆ ತಕ್ಕವಾದ ಉಪಚಾರಗಳೆಲ್ಲ ಯಥಾವಿಧಿಯಾಗಿ ಮುಗಿದುವು

ಶ್ರೀಹರಿಯಿಂದ ಸನ್ಮಾನವನ್ನು ಪಡೆದ ಮುನಿಯು ತಾನು ಭೂಲೋಕಕ್ಕೆ ತಿರುಗಿ ಹೋಗಲು ಸಿದ್ಧನಾದನು. ಹರಿಯು ಆ ಮುನಿಯನ್ನು ಮರ್ಯಾದೆಯಿಂದ ಮಂದಿರ ದ್ವಾರದವರೆಗೆ ಕಳಿಸಿಬಂದನು.

ಭೃಗುಮುನಿಯು ವೈಕುಂಠದಿಂದ ಹೊರಬಿದ್ದು ಭೂಲೋಕದ ಮಾರ್ಗ ಹಿಡಿದನು. ಹಾದಿಯಲ್ಲಿ ಒಂದೆಸವನೆ "ಹರಿಸರ್ವೋತ್ತಮ" ಎಂದು ಗರ್ಜಿಸುತ್ತ ನಡೆದನು. ಹಾ, ಹಾ, ಎನ್ನುವಷ್ಟರಲ್ಲಿ ಆತನು ವೈಕುಂಠದಿಂದ ಹೊರಟು ಭೂಲೋಕವನ್ನು ಬಂದು ಸೇರಿದನು. ಭಾಗೀರಥೀತೀರದಲ್ಲಿ ಯಜ್ಞದ ಆರಂಭ ನಡೆಯಿಸಿರುವ ಋಷಿಗಳ ಹತ್ತಿರ ಬಂದನು.

ಸಪ್ತರ್ಷಿಗಳೆಲ್ಲರೂ ಭೃಗುಮುನಿಯು ಬರುವ ಹಾದಿಯನ್ನೇ ಕಾಯುತ್ತಿದ್ದರು 'ಹರಿಸರ್ವೋತ್ತಮ' ಎಂದು ಒದರುತ್ತಬರುವ ಭೃಗುಮುನಿಯನ್ನು ಎಲ್ಲರೂ ಆನಂದದಿಂದ ಸ್ವಾಗತಮಾಡಿದರು. 'ಯಜ್ಞಫಲ್ಲವೆಲ್ಲ ಶ್ರೀಹರಿಗೇ ಸಲ್ಲತಕ್ಕದ್ದು' ಎಂದು ಮುನಿಯಾಡಿದ ಮಾತಿಗೆ ಸರ್ವಋಷಿಗಳೂ ಸಂತೋಷಬಟ್ಟರು ಸುರುಮುನಿನಾರದರಂತೂ 'ನಾರಾಯಣ' ಎಂದು ಸ್ಮರಿಸುತ್ತ ಆನಂದಭರಿತನಾದನು.

ಆ ಬಳಿಕ ಸಪ್ತರ್ಷಿಗಳು ಹೂಡಿದ ಯುಗವು ಏನೊಂದು ತಡೆಯಿಲ್ಲದೆ ಕೊನೆಗಂಡಿತು. ಯಾವ ವಿಧದಲ್ಲಿಯೂ ಕಡಿಮೆಯಾಗಲಿಲ್ಲ 'ಯಜ್ಞದ ಫಲವು' ಶ್ರೀಹರಿಗೇ ಅರ್ಪಣವಾಯಿತು

ವೈಕುಂಠದಿಂದ ಭೃಗುಮುನಿಯು ಮರ್ಯಾದೆಹೊಂದಿ ಭೂಲೋಕಕ್ಕೆ ತೆರಳಿದ ನಂತರ ಅಲ್ಲಿ ಶ್ರೀಹರಿಮಂದಿರದಲ್ಲಿ ಒಂದು ಮಹತ್ವದ ಘಟನೆ ಯುಂಟಾಯಿತು. ಶ್ರೀಜಗನ್ಮಾತೆ ಲಕ್ಷ್ಮೀದೇವಿಗೆ ಬಲು ಸಂತಾಪ! ಅದಕ್ಕೆ ಕಾರಣವೆಂದರೆ ತನ್ನ ಪತಿಯನ್ನು ಭೂಲೋಕದ ಯಃಕಶ್ಚಿತ ಮುನಿಯು ಒದೆದುದೇ ತನ್ನ ಗಂಡನ ಎದೆಗೆ ಮುನಿಯಪಾದದ ಹೊಡೆತ ತಾಗಿದ ಕೂಡಲೆ ಅಲ್ಲಿಯೇ ಬಳಿಯಲ್ಲಿದ್ದ ಅವಳ ಮೃದು ಹೃದಯವು ಕನ್ನಡಿಯಂತೆ ಒಡೆದು ಚೂರಾಯಿತೆಂದು ಹೇಳಬಹುದು ಆ ಹೊಡೆತವನ್ನು ತಾಳಿಕೊಂಡ ತನ್ನ ಗಂಡನ ವಿಷಯವಾಗಿ ಅಂದೆಯೇ ಅವಳಲ್ಲಿ ಅನಾದರ ಭಾವನೆಯು ಉಂಟಾಯಿತು ಆ ಭಾವನೆಯ ಮೊಳಿಕೆಯು ಬೆಳೆದು, ಕೂಡಲೆ ಮರವಾಯಿತು. ಆಕೆಯು ತನ್ನ ಪತಿಯನ್ನು ಕುರಿತು 'ದೇವಾ! ಆ ವರುಣನ ಮಗನಾದ ಭೃಗುಮುನಿಯಿಂದಾದ ಅವಮಾನವನ್ನು ನೀವು ತಾಳಿಕೊಂಡಿರಿ. ನಿಮ್ಮ ಹೃದಯವೆಂದರೆ ಅದು ನನ್ನ ಆ ವಾಸಸ್ಥಾನವಾಗಿದ್ದು ಅದಕ್ಕೆ

ಆ ಯಃಕಶ್ಚಿತ ಮುನಿಯ ಪಾದ ತಟ್ಟಬೇಕೆ? ಇದರಿಂದ ಪವಿತ್ರವಾದ ನಿಮ್ಮ ಹೃದಯವು ದೂಷಿತವಾಗಲಿಲ್ಲೇ? ಆ ಮುನಿಯ ಈ ನೀಚ ಕೃತ್ಯದ ಸೇಡು ನಿಮ್ಮಿಂದ ತೀರಿಸಲ್ಪಟ್ಟಿತೇ? ಏನೊಂದೂ ನಿಮ್ಮಿಂದ ಪ್ರತೀಕಾರವಾಗಲಿಲ್ಲ ಇಷ್ಟೇ ಅಲ್ಲ ಹೇಡಿಗಳಂತೆ ಅವನಿಂದಾದ ಅವಮಾನವನ್ನು ಎಣಿಸದೆ ಪ್ರತೀ ಕಾರದ ಬದಲು ಆ ಮುನಿಗೆ ನೀವು ಮೇಲಾದ ಸತ್ಕಾರವನ್ನು ಮಾಡಿ ಕಳಿಸಿ ದಿರಿ. ಇವೆಲ್ಲವನ್ನು ನಾನು ಹೇಗೆ ಸಹನ ಮಾಡಬೇಕು? ತನ್ನ ಪತಿದೇವ ನಿಗಾದ ಅನ್ಯಾಯ, ಅನಾದರ, ಅಪಮಾನ ಮುಂತಾದ ಅಪಕ್ರಿಯೆಗಳನ್ನು ಕಣ್ತೆರೆದು ನೋಡದೆ ಸಹನಮಾಡಿಕೊಂಡು ಹೋಗುವ ಸ್ತ್ರೀಯಳು ಈ ಲೋಕಗಳಲ್ಲಿ ಯಾರಾದರೂ ಇರುವರೆ? ಇವೆಲ್ಲವನ್ನು ನೀವು ಒಪ್ಪಿದರೂ ಕೂಡ ನಾನು ಮಾತ್ರ ಒಂದು ಸ್ವಲ್ಪ ಸಹ ಒಪ್ಪುವದಿಲ್ಲ. ನೀವು ಸಹನ ತಾಳಿದಂತೆ ನಾನು ಸಹನಮಾಡಲಾರೆ; ಇನ್ನು ನೀವು ಇದ್ದ ಸ್ಥಾನದಲ್ಲಿ ನಾನು ನಿಲ್ಲಲಾರೆ; ಭೂಲೋಕದಲ್ಲಿಯ ಕರವೀರನಗರಿಗೆ ನಾನೀಗ ಹೋಗುವೆ. ನೀವೊಬ್ಬರೇ ಇರಿರಿ" ಎಂದು ನುಡಿದು—ಅಲ್ಲಿಂದ ನಡೆದೇ ಬಿಟ್ಟಳು. ಭೂಲೋಕಕ್ಕೆ ಬಂದಳು. ಕರವೀರಪುರವನ್ನು ಸೇರಿದಳು.

"ತನ್ನ ಪ್ರಿಯಪತ್ನಿ ಲಕ್ಷ್ಮೀ ಮಹಾದೇವಿಯು ತನ್ನೊಡನೆ ಜಗಳ ಹೂಡಿ ಹೋಗಿಬಿಟ್ಟಳು. ಇನ್ನೇನು ಮಾಡತಕ್ಕದ್ದು?" ಎಂದು ಶ್ರೀಹರಿಯು ಮನಸ್ಸಿನಲ್ಲಿ ತಳಮಳಿಸುತ್ತಿರುವದು ಆಶ್ಚರ್ಯವಲ್ಲ! 'ಆಕೆಯು ಸಿಟ್ಟು ವ್ಯರ್ಥ ವಾದುದಲ್ಲ; ಆಕೆಯು ನನ್ನ ಹಿತವನ್ನು ಲಕ್ಷಿಸುವಳು, ನಾನು ಜಗತ್ತಿನ ಹಿತ ವನ್ನು ನೋಡುವೆನು. ಹೀಗಿದ್ದರೂ ನಾನು ಆಕೆಯ ಹಿತಕ್ಕಾಗಿ ಯತ್ನಿ ಸುವದನ್ನು ಬಿಡುವದು ತಪ್ಪಾಗುತ್ತದೆ. ಇಂದಿಲ್ಲ ಮುಂದಾದರೂ ಈ ನಮ್ಮ ಗೃಹಕಲಹವನ್ನು ನಾನು ಶಾಂತಗೊಳಿಸಲೇಬೇಕು. ಅದಕ್ಕಾಗಿ ನಾನು ಇಂದಿನಿಂದಲೇ ತಕ್ಕ ಕರ್ತವ್ಯವನ್ನು ಕೈಕೊಳ್ಳುವೆನು ಎಂದು ನಿರ್ಧಾರ ಮಾಡಿದನು. ಅದರಂತೆ ಆತನು ವೈಕುಂಠದಿಂದ ಹೊರಟು ಭೂಲೋಕಕ್ಕೆ ಬಂದನು. ದೇವಲೀಲೆಯಿಂದ ಮಾನವನಾಗಿ ಭೂಲೋಕದಲ್ಲಿಯ ಶೇಷಾ ಚಲಕ್ಕೆ ಸೇರಿದನು.

ಶ್ರೀಹರಿಯು ಬಂದಿಳಿದ ಶೇಷಾಚಲವು ಗಂಗೆಯ ದಕ್ಷಿಣದಲ್ಲಿದೆ ಗಂಗೆ ಯಿಂದ ಮುನ್ನೂರು ಯೋಜನದಂತರದಲ್ಲಿ ಶುಕ ಹಾಗು ಅಗಸ್ತ್ಯರ ಆಶ್ರಮ

ಗಳಿವೆ ಆ ಆಶ್ರಮಗಳ ಸಮೀಪದಲ್ಲಿಯೇ ಸುವರ್ಣಮುಖರೀ ಎಂಬ ನದಿಯು ಹರಿದದೆ. ಆ ನದಿಯ ಮೇಲ್ಗಡೆಗೆ ಎರಡುವರೆಯೋಜನದಲ್ಲಿ ಈ ಶೇಷಾಚಲವುಂಟು. ಈ ಪರ್ವತಕ್ಕೇ ವೈಕುಂಠಗಿರಿಎಂದೂ ಮೇರುಪುತ್ರನೆಂದೂ ಕರೆಯುವರು ಭೂಲೋಕದಲ್ಲಿ ವೈಕುಂಠಲೋಕಕ್ಕೆ ಸಮವಾಗಿಯೂ ಶ್ರೀವಿಷ್ಣುವಿನ ವಾಸ್ತವ್ಯಕ್ಕೆ ತಕ್ಕದ್ದಾಗಿಯೂ ಆ ಪರ್ವತವಿರುವದು ಅಲ್ಲದೆ ಅಲ್ಲಿ ಪ್ರತ್ಯಕ್ಷ ಶೇಷನು ಅವತರಿಸಿದ್ದದರಿಂದ ಕಲಿಯುಗದಲ್ಲಿ ಅದನ್ನು ಶೇಷಾಚಲವೆಂದು ಕರೆಯುವರು ಇದಕ್ಕೂ ಮೊದಲು ದ್ವಾಪರಯುಗದಲ್ಲಿ ಆ ಪರ್ವತ ಪ್ರದೇಶವು ಶೇಷ ಮತ್ತು ವಾಯುಗಳ ವಾದ ಪ್ರಸಂಗದಲ್ಲಿ ವಾಯುದೇವನಿಂದ ಸ್ಥಾಪಿತವಾಗಿ ವ್ಯಾಪಿಸಿರುವದು ಈ ಅತಿ ವಿಸ್ತಾರವಾದ ಪರ್ವತಕ್ಕೆ ವೇಂಕಟಾಚಲವೇ ಮುಖವೆಂದೂ ಅಹೋಬಲಗಿರಿಯೇ ಮಧ್ಯವೆಂದೂ ಶ್ರೀಶೈಲಪರ್ವತವೇ ಅದರ ಹಿಂದುದಿಯೆಂದೂ •ಗ್ರಹಿಸಬಹುದಾಗಿದೆ. ಈ ಪ್ರಕಾರ ಶೇಷ ಸ್ವರೂಪದ ಈ ಎಲ್ಲ ಪರ್ವತದ ಭಾಗಗಳಿಗೆ ಒಟ್ಟಾಗಿ 'ಶೇಷಾಚಲ' ಎಂದು ಹೆಸರು.

ಶ್ರೀಮನ್ನಾರಾಯಣನು ಇದೇ ಶೇಷಾಚಲವು ಭೂಲೋಕದಲ್ಲಿ ತನಗೆ ಇರಲು ತಕ್ಕದಾದುದೆಂದು ತಿಳಿದನು. ಹಾಗು ಲಕ್ಷ್ಮೀದೇವಿಯು ಕರವೀರ ಪುರಕ್ಕೆ ಹೋದನಂತರ ತಾನು ಈ ಶೇಷಾಚಲದಲ್ಲಿ ಬಂದು ಇರಹತ್ತಿದನು.

ಆ ಶೇಷಾಚಲದಲ್ಲಿ ಎಲ್ಲಕಡೆಯಲ್ಲಿಯೂ ಪನಸ, ಮಂದಾರ, ಪಾರಿಜಾತಾದಿ ಗಿಡ–ಮರಗಳು ದಟ್ಟವಾಗಿ ಹಾಗು ಎತ್ತರವಾಗಿ ಬೆಳೆದಿದ್ದವು. ಅಲ್ಲಲ್ಲಿ ತುಂಬಿತುಳುಕುವ ಕೆರೆ–ಸರೋವರಗಳೂ, ಸಣ್ಣ–ದೊಡ್ಡ ಪ್ರವಾಹಗಳೂ ಕಂಡು ಬರುತ್ತಿದ್ದವು ಅಲ್ಲಿರುವ ಜಲಾಶಯ–ತೀರ್ಥಗಳಲ್ಲಿ ಮಂಜುಲ ಸ್ವರದಿಂದ ಉಲಿಯುವ ಗಿಳಿ ಕೋಗಿಲೆ ಮೊದಲಾದವುಗಳಿಂದಬಲುಶೋಭೆಯುಂಟಾಗಿತ್ತು. ಪರ್ವತದ ಅರಣ್ಯಗಳಲ್ಲಿ ಹುಲಿ–ಸಿಂಹ ಮೊದಲಾದ ವನ್ಯಶ್ವಾಪದಗಳ ಸುಳಿದಾಟಕ್ಕೆ ಮಿತಿಯೇ ಇರಲಿಲ್ಲ. ನರಿ–ಕರಡಿ, ಮೊಲ–ಚಿಗರೆ, ಕಾಡಾಕಳು–ಕಸ್ತೂರೀಮೃಗಗಳು ಮುಂತಾದವುಗಳೆಲ್ಲ ಸ್ವೇಚ್ಛೆಯಿಂದ ಸಂಚರಿಸುತ್ತಿದ್ದವು. ಇವಲ್ಲದೆ ಮನುಷ್ಯರನ್ನು ನಂಬಿಕೊಂಡಿರುವ ಹಾಗೂ ಅವರಿಗೆ ಉಪಯೋಗಕ್ಕೆ ಬೀಳುವ ಆಕಳುಗಳು ಹಿಂಡುಗಟ್ಟಿಕೊಂಡು ಅಲ್ಲಿ ಮೇಯುತ್ತಿದ್ದವು. ಆ ಪರ್ವತ ಪ್ರದೇಶದಲ್ಲಿ ಅಲ್ಲಲ್ಲಿಗೆ ಹಲವು ಪುಷ್ಪ

ವಾಟಿಕೆಗಳು ಶೋಭಾಯಮಾನವಾಗಿ ತೋರುತ್ತಿದ್ದವು. ಅವುಗಳಲ್ಲಿಯ ಮಲ್ಲಿಗೆ, ಮಾಲತಿ, ಚಂಪಕ ಮೊದಲಾದ ಹೂಗಿಡಗಳಿಂದ ಹಬ್ಬುವ ಸುಗಂಧ ಪರಿಮಳವು ವನಗಳನ್ನೆಲ್ಲ ಘಮಘಮಿಸಿ ಬಿಡುತ್ತಿದ್ದವು. ಬಹಳ ಹೇಳುವ ದೇನು? ಅಲ್ಲಿಯವನಗಳೆಲ್ಲ ಪುಣ್ಯಕರವೆಂದೂ ಸಂಪತ್ತಿನಿಂದ ಕೂಡಿದವೆಂದೂ ಹೇಳಲು ಅಡ್ಡಿಯಿರಲಿಲ್ಲ. ಇದೀ ಪರ್ವತದ ಮನೋಹರತೆಯನ್ನು ಸುರ ಲೋಕಕ್ಕೆ ಹೋಲಿಸ ಬಹುದಾಗಿತ್ತು. ಆ ಪರ್ವತದಲ್ಲಿಯ ಗಿಡಮರಗಳೆಲ್ಲ ಸುರಲೋಕದ ದೇವತೆಗಳೆಂದೂ, ಕಪಿವಾನರಗಳು ಸುರಲೋಕದಲ್ಲಿದ್ದ ಋಷಿ ಗಳೆಂದೂ, ಪಕ್ಷಿಗಳೆಲ್ಲ ಚಂದ್ರಲೋಕದಲ್ಲಿದ್ದ ಪಿತೃಗಳೆಂದೂ ಭಾವಿಸಬಹುದು ಇದಲ್ಲದೆ ಆ ಪರ್ವತದಲ್ಲಿ ಚಲ್ಲುವರಿದುಬಿದ್ದ ಸಣ್ಣ ದೊಡ್ಡ ಶಿಲೆಗಳು ಸುರ ಲೋಕದಲ್ಲಿಯ ಯಕ್ಷ–ಗಂಧರ್ವ ಕಿನ್ನರರೆಂದು ತಿಳಿಯಬಹುದಾಗಿತ್ತು. ಇಂಥ ಭೂಲೋಕದ ರಮ್ಯವಾದ ಶೇಷಾಚಲವನ್ನೇ ಶ್ರೀಹರಿಯು ಸುರಲೋಕದ ವೈಕುಂಠಗಿರಿಯೆಂದೇ ತನ್ನ ವಾಸಕ್ಕಾಗಿ ಆರಿಸಿದನು ಇಷ್ಟೆಲ್ಲಸೊಬಗಿಗೆ ಆತನ ಪ್ರಭಾವವೆಂದೇ ಹೇಳಬಹುದು ಬ್ರಹ್ಮಾದಿ ದೇವತೆಗಳೆಲ್ಲ ಕೂಡ ಆ ಹರಿಯ ಹಾಗು ಆತನು ಅವತರಿಸಿದ ಪರ್ವತದ ಮಹತ್ವವನ್ನು ತಿಳಿಯುವದರಲ್ಲಿ ಅಜ್ಞ ರೆಂದೇ ಹೇಳುವಲ್ಲಿ ಮರ್ತ್ಯರಾದ ಹಾಗು ಮಂದಬುದ್ಧಿಯವರಾದ ಮನು ಷ್ಯರು ಆ ಪರ್ವತದ ವರ್ಣನೆಮಾಡಲು ಸಾಧ್ಯವಿರುವದೇ?



# ೩ನೆಯ ಅಧ್ಯಾಯ

ಈ ಮೊದಲು ವರ್ಣಿಸಿದ ಶ್ರೀಹರಿಯು ಇಳಿದ ಪ್ರದೇಶ ಅರ್ಥಾತ್ ಶೇಷಾಚಲದ ಪಾವಿತ್ರ್ಯತೆಯನ್ನು ವ್ಯಕ್ತಪಡಿಸುವ 'ಸ್ವಾಮಿ ಪುಷ್ಕರಿಣಿ' ಎಂಬ ತೀರ್ಥವು ಅಲ್ಲಿ ಮುಖ್ಯವಾದದ್ದಿರುವದು. ಆ ತೀರ್ಥದಲ್ಲಿ ಮೀನು, ಮೊಸಳೆ ಮೊದಲಾದ ಜಲಚರಗಳೂ, ಕುಕ್ಕುಟ, ಸರ್ಪಮೊದಲಾದ ಭೂಚರ ಪ್ರಾಣಿಗಳೂ ನಿರಂತರವಾಗಿ ವಾಸಮಾಡಿಕೊಂಡಿರುವವು ಅದರ ಸುತ್ತಲಿನ ದಂಡೆಯ ಪ್ರದೇಶವು ಮುಗಿಲನ್ನು ಮುದ್ದಿಡುವ ಗಿಡ-ಮರಗಳಿಂದ ಶೋಭೆ ಯುಳ್ಳದಾಗಿತ್ತು ಪುಣ್ಯಪಾವನೆ ಭಾಗೀರಥಿಯೇ ಮೊದಲಾದ ಸಮಸ್ತ ತೀರ್ಥ ಪ್ರವಾಹಗಳಿಗೆ ಈ ಸ್ವಾಮಿ ಪುಷ್ಕರಣಿಯೇ ಮಾತೃ ಭೂಮಿಯಂತೆ ಶೋಭಾಯಮಾನವಾಗಿರುವದು. ಇಂಥ ಆ ಪುಣ್ಯಕರ ತೀರ್ಥದಲ್ಲಿ ಸ್ನಾನ ಮಾಡಿದವರ ಪಾಪಗಳು ನಾಶವಾಗಿ ಅವರು ಪವಿತ್ರರಾಗುವರು. ಅವರೇ ಪುಣ್ಯಾತ್ಮರೆಂದು ಎನ್ನಿಸುವರು. ದೇವತೆಗಳೂಕೂಡ ಆ ತೀರ್ಥದಲ್ಲಿ ಧನು ರ್ಮಾಸದಲ್ಲಿ ಸ್ನಾನಮಾಡುವರು ಬ್ರಾಹ್ಮಣರು ತಮ್ಮ ಪಿತೃಗಳು ಬ್ರಹ್ಮ ಲೋಕವನ್ನು ಪಡೆಯಲಿ ಎಂಬ ಉದ್ದೇಶದಿಂದ ಆ ತೀರ್ಥದಲ್ಲಿಯೇ ಶ್ರಾದ್ಧ- ತರ್ಪಣಗಳನ್ನು ನೆರವೇರಿಸಿಕೊಳ್ಳುವರು ಅದೇ ತೀರ್ಥದಲ್ಲಿ ಶಂಖನೆಂಬ ಹೆಸರಿನರಾಜನೂ ಆಂಗಿರಸಪುತ್ರ ನಾರಾಯಣಋಷಿಯೂ ಸ್ನಾನಾದಿ ವಿಧಿ ಗಳಿಂದ ಶ್ರೀಹರಿಯ ದರ್ಶನ ಪಡೆದರು ಅದರಂತೆಯೇ ಅಯೋಧ್ಯೆಯ ದಶರಥನ ಮಗನಾದ ಶ್ರೀರಾಮನು ಇಲ್ಲಿಯೇ ಸ್ನಾನಮಾಡಿ ತನ್ನಿಂದಗಲಿದ ಸತಿ ಸೀತೆಯನ್ನು ಪುನಃ ಹೊಂದಿದನು ಇವೆಲ್ಲ ಘಟನೆಗಳಿಂದ ಸ್ವಾಮಿ ಪುಷ್ಕರಿಣಿ ತೀರ್ಥವೇ ಎಲ್ಲ ತೀರ್ಥಗಳಲ್ಲಿ ಶ್ರೇಷ್ಠವೂ ಪುಣ್ಯದಾಯಕವೂ ಆಗಿ ರುವದೆಂಬದರಲ್ಲಿ ಸಂಶಯವಿಲ್ಲ.

ಮೇಲೆ ಹೇಳಿದ ಸ್ವಾಮಿ ಪುಷ್ಕರಿಣಿ ತೀರ್ಥವು ಪುಣ್ಯಕರವಾದ ಮೂರು ಕೋಟಿ ತೀರ್ಥಗಳಲ್ಲಿ ಶ್ರೇಷ್ಠವು. ಈ ತೀರ್ಥದ ಪಶ್ಚಿಮ ಸಿಟ್ಟೆನಲ್ಲಿ ವಾರಾಹ ಮುದ್ರೆಯ ಶ್ರೀಹರಿಯು ಭೂದೇವಿಯಿಂದ ಸಹಿತನಾಗಿ ಒಂದು ಅಶ್ವತ್ಥ ವೃಕ್ಷದ ಕೆಳಗೆ ಶೋಭಾಯಮಾನನಾಗಿರುವನು. ಶ್ರೀಮನ್ ನಾರಾಯಣನು

ಈ ಗಿರಿಯು ವೈಕುಂಠಕ್ಕಿಂತಲೂ ಹೆಚ್ಚು ಅನುಕೂಲವಾದುದೆಂದರಿತು ತಾನು ಅಜ್ಞಾತವಾಗಿ ವಾಸಿಸಲು ಇಲ್ಲಿಯೇ ಬಂದನು ಈ ಸ್ವಾಮಿಪುಷ್ಕರಿಣಿಯ ದಕ್ಷಿಣ ದಿಕ್ಕಿಗಿದ್ದ ಹುಣಸೆಯಮರದ ಕೆಳಗಿರುವ ಒಂದು ಹುತ್ತವನ್ನು ನಿರೀಕ್ಷಿಸಿ ಆನಂದಭರಿತನಾದನು ಹಾಗು ಆತನು ಆ ಹುತ್ತದಲ್ಲಿಯೇ ವಾಸಮಾಡಿ ಕೊಂಡಿರಹತ್ತಿದನು.

ಇಂತು ಅಜ್ಞಾತವಾಸಿ ಶ್ರೀಹರಿಯು ಆ ಹುತ್ತದಲ್ಲಿ ದ್ವಾಪರ ಮತ್ತು ಕಲಿಯುಗಗಳ ನಡುವಿನ ಸಾವಿರ ವರುಷಗಳವರೆಗೆ ನಿಶ್ಚಿಂತನಾಗಿ ಇದ್ದನು.

ಮುಂದೆ ಸ್ವಲ್ಪಕಾಲದಲ್ಲಿ ಅಂದರೆ ಕಲಿಯುಗದಾದಿಯಲ್ಲಿ ನಾಗ ಕನ್ನಿಕೆಯ ಉದರದಿಂದ ಚೋಳನೆಂಬವನು ಹುಟ್ಟಿದನು ಬೆಳೆದು ದೊಡ್ಡವ ನಾದನು ರಾಜನಾಗಿ ಇಡೀ ಭರತಖಂಡವನ್ನು ಧರ್ಮದಿಂದ ಪರಿಪಾಲಿಸಿ ದನು. ಆತನಾಳುವ ಈ ನಾಡಿನಲ್ಲಿ ಪ್ರಜರು ಸುಖದಿಂದಿದ್ದರು ಆ ಕಾಲಕ್ಕೆ ಕಾಲಾನುಸಾರವಾಗಿ ಮೋಡಗಳು ಮಳಸುರಿಸುತ್ತಿದ್ದವು. ಬರವೆಂಬವನ್ನು ಅವರು ಅರಿತಿರಲಿಲ್ಲ ನಾರಿಯರೆಲ್ಲ ಪತಿವ್ರತೆಯರಾಗಿಯೂ ನರರೆಲ್ಲ ಧರ್ಮ ಪರಾಯಣರಾಗಿಯೂ ಜೀವಿಸುತ್ತಿದ್ದರು ಜೇನೆ–ಜೇನರಿಕೆಗಳು ಕೂಲಿ–ಸುಲಿಗೆಗಳೂ, ತಗಲ—ತಪ್ಪಡಿಗಳೂ ಆಗಸ ಜನರಲ್ಲಿರಲಿಲ್ಲ ಮಕ್ಕ ಳೆಲ್ಲರೂ ತಾಯ್ತಂದೆಗಳನ್ನು ದೇವರೆಂದೇ ಭಾವಿಸಿ ಭಕ್ತಿಯಿಂದ ಸೇವೆಮಾಡು ತ್ತಿದ್ದರು ಪ್ರತಿಯೊಂದು ಧರ್ಮದವರು ತಮ್ಮ ತಮ್ಮ ಧರ್ಮದಂತೆ ನಡೆ ಯುತ್ತಿದ್ದರು ಈ ಪ್ರಕಾರ ಚೋಳರಾಜನ ಆಳಿಕೆಯಲ್ಲಿ ದೇಶಸ್ಥಿತಿ ಒಳ್ಳೆ ಸಂಪನ್ನ ಸ್ಥಿತಿಯಲ್ಲಿತ್ತು ಇದೆಲ್ಲವೂ ಸಾಕ್ಷಾತ್ ಶ್ರೀಮನ್ನಾರಾಯಣನು ವೈಕುಂಠಗಿರಿಯಿಂದ ಭೂಲೋಕಕ್ಕೆ ಬಂದು ಅಜ್ಞಾತವಾಗಿ ವಾಸಮಾಡಿದು ದರ ಪರಿಣಾಮವೇ ಎಂಬುದೆಂದು ಹೇಳಲು ಅಡ್ಡಿಯಿಲ್ಲ

ವೈಕುಂಠದಿಂದ ಶ್ರೀಲಕ್ಷ್ಮೀದೇವಿಯು ತನ್ನ ಪತಿಯಾದ ವಿಷ್ಣುವಿನಿಂದ ದೂರಾಗಿ ಭೂಲೋಕದಲ್ಲಿಯ ಕರವೀರಪುರಕ್ಕೆ ಹೋದಳು ಎಂಬವನ್ನು ಹಿಂದೆ ಹೇಳಿದೆ ಸಿಟ್ಟಿನ ಭರದಲ್ಲಿ ಮನುಷ್ಯನಿಂದೆ ಉಂಟಾಗುವ ಕಾರ್ಯ ಗಳು ಯೋಗ್ಯಾಯೋಗ್ಯವೆಂಬ ನಿರ್ಣಯಕ್ಕೆ ಬಾರದೆ ಒಮ್ಮೆಲೇಕಾರ್ಯರೂಪ ಕ್ಕಿಳಿಯುವವು ಮುಂದೆ ಅವುಗಳ ಪರಿಣಾಮ ತಿಳಿಯಹತ್ತಿದ ಕೂಡಲೆ

ಪಶ್ಚಾತ್ತಾಪ ಪಡುವರು. ಅದರಂತೆಯೇ ಆಗ ಲಕ್ಷ್ಮೀದೇವಿಯ ಸ್ಥಿತಿ ಯಾಯಿತು. ಅವಳಿಗೆ ತಾನು ಹರಿಯನ್ನು ಬಿಟ್ಟು ಬಂದದ್ದು ಸರಿಯಾಗ ಲಿಲ್ಲೆಂಬವಿಚಾರವು ತನ್ನ ಪತಿಯೂಕೂಡ ವೈಕುಂಠಮಂದಿರವನ್ನು ಬಿಟ್ಟು ಅಜ್ಞಾತವಾಸಕ್ಕಾಗಿ ಭೂಲೋಕಕ್ಕೆ ಹೋದ ಸಂಗತಿಯು ತಿಳಿದಕೂಡಲೆ ಉತ್ಪನ್ನವಾಯಿತು. ಮನಸ್ಸು ತಳಮಳಗೊಂಡಿತು. ಆದರೆ ಮಾಡುವ ಣೇನು? ಆಗಿಹೋದದ್ದಕ್ಕೆ ತನ್ನನ್ನೇ ಹಳಿದು ಕೊಳ್ಳುತ್ತ ಕೂಡ್ರುವ ಮಂದ ಮತಿಯವಳಾಗಿರಲಿಲ್ಲ. ಭೂಲೋಕದಲ್ಲಿ ಅಜ್ಞಾತವಾಗಿ ವಾಸಿಸಿದ ತನ್ನ ಪತಿ ಶ್ರೀನಿವಾಸನನ್ನು ಹುಡುಕುವ ಹಂಚಿಕೆಯನ್ನು ಹಾಕಿದಳು ತನ್ನ ಪತಿಯು ಅಜ್ಞಾತನಾಗಿರಬೇಕಾದರೆ ಬೇರೊಂದು ವೇಷವನ್ನಾತನು ಧರಿಸಿರ ಬಹುದು. ತನ್ನ ಹೆಸರನ್ನು ಬದಲಿಸಿರಬಹುದು. ಇವೆಲ್ಲ ವಿಚಾರಗಳಿಂದ ಆಕೆಯು ತಾನೂ ಅವನಂತೆಯೇ ಗುಪ್ತವಾದ ಕ್ರಿಯೆಗಳನ್ನು ಸಾಗಿಸಿ ಆತ ನನ್ನು ಶೋಧಿಸಲೇ ಬೇಕು. ಎಂದು ಯೋಚಿಸಿದಳು. ಕೂಡಲೆ ಅವಳು ತಾನು ಗೋಪಾಲಿಕೆಯ ವೇಷಧರಿಸಿದಳು, ತನ್ನ ಮಮತೆಯಮಗ ಬ್ರಹ್ಮ ನನ್ನು ಆಕಳುವನ್ನಾಗಿಯೂ; ಶಿವನನ್ನು ಕರುವನ್ನಾಗಿಯೂ ಮಾಡಿಕೊಂಡಳು. ತಾನೇ ಆ ಆಕಳು ಹಾಗು ಕರುವನ್ನು ಮಾರಲಿಕ್ಕೆಂದು ಹೊರಟಳು. ಹಲವು ನಾಡುಗಳನ್ನು ಸುತ್ತಿ ಕೊನೆಗೆ ದಕ್ಷಿಣ ದಿಕ್ಕಿನಲ್ಲಿ ಧರ್ಮಾತ್ಮ ನಾಗಿ ರಾಜ್ಯ ಪರಿಪಾಲಿಸುತ್ತಿದ್ದ ಚೋಳಮಹಾರಾಜನ ನಗರಕ್ಕೆ ಬಂದಳು. ಅಲ್ಲಿ ಚೋಳರಾಯನಮಂದಿರ ಪ್ರವೇಶಿಸಿ—"ಪ್ರಭೊ! ಈ ನನ್ನ ಆಕಳು ಬಲುಸಭ್ಯವಾದುದು. ವಿಪುಲವಾಗಿ ಹಾಲನ್ನು ಕರೆಯುವದು, ಈ ಕರು ಅದರ ಮಗು. ಈ ನನ್ನ ಆಕಳನ್ನು ನಾನು ನನ್ನ ಹೊಟ್ಟೆಯ ಮಗುವಿನಂತೆ ರಕ್ಷಿಸಿದೆನು. ನನ್ನ ಗಂಡನು ನನ್ನನ್ನು ಬಿಟ್ಟು ದೇಶಾಂತರ ಹೋದದ್ದರಿಂದ ನಾನೂ ಗಂಡನನ್ನು ಬಿಟ್ಟು ಬಳಲಬೇಕಾಯಿತು ನನ್ನ ಉಪಜೀವನಕ್ಕಾಗಿ ಈ ಆಕಳನ್ನು ಮಾರಬೇಕಾಗಿದೆ. ಆಕಳುಗಳನ್ನು ಮಾರಬಾರದೆಂದು ಧರ್ಮವು ಹೇಳುತ್ತದೆ. ಆದರೆ ಮಾಡುವದೇನು? ಇದನ್ನು ಗೋ-ಬ್ರಾಹ್ಮಣರನ್ನು ಕಾಪಾಡುವ ತಮ್ಮ ಪದರಿನಲ್ಲಿ ಹಾಕಿದರೆ ನನಗೆ ಏನೊಂದು ಪಾಪವು ತಟ್ಟ ಲಾರದು ಈ ತಿಳುವಳಿಕೆಯಿಂದಲೇ ಇದನ್ನು ಇಲ್ಲಿ ತಂದಿರುವೆನು ತಾವು ಕೊಳ್ಳಬೇಕು" ಎಂದು ಹೇಳಿದಳು ಅರಸನು ಆ ಗೋಪಾಲಿಕೆಯನ್ನು

ಇನ್ನೊಂದು ವಿಚಾರಿಸಲಿಲ್ಲ. ಆ ಗೋವಿನ ಬೆಲೆಯಾಗಿ ಧನ–ಕನಕವನ್ನು ಕೊಟ್ಟು ಆಕೆಯನ್ನು ಕಳಿಸಿದನು. ಗೋವಾಲಿಕೆಯು ತಾನು ಅಲ್ಲಿಂದ ಹಿಂತಿರಳುವಾಗ ಧೇನುರೂಪವಾದ ಬ್ರಹ್ಮನಿಗೆ—'ಮಗು! ನನ್ನ ಪತಿಯಾದ ನಿನ್ನ ತಂದೆಯು ಇಲ್ಲಿಯೇ ಸಮೀಪದಲ್ಲೆಲ್ಲಿಯೋ ಗುಪ್ತವಾಗಿ ವಾಸವಾಗಿರುವನು. ನೀನು ಇಲ್ಲಿ ಇದ್ದುಕೊಂಡು ಆತನನ್ನು ಹುಡುಕು.' ಎಂದು ಮರೆಮಾತು ಹೇಳಿ ಅಲ್ಲಿಂದ ತಿರುಗಿದಳು.

ಗೋವಾಲಿಕೆಯಿಂದ ಕ್ರಯಕ್ಕೆ ಪಡೆದ ಆಕಳು ಸುರಲೋಕದ ಕಾಮಧೇನುವಿನ ಲಕ್ಷಣೆಯುಳ್ಳದಾಗಿತ್ತು. ಅರಸನ ಹಕ್ಕೆಯಲ್ಲಿಇದ್ದ ಸಾವಿರಾರು ಆಕಳುಗಳಲ್ಲಿ ಇದೊಂದೇ ಒಡೆದು ಕಾಣುತ್ತಿತ್ತು ಅಂಥ ಸುಂದರವೂ ಪುಷ್ಟವೂ ಆಗಿದ್ದಿತು ಅದರ ಕೆಚ್ಚಲು ಸದಾ ಹಾಲಿನಿಂದ ತುಂಬಿ ಭಾರವುಳ್ಳದಾಗಿ ಇಳಿಬಿದ್ದ ಜೇಂಗೊಡದಂತೆ ತೋರುತ್ತಲಿದ್ದಿತು. ಅದರ ಹಾಲ ಕರೆಯುವವರು ಕರೆಕರೆದು ದಣಿದು ಬಿಡುವರೇ ಹೊರತು ಅದರ ಮೊಲೆಗಳಲ್ಲಿಯ ಹಾಲೆಲ್ಲ ತೀರಿದವೆಂದು ಎಂದೂ ಬಿಡುತ್ತಿದ್ದಿಲ್ಲ. ಅದರ ಹಾಲಿನ ರುಚಿಯು ದೇವತೆಗಳು ಸೇವಿಸುವ ಅಮೃತದ ರುಚಿಗಿಂತಲೂ ಮಧುರವಾಗಿತ್ತು ಆ ಆಕಳದ ಹಾಲನ್ನು ರಾಜಪತ್ನಿಯು ತನ್ನ ಮಗುವಿನ ಪೋಷಣೆಯ ನಿಮಿತ್ತವಾಗಿಯೇ ಉಪಯೋಗಿಸುತ್ತಿದ್ದಳು. ಈ ಪ್ರಕಾರ ಉಪಯೋಗವುಳ್ಳ ಆ ಆಕಳು ರಾಜನ ಹಾಗು ಅವನ ಹೆಂಡತಿಯ ಪ್ರೀತಿಯ ಆಕಳಾಗಿತ್ತು.

ದಿನದಿನವೂ ಅರಮನೆಯ ಆಕಳುಗಳನ್ನೆಲ್ಲ ಗೋಪಾಲನೊಬ್ಬನು ಸಮೀಪದ ಪರ್ವತದ ಅಡವಿಗೆ ಮೇಯಿಸಲು ತೆಗೆದುಕೊಂಡು ಹೋಗುತ್ತಿದ್ದನು. ಆ ಎಲ್ಲ ಆಕಳುಗಳೊಡನೆ ಈ ಆಕಳಾದರೂ ಇರುತ್ತಿತ್ತೆಂಬದನ್ನು ಬೇರೆ ಹೇಳಬೇಕಾಗಿಲ್ಲ ಎಲ್ಲ ದನ ಕರುಗಳು ಅಡವಿಯಲ್ಲಿ ಬಾಯಿಯಿಂದ ಹುಲ್ಲನ್ನು ಮೇಯುತ್ತ ಹೋಗುತ್ತಿರುವಂತೆ ಈ ಆಕಳು ಮೇಯುತ್ತಿರಲಿಲ್ಲ. ಕೇವಲ ತನ್ನ ಮುಸುಡಿಯಿಂದ ನೆಲವನ್ನು ಮೂಸುತ್ತ ಮೇಯುತ್ತಿರುವಂತೆ ತೋರಿಸುತ್ತಿತ್ತು. ಅದು ಮೂಸುತ್ತಿರುವದು ಏನೋ ಹುಡುಕುವದಕ್ಕಾಗಿ ಅರ್ಥಾತ್ ಬ್ರಹ್ಮನು ವೇಂಕಟಾಚಲದಲ್ಲಿ ಗುಪ್ತವಾಗಿರುವ ತನ್ನ ಪಿತ ಶ್ರೀಹರಿಯ ಶೋಧಕ್ಕಾಗಿ. ಇದು ಆ ಗೊಪಾಲನಿಗಷ್ಟೇ ಏಕೆ? ಯಾವ ಮಾನವನಿಗೂ ಗೊತ್ತಾಗುವದು ಶಕ್ಯವಿರಲಿಲ್ಲ.

ಹೀಗೆ ಪ್ರತಿನಿತ್ಯವೂ ಆಕಳ ರೂಪದ ಬ್ರಹ್ಮನು ಅಡವಿಯಲ್ಲಿ ಮೇಯಿಸುವ ನೆವದಿಂದ ಶ್ರೀಹರಿಯನ್ನು ಶೋಧಿಸುತ್ತಿದ್ದನು. ಕೊನೆಗೊಮ್ಮೆ ಅಲ್ಲಿರುವ 'ಸ್ವಾಮಿ ಪುಷ್ಕರಿಣಿ' ತೀರ್ಥದ ಮೇಲಿರುವ ಒಂದು ಹುತ್ತಿನಲ್ಲಿ ಶ್ರೀಹರಿಯ ಸುಳಿವು ಆಕಳರೂಪವಾದ ಬ್ರಹ್ಮನಿಗೆ ಗೊತ್ತಾಯಿತು ಆಗ ಆ ಧೇನುವಿಗಾದ ಆನಂದಕ್ಕೆ ಪಾರಾವಾರವಿಲ್ಲದಾಯಿತು. ಸಂತೋಷದ ಭರದಲ್ಲಿ ಆ ಹುತ್ತಿನಮೇಲೆ ತನ್ನ ತುಂಬಿದ ಕೆಚ್ಚಲಿನಿಂದ ಧಾರೆಗಟ್ಟಿ ಹಾಲನ್ನು ಸುರಿಸಿತು. ಇದರಂತೆ ಪ್ರತಿದಿವಸವೂ ಬ್ರಹ್ಮನಿಂದ ಶ್ರೀಹರಿಯ ಪೋಷಣೆಯಾಗಹತ್ತಿತು.



ಶ್ರೀನಿವಾಸನಿದ್ದ ಹುತ್ತಿನ ಮೇಲೆ ಆಕಳು ಹಾಲು ಸುರಿಯುತ್ತಿರುವದು.

ಆಕಳ ಈ ಕ್ರಮವು ಎಂದರೆ ಹುತ್ತಿನಮೇಲೆ ಹಾಲನ್ನು ಸುರಿಸುವದು ದಿನದಿನವೂ ನಡೆಯಿತು ಹೀಗಾಗಹತ್ತಿದರಿಂದ ಆ ಆಕಳು ಮನೆಯಲ್ಲಿ ಹಾಲನ್ನೇ ಕೊಡದಾಯಿತು. ಹಿಂಡುವವರೇ ಬೇಸರಿಯುವಂತೆ ಹಾಲನ್ನು ಕೊಡುವ ಆಕಳು ಕಾಮಧೇನುವಿಗೆ ಸರಿಯಾದದ್ದೆಂದು ಎಲ್ಲರಿಂದಲೂ ಕರೆಯಲ್ಪಡುತ್ತಿತ್ತು. ಹುತ್ತಿನಮೇಲೆ ಹಾಲು ಸುರಿಸಹತ್ತಿದಂದಿನಿಂದ ಆ ಆಕಳು ಒಂದುದಿನವೂ ಒಂದು ಹನಿ ಹಾಲನ್ನು ಸಹ ಕೊಡಲಿಲ್ಲ. ಅದರ ಹಾಲಿನ

ಸವಿಗಂಡ ರಾಜಮಗುವು ಉಪವಾಸಕ್ಕೀಡಾಯಿತು. ಅದರಿಂದ ರಾಜ ಪತ್ನಿಯ ಕಳವಳವು ಹೆಚ್ಚಾಯಿತು. ಬೇರೆ ಹಾಲನ್ನು ಕೂಸು ಕುಡಿಯ ದಾಯಿತು. ಅತ್ತಿತ್ತು ಕೇಸರ ಬಾಸರಿಡಹತ್ತಿತು. ಆಕಳು ಹಿಂಡಲಾರ ದ್ದಕ್ಕೆ ರಾಜಪತ್ನಿಯು ಮೊದಲು ಆಕಳಮೇಲೆ ಕೋಪಿಸಿಕೊಂಡಳು. ಒಳಿಕ ಅವಳು 'ಗೋಪಾಲನೇ ಈ ಆಕಳ ಹಾಲನ್ನು ಹಿಂಡಿಕೊಳ್ಳುತ್ತಿರ ಬಹುದು' ಎಂಬ ವಿಚಾರದಿಂದ ಗೋಪಾಲನನ್ನು ಕರೆದು— 'ಎಲೊ ನೀಚ ಗೋಪನೆ! ಕೇವಲ ನಮ್ಮ ಮಗುವಿನ ಹೊಟ್ಟೆಗಾಗಿ ಬೇಕಾಗುವ ಹಾಲಿಗೆ ಈ ಆಕಳನ್ನು ಹಲವು ಧನ–ಕನಕಗಳನ್ನು ಸುರುವಿಕೊಂಡುದಾಗಿದೆ. ಈಗ ಆಕಳು ಹಾಲನ್ನೇ ಕೊಡುವದಿಲ್ಲವಲ್ಲ? ಹೀಗೇಕಾಗಿದೆ? ಆ ಹಾಲನ್ನು ನೀನೇ ಹಿಂಡಿಕೊಂಡು ಕುಡಿಯುವಂತೆ ತೋರುತ್ತದೆ! ಒಂದು ವೇಳೆ ಆಕಳು ತಾನೇ ತನ್ನ ಮೊಲೆಯನ್ನು ಕುಡಿದುಕೊಳ್ಳುತ್ತಿದ್ದರೆ ಇಲ್ಲವೆ ತನ್ನ ಕರುವಿಗೆ ಕುಡಿಸುತ್ತಿ ದ್ದರೆ ಅದರಲ್ಲಿ ನಿನ್ನ ಅಪರಾಧವಿಲ್ಲ. ಇದಕ್ಕಾಗಿ ನೀನು ಸತ್ಯ ಸಂಗತಿಯನ್ನು ತಿಳಿಸಲೇಬೇಕು' ಎಂಬದಾಗಿ ಗದ್ದರಿಸಿ ನುಡಿದಳು. ಬೈದಳು, ಬಡೆಯ ಹೋದಳು. ಕೊನೆಗೆ ಒಂದೆರಡೇಟು ತಳಿಸಿಯೇಬಿಟ್ಟಳು.

ರಾಜಪತ್ನಿಯ ಸಿಟ್ಟಿನಿಂದ ಮನ ಬೆದರಿದ ಹುಡುಗ ಗೋಪಾಲನು ಏನೊಂದು ದಿಕ್ಕುಗಾಣದಾದನು. ತಾನು ದಂಡನೆಗೆ ಗುರಿಯಾಗುವೆನೆಂಬ ಭೀತಿ ಯಿಂದ ಅಳಹತ್ತಿದನು. ನಿಜವಾದ ಅಪರಾಧಿಯು ದಂಡನೆಯನ್ನು ಅಲಕ್ಷಿಸ ಬಹುದು. ಶೋಕವನ್ನೂ ಆವರಿಸಬಹುದು. ನಿರಪರಾಧಿಯಾದವನಿಗೆ ಆರೋಪ ವನ್ನು ಹೊರಿಸಿದರೆ ಅದೇ ಅವನ ಹೃದಯಕ್ಕೆ ವಜ್ರಾಘಾತದಂತೆ ಪರಿಣಮಿಸು ವದು. ಈ ಸ್ಥಿತಿಯು ಸದ್ಯ ಗೋಪಾಲನದಾಯಿತು. ರಾಜಪತ್ನಿ ಆತನಿಗೆ "ಆ ಹಾಲನ್ನು ನೀನೇ ಹಿಂಡಿಕೊಂಡು ಕುಡಿದಿರಬಹುದು" ಎಂದು ಅಂದ ಮಾತ್ರಕ್ಕೆ ನಿರಪರಾಧಿಯಾದ ಗೋಪಾಲನ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ರಾಜಪತ್ನಿಯು ತನ್ನ ಮೈಗೆ ಒಳಿತಾಗಿ ತಳಿಸಿದುದರ ವ್ಯಥೆಗಿಂತಲೂ ಆತನಲ್ಲಿ ಮನೋವ್ಯಥೆಯು ಅಧಿಕವಾಯಿತು. ಆದರೂ ಆತನು ತನ್ನ ದುಗುಡನ್ನು ಹತ್ತಿಕ್ಕಟ್ಟು ರಾಜಪತ್ನಿಯನ್ನು ಕುರಿತು.—'ತಾಯಿ! ನಿಮ್ಮ ಆಕಳನ್ನು ನಾನೇನು ಕರೆದುಕೊಂಡು ಹಾಲು ಕುಡಿಯುವದಿಲ್ಲ. ಆಕಳು ತಾನೇ ತನ್ನ ಮೊಲೆಯನ್ನು ಕುಡಿದು ಕೊಳ್ಳುವದನ್ನು ಇದುವರೆಗೆ ನಾನು ಕಂಡಿರುವದಿಲ್ಲ.

ಅನ್ಯರಾರಾದರೂ ಬಂದು ಹಿಂಡಿಕೊಂಡು ಹಾಲು ಒಯ್ಯುವದನ್ನೂ ನೋಡಿಲ್ಲ. ಕರುವು ಕುಡಿಯುವದೆಂದರೆ ಅದು ಯಾವಾಗಲೂ ಮನೆಯಲ್ಲಿರುವದರಿಂದ ಅದಕ್ಕೆ ಆಕಳು ಮೊಲೆಯುಣ್ಣಿಸುವದೂ ಶಕ್ಯವಿಲ್ಲ ಹೀಗಾಗಿ ಈ ಆಕಳು ಏಕೆ ಹಿಂಡಲಾರದೆಂಬವರ ವಿಚಾರವು ನನಗೆ ಏನೊಂದೂ ತಿಳಿಯದಾಗಿದೆ. ಈ ನನ್ನ ಮಾತಿನ ಸತ್ಯಾಸತ್ಯತೆಯನ್ನು ತಾವೇ ಒರೆಹಚ್ಚಿ ನೋಡತಕ್ಕುದು'' ಎಂದು ತನ್ನ ಭಯವನ್ನು ಬದಿಗಿಟ್ಟು ನುಡಿದನು ಅವನ ನುಡಿಗಳಿಗೆ ರಾಜಪತ್ನಿಯ ಕೋಪವು ಹೆಚ್ಚಾಯಿತು ಆಕೆಯು—' ಮೂರ್ಖ! ಗೋರಕ್ಷಣೆಯ ಕೆಲಸಕ್ಕಾಗಿ ನಿನ್ನನ್ನೇ ನಿಯಮಿಸಿರಲು ಆವದೊಂದೂ ನನಗೆ ಗೊತ್ತಿರಲಿಲ್ಲ. ಎಂದು ನಿಷ್ಠುರವಾಗಿ ನುಡಿಯುವೆ. ಸ್ವಲ್ಪ ಮೇಲಿನ ಪರಿವೆಯಿಲ್ಲದೆ ಮಾತನಾಡುತ್ತಿರುವೆ. ನೀನೇ ಪ್ರತಿನಿತ್ಯವೂ ಅದರ ಹಾಲನ್ನು ಕರೆದುಂಬುವಿ. ಇದರಲ್ಲೇನೂ ತಿಲಮಾತ್ರ ಸಂಶಯವಿಲ್ಲ ನೀನಾಡಿದ ಅಸತ್ಯ ನುಡಿಗಳಿಗಾಗಿ ಇದೀಗಲೇ ತಕ್ಕ ಶಾಸನವನ್ನು ಮಾಡಬೇಕಾಗಿದೆ ಎಂದು ಅತಿ ಕೋಪವುಳ್ಳವಳಾಗಿ ಆ ಗೋಪಾಲನನ್ನು ರಾಜಮಂದಿರದ ಕಂಬಕ್ಕೆ ಹಗ್ಗದಿಂದ ಬಿಗಿದು ತನ್ನ ಮನದಣಿವಂತೆ ಒಳಿತಾಗಿ ತಳಿಸಿದಳು. ಹೊಡೆತದಿಂದ ತಳಮಳಗೊಂಡ ಆ ಗೋಪಾಲನು ಹೆಚ್ಚಾಗಿ ಅತ್ತತ್ತಂತೆ ಹೆಚ್ಚಾಗಿಯೇ ಹೊಡೆಯುಹತ್ತಿದಳು. ಕೊನೆಗೆ ತಾನೇ ಬೇಸತ್ತು ಆ ರಾಕ್ಷಸೀ ಸ್ವರೂಪದ ರಾಜಪತ್ನಿಯು ' ಇನ್ನು ಮೇಲೆ ಎಚ್ಚರಿಕೆ! ಪುನಃ ಇಂದಿನಿಂದ ನಮ್ಮ ಆಕಳು ಹಾಲು ಕೊಡದಿದ್ದರೆ ನಿನ್ನ ಪ್ರಾಣಗಳನ್ನು ನಿನ್ನ ದೇಹದಿಂದಲೇ ಹೊರಹೊರಡಿಸುವೆನು '' ಎಂದು ಕಠೋರನಾಗಿ ನುಡಿದು ಕಂಬಕ್ಕೆ ಕಟ್ಟಿದ ಆ ಗೋಪಾಲನನ್ನು ಬಂಧನದಿಂದ ಮುಕ್ತಮಾಡಿದಳು.

ಏನೂ ಅಪರಾಧವಿಲ್ಲದ ಗೋಪಾಲನು ರಾಜಪತ್ನಿಯಿಂದ ಸ್ವಲ್ಪ ಹಣ್ಣಾಗುವಂತೆ ಹೊಡೆಯಿಸಿಕೊಂಡು ಅಂದು ಹೈರಾಣಾಗಿ ಬಿದ್ದುಕೊಂಡನು ' ಅನಾಥನಾದ ನಾನು ಇದುವರೆಗೆ ರಾಜಪತ್ನಿಯಿಂದಲೇ ಸಂರಕ್ಷಿತನಾಗಿದ್ದುಕೊಂಡು ಈಗ ಕೇವಲ ಆಕಳಿನ ನಿಮಿತ್ತವಾಗಿ ಅವರ ವಿಶ್ವಾಸದಿಂದ ಹೊರತಾದೆನಲ್ಲಾ! ಎಂದು ತಳಮಳಿಸಹತ್ತಿದನು ಮತ್ತು ಆತನು ಆ ಆಕಳು ಹಾಲನ್ನೇಕೆ ಕೊಡುತ್ತಿರಲಿಕ್ಕಿಲ್ಲ? ಅದರ ಮೊಲೆ ಹಾಲು ಯಾವ ಬಗೆಯಿಂದ ಮಾಯಾಗುವಾತ್ತಿರಬಹುದು? ಇವೆಲ್ಲ ವಿಚಾರಗಳ ಸುಳಿಯಲ್ಲಿ ಆತನು ತನ್ನ ಚಿತ್ತವನ್ನು

ಹರಿಬಿಟ್ಟನು. ಆತನು ಇದರ ಒಗೆಗೆ ನಾನು ಕೂಡಲೆ ಪರೀಕ್ಷೆ ಮಾಡುವೆನು. ಹಾಲು ಬತ್ತುವ ನಿಜವಾದ ಕಾರಣವನ್ನು ಹುಡುಕಿ ತೆಗೆಯುವೆನು. ಹಾಗೂ ರಾಜಪತ್ನಿಯವರ ನನ್ನ ಮೇಲಿನ ಕಳೆದುಹೋದ ಪ್ರೀತಿ–ವಿಶ್ವಾಸಗಳನ್ನು ಮತ್ತೆ ದೊರಕಿಸಿಕೊಳ್ಳುವೆನು ಒಂದು ವೇಳೆ ಆ ಆಕಳವೇ ತನ್ನ ಮೊಲೆ ಯಲ್ಲಿಯ ಹಾಲನ್ನು ಮರಯಲ್ಲಿ ತಾನೇ ಕುಡಿಯುತ್ತಿರುವದು ಕಂಡುಬಂದರೆ ಅವನ್ನು ಕೊಲ್ಲುವೆನು ಅಥವಾ ಅನ್ಯರು ಯಾರಾದರೂ ಗುಪ್ತವಾಗಿ ಹಾಲನು ಕರೆದುಒಯ್ಯುತ್ತಿದ್ದರೆ ಅವರನ್ನೂ ಒಂದೇ ಹೊಡೆತದಿಂದ ಕೊಲ್ಲುವೆನು ಎಂದು ಗೊತ್ತುಮಾಡಿದನು. ಮತ್ತು ಮಾರನೆಯದಿನದಿಂದ ಮುನ್ನಿನದಿನದ ತನ್ನ ಮನೋನಿರ್ಧಾರ ಕಾಣಲು ಎಂದಿನಂತೆ ಅರಮನೆಯ ಆಕಳುಗಳನ್ನಟ್ಟಿಕೊಂಡು ಮೇಯಿಸುವದಕ್ಕಾಗಿ ಅಡವಿಗೆ ನಡೆದನು

ಅಂದು ಮಧ್ಯಾಹ್ನಸಮಯ ಬಿಸಿಲೇರಿ ಸಿಲುಕಾಯಹತ್ತಿದೆ. ಗೋವಾಲ ರೆಲ್ಲರು ತಮ್ಮ ತಮ್ಮ ದನಗಳನ್ನು ಹುಲ್ಲುಗಾವಲಿನಲ್ಲಿ ಹೂಗಿಸಿ ಗಿಡಮರಗಳ ನೆರಳಲ್ಲಿ ಗುಂಡು–ಗಜಗ, ಚಿಣಿ–ಫಣಿ ಮೊದಲಾದ ಆಟಗಳನ್ನು ನಡೆಯಿಸಿರು ವರು ಕೆಲ ಗೋವಾಲರು ಕೊಳಲನ್ನು ನುಡಿಸುವದರಲ್ಲಿ ತಲ್ಲೀನರಾಗಿರುವರು ಇನ್ನೂ ಕೆಲವರು ಮನೆಯಿಂದ ತಂದ ರೊಟ್ಟಿ-ಬುತ್ತಿಗಳನ್ನು ತಿನ್ನಹತ್ತಿರುವರು. ನಮ್ಮ ಅರಮನೆಯ ಗೋವಾಲನು ತನ್ನ ಸ್ವಭಾವ ಹುಣ್ಣು ಹುಣ್ಣಾದುದರಿಂದ ಆ ಎಲ್ಲ ಗೋವಾಲರಿಂದ ದೂರಹೋಗಿ ಒಂದಡವಿಯಲ್ಲಿ ವಿಚಾರದಲ್ಲಿ ಕುಳಿತಿರು ವನು. ಆತನು ಕೆಲವೊಮ್ಮೆ ತನ್ನ ವಿಚಾರದಲ್ಲಿಯೂ ಕೆಲವೊಮ್ಮೆ ತನ್ನ ಆಕಳುಗಳ ಕಡೆಗೆ ನೋಡುವದರಲ್ಲಿಯೂ ತನ್ನ ಮನಸ್ಸನ್ನು ತೊಡಗಿಸಿರುವನು.

ಹೀಗೆ ತಾಸೆರಡು ತಾಸು ಕಳೆದವು ಆ ಗೋವಾಲನು ನೋಡ ನೋಡುತ್ತಿರುವಂತೆ ದೂರಿನಲ್ಲಿದ್ದ ಹಿಂಡಿನಿಂದ ರಾಜಧೇನುವು ಅಗಲಿತು. ಅದು ಪರ್ವತದ ಅರಣ್ಯದ ನಿಟ್ಟಿಗೆ ತಾನೊಂದೇ ಮಾರ್ಗಕ್ರಮಿಸುವದನ್ನು ನಿರೀಕ್ಷಿಸಿದನು. ಆ ಕೂಡಲೆ ಆತನು ತಡಮಾಡದೆ ಉಳಿದಗೋಪಾಲರ ಕಣ್ಣು ತಪ್ಪಿಸಿ ತಾನು ತನ್ನ ಆಕಳು ಹೋದ ಹಾದಿಯಿಂದ ನಡೆದನು. ಕಟ್ಟಡವಿ ಪ್ರದೇಶ. ಮುಂದೆ ಮುಂದೆ ಆಕಳು ಅದರ ಹಿಂದಿಂದೆ ಮೆಲ್ಲಡಿಹಾಕುತ್ತ ನಡೆದಿರುವ ಗೋವಾಲನು ಹೀಗೆ ಕೆಲ ದೂರ ಹೋದನಂತರ ಆ ಆಕಳು ಆ ಗಿರಿಯಲ್ಲಿಯ ಸ್ವಾಮಿಪುಷ್ಕರಿಣೀ ತೀರ್ಥದ ದಕ್ಷಿಣದಿಕ್ಕಿನಲ್ಲಿರುವ ಹುಣಸೇ

ಮರದ ಬುಡದಲ್ಲಿರುವ ಒಂದು ಹುತ್ತಿನ ಹತ್ತಿರ ಬಂದಿತು. ಆ ಕೂಡಲೆ ಅದು ತಡಮಾಡದೆ ಆ ಹುತ್ತಿನ ಮೇಲೆ ತನ್ನ ಮೊಲೆಯಲ್ಲಿಯ ಹಾಲನ್ನೆಲ್ಲ ಧಾರೆ ಗಟ್ಟಿ ಸುರಿಸಿಬಿಟ್ಟಿತು! ಆಕಳ ಈ ಕೃತಿಯನ್ನು ಅದನ್ನು ಬೆಂಬಳಿಸಿ ಬಂದ ಗೋಪಾಲನು ಕಣ್ಣಾರೆ ಕಂಡನು, ಕೌತುಕಬಟ್ಟನು. ಕೂಡಲೆ ಕಟುತರ ಕೋಪೋದ್ರಿಕ್ತನಾಗಿ ಆ ಆಕಳನ್ನು ಕುರಿತು—'ಎಲೈ ವಿಶ್ವಾಸ ಘಾತಕಿ ಯಾದ ಆಕಳವೇ! ನೀನು ಪ್ರತಿದಿನವೂ ಈ ಹುತ್ತಿನ ಮೇಲೆ ನಿನ್ನ ಮೊಲೆ ಯಲ್ಲಿಯ ಹಾಲನ್ನೆಲ್ಲ ಸುರಿಸಿ ಬರಡಾಕಳಂತೆ ಮನೆಗೆ ಬರುತ್ತಿರುವಿ. ನಿನ್ನ ಈ ನೀಚತನವು ರಾಜಪತ್ನಿಯಿಂದ ನನ್ನನ್ನು ಒಳಿತಾಗಿ ಹೊಡೆತಕ್ಕೆ ಗುರಿ ಮಾಡಿತು. ಅಪರಾಧ ಮಾಡುವವರೊಬ್ಬರು, ಅದಕ್ಕಾಗಿ ಶಿಕ್ಷೆಯನ್ನು ಅನು ಭವಿಸುವವರಿನ್ನೊಬ್ಬರು. ಇದಾವನ್ಯಾಯ? ಈ ನಿನ್ನ ಅಪರಾಧವನ್ನು ರಾಜ ಪತ್ನಿಗೆ ತಿಳಿಸಿ ನಿನ್ನನ್ನು ಶಾಸನಕ್ಕೆ ಗುರಿಮಾಡುವ ಮೊದಲೇ ನಾನೇ ನಿನಗೆ ತಕ್ಕ ಶಾಸನವನ್ನು ಮಾಡುವೆ ನಿಲ್ಲು!" ಎಂದು ಭಯಂಕರವಾದ ಸಿಟ್ಟಿನಿಂದ ತನ್ನ ಕೈಗೊಡಲಿಯನ್ನು ಮೇಲಕ್ಕೆತ್ತಿ ಆ ಆಕಳ ಮೇಲೆ ಪೆಟ್ಟನ್ನಿಕ್ಕ ಹೋದನು ಅಷ್ಟರಲ್ಲಿ ಏಟುತಪ್ಪಿ ಆ ಹುತ್ತಿಗೆ ಹೊಡೆತಬಿದ್ದಿತು! ಹಾಯ್! ಹಾಯ್! ಆಕಳು ಆ ದುರಂತದಿಂದ ಪಾರಾಯಿತು. ಆದರೆ ಆ, ಕೂಡಲೆ ಕೊಡಲಿಯ ಏಟು ಬಿದ್ದ ಹುತ್ತಿನಿಂದ ರಕ್ತವು ಚಿಮ್ಮ ಹತ್ತಿತು. ಪುಟಿಯುವ ನೆತ್ತರವು ತುಸು ಎತ್ತರ, ಆಳೆತ್ತರ ಕಡೆಗೆ ನಾಲ್ಕಾ ಳೆತ್ತರ ಹೀಗೆ ಹೆಚ್ಚೆಚ್ಚಾಗಿ ಚಿಗಿಯುತ್ತ ಮುಗಿಲಿನತನಕ ಜಿಗಿಯಹತ್ತಿತು. ಅದನ್ನು ಕಂಡು ಗೋಪಾಲನು ಖೌಹಾರಿ ದಿಕ್ಕುಗಾಣದಾದನು. ಒಳ್ಳೆ ಭಯ ಭೀತನಾದನು. ಇಷ್ಟೇ ಏಕೆ? ಆ ಕೂಡಲೆ ಆತನ ಪಂಚಪ್ರಾಣಗಳು ಶರೀರದಿಂದ ವಿಮುಖವಾದವು. ಅರ್ಥಾತ್ ಆತನು ಅಲ್ಲಿಯೇ ಮೃತಹೊಂದಿ ದನು. ಇಷ್ಟೆಲ್ಲ ದುರಂತವನ್ನು ನೋಡಿದ ಆ ಆಕಳವು ಆ ವೇಂಕಟಾಚಲದರಣ್ಯ ದಿಂದ ಹಿಂತಿರುಗಿ ರಾಜ ಮಂದಿರಕ್ಕೆ ಬಂದು ಚೋಳರಾಜನ ಸನ್ನಿಧಿಯಲ್ಲಿ ದೀನವದನವುಳ್ಳದ್ದಾಗಿ ನಿಂತು ಕಣ್ಣೀರಿಡಹತ್ತಿತು ಭೂಮಿಯ ಮೇಲೆ ಬಿದ್ದು ಗುಡುಗುಡು ಉರುಳಾಡ ಹತ್ತಿತು. ಆಕ್ರೋಶವನ್ನು ಸೂಚಿಸುವ ಕರ್ಕಶಸ್ವರ ದಿಂದ 'ಅಂಬಾ' ಎಂದು ಒದರಹತ್ತಿತು.

ಮೂಕ ಪ್ರಾಣಿಗಳ ಮನೋಭಾವವನ್ನರಿಯುವದು ದುಸ್ತರವು. ಕೇವಲ ಸನ್ನೆ–ಸಂಜ್ಞೆಗಳಿಂದ ಅವುಗಳ ಮನೋಗತದ ಸರಿಯಾದ ತಿಳುವಳಿಕೆಯಾಗದು. ಒಂದಾನೊಂದು ಕಾಲದಲ್ಲಿ ಅಗ್ನಿಯ ಶಾಪದ ಪರಿಣಾಮವಾಗಿ ಪಶುಗಳ ಮಾತಾಡುವ ಕ್ರಿಯೆಯು ನಿಂತುಹೋಯಿತಂತೆ. ಆ ಶಾಪ ಇದುವರೆಗೂ ನಡೆದಿದೆ. ಸದ್ಯ ಚೋಳ ರಾಜನಲ್ಲಿ ಆಕಳು ಬಂದು ಹಲವುರೀತಿಯಿಂದ ತನ್ನ ಮನೋಭಾವನೆಯನ್ನು ತಿಳಿಸಲು ಯತ್ನಿಸಿತು. ಕಣ್ಣೀರು ಸುರಿಸಿತು. 'ಇವೆಲ್ಲ ಕ್ರಿಯೆಗಳಿಂದ ಅದಕ್ಕೇನೋ ವ್ಯಥೆಯಾಗುತ್ತಿರಬಹುದು' ಎಂಬದಿಷ್ಟೇ ರಾಜನಿಗೆ ತಿಳಿಯಿತೇ ಹೊರತು ನಿಜ ಸಂಗತಿಯು ತಿಳಿಯಲಿಲ್ಲ. ಆಗ ಆತನು ತನ್ನೊಬ್ಬ ಜಾಣ ಸೇವಕನನ್ನು ಕರೆದು— 'ಸೇವಕ! ಈ ನಮ್ಮ ಆಕಳು ತನ್ನ ಸನ್ನೆಗಳಿಂದ ಸೂಚಿಸುವ ಸಂಗತಿಗಳು ನಮಗೆ ತಿಳಿಯವು ಅದಕ್ಕೇನೋ ಕಷ್ಟವು ಪ್ರಾಪ್ತವಾಗಿದೆಂಬಂತೆ ತೋರುವದು. ನೀನು ಇದನ್ನು ಬೆಂಬಳಿಸಿ ಅದು ಹೋಗುವಲ್ಲಿಗೆ ಹೋಗು. ಅದರ ದುಃಖದ ಕಾರಣವನ್ನು ಶೋಧಿಸಿಕೊಂಡು ಬಾ." ಎಂದು ಆಜ್ಞಾಪಿಸಿ ಆಕಳ ಹಿಂದಿನಿಂದಲೇ ಆ ಸೇವಕನನ್ನು ಕಳುಹಿದನು

ಅರಸನ ಅಪ್ಪಣೆಯಂತೆ ಸೇವಕನು ಆ ಧೇನುವನ್ನು ಬೆಂಬಳಿಸಿ ಸಾಗಿದನು. ಆಕಳು ಮುಂದೆ ಮುಂದೆ ಸಾಗಿ ನೆಟ್ಟಗೆ ತಾನು ವೇಂಕಟಗಿರಿಯಲ್ಲಿಯ ಸ್ವಾಮಿಪುಷ್ಕರಣಿ ತೀರ್ಥದ ಹತ್ತಿರದಲ್ಲಿದ್ದ ಹುತ್ತಿನ ಹತ್ತಿರ ಬಂದು ನಿಂತಿತು. ಸೇವಕನೂ ಅಲ್ಲಿ ಬಂದು ತಲುಪಿದನು. ಆಕೂಡಲೆ ಆತನಿಗೆ ಅಲ್ಲಿಯ ಭಯಾನಕ ದೃಶ್ಯವು ಗೋಚರವಾಯಿತು ಅಲ್ಲಿ ಮೃತವಟ್ಟುಬಿದ್ದ ಗೋಪಾಲನನ್ನೂ ಹುತ್ತಿನಿಂದ ಪುಟಿಯುವರಕ್ತವನ್ನೂ ಕಂಡು ಗದಗದನೆ ನಡುಗಿದನು. ಕೂಡಲೇ ಓಡುತ್ತೋಡುತ್ತ ಚೋಳರಾಜನಲ್ಲಿಗೆ ಬಂದು ತಾನು ಕಂಡಂತೆ ಅಲ್ಲಿಯ ಸಂಗತಿಯನ್ನು ವರ್ಣಿಸಿದನು.

ಸೇವಕನಿಂದ ತಿಳಿದ ಸಂಗತಿಗಳಿಂದ ಚೋಳರಾಜನು ದಿಕ್ಕುಗಾಣದಂತಾಗಿ— 'ಇದೊಂದು ಭಯಂಕರ ಪ್ರಸಂಗ ಪ್ರಾಪ್ತವಾಯಿತಲ್ಲ!' ಎಂದು ತಳಮಳಿಸಿದನು. ಆ ಕೂಡಲೇ ಅವನು ರಥವನ್ನೇರಿ ಅತಿ ವೇಗವಾಗಿ ನಡೆದು ಗೋಪಾಲನು ಮೃತಪಟ್ಟು ಬಿದ್ದಲ್ಲಿ ಬಂದನು. ಆ ಹುಡುಗನ ಮೃತ ಶರೀರವನ್ನು ಕಂಡು ಶೋಕಮಾಡಹತ್ತಿದನು. ನೆತ್ತರ ಚಿಮ್ಮುವ ಆ ಹುತ್ತನ್ನು

ಕಂಡು ಭಯಚಕಿತನಾದನು. ಆಗ ಆತನ ಮುಖದಿಂದ— “ ಅಕಟಕಟಾ ! ಈ ಭಯಂಕರವಾದ ಕೃತ್ಯಕ್ಕಾಗಿ ಯಾವ ನೀಚನು ಸಾಹಸ ಮಾಡಿರ ಬಹುದು ? ಮೂಕ ಜೀವನವಾದ ಆಕಳು ನನ್ನ ಹತ್ತಿರ ಬಂದು ಸಂಜ್ಞೆ ಮಾಡಿ ಈ ಸುದ್ದಿಯನ್ನು ನನಗೆ ತಿಳಿಸಿತು. ಇದೆಂಥ ಕೌತುಕವು ? ಇದು ವರೆಗೆ ನಾನು ಇಂಥ ದುರ್ಘಟನೆಗಳನ್ನು ಕಂಡಿರಲಿಲ್ಲ. ಗೋಪಾಲನ ಮೃತ ಶರೀರ, ರಕ್ತಮಯ ಹುತ್ತು ಇವುಗಳಿಂದಷ್ಟೇ ನಡೆದ ಸಂಗತಿಯ ಏನೊಂದು ಸುಳಿವು ಕಾಣದಲ್ಲ ? ಎಂಬದಾಗಿ ಹಲವು ಉದ್ಗಾರಗಳು ಅವನ ಮುಖದಿಂದ ಹೊರಟವು.

ಅಜ್ಞಾತವಾಗಿ ಅಲ್ಲಿಯೇ ಹುತ್ತಿನಲ್ಲಿ ವಾಸವಾಗಿರುವ ಭಕ್ತವತ್ಸಲ ಶ್ರೀನಿವಾಸನು ಚೋಳರಾಜನ ಆಕ್ರೋಶವನ್ನು ಕೇಳಿದನು ಆಕೂಡಲೇ ಅವನು ಹುತ್ತನ್ನೊಡೆದು ಮೇಲೆ ಬಂದನು ಆತನ ತಲೆಗೆ ಕೊಡಲಿಯ ಏಟು ಕೂತಿದೆ ರಕ್ತ ಬಂಬಾಳಾಗಿ ಇನ್ನೂ ಪುಟಿಯುತ್ತಿದೆ. ಮುಖವು ಕಾಂತಿಹೀನವಾಗಿ ಆತನ ವ್ಯಾಕುಲ ಚಿತ್ತವನ್ನು ಪ್ರಕಟಿಸುತ್ತದೆ ಎರಡೂ ಕಣ್ಣುಗಳಿಂದ ಅಶ್ರು ಧಾರೆಗಟ್ಟಿ ಹರಿಯುತ್ತಿದೆ ಇಂಥ ವಿಪರೀತ ಸ್ವರೂಪ ದಲ್ಲಿಯೂ ಆತನು ಕೈಗಳಲ್ಲಿ ಶಂಖ–ಚಕ್ರ–ಗದೆ–ಪದ್ಮಗಳನ್ನು ಧಾರಣ ಮಾಡಿ ರುವನು. ಈ ಸ್ವರೂಪದಿಂದ ಶ್ರೀಹರಿಯು ಪ್ರಕಾಶಮಾನನಾಗಿ ಗದ್ಗದ ಸ್ವರ ದಿಂದ ರಾಜನಿಗೆ— ಎಲೈ ಪಾಪಿಷ್ಠನೇ ಮೂರ್ಖನೇ ! ರಾಜ್ಯಸಂಪತ್ತಿನಿಂದ ಸೊಕ್ಕಿಗೇರಿದ ಚೋಳ ಭೂಪಾಲನೆ ! ಇದು ನೋಡು ನನ್ನ ದುರವಸ್ಥೆಯನ್ನು ದಿಕ್ಕಿಲ್ಲದ ಅನಾಥನಾದ ನಾನು ಅನ್ಯಾನ್ಯಗತಿಕನಾಗಿ ಕಾಡು–ನಾಡುಗಳೆನ್ನದೆ ಮನಬಂದಂತೆ ಅಲೆಯುತ್ತ ತಾಯ್ತಂದೆಗಳನ್ನು ನೀಗಿದೆನು; ಸ್ವಬಾಂಧವರಿಂದ ಹೊರತಾದೆನು ಇಷ್ಟೇ ಏಕೆ ? ಇಹ–ಪರಗಳಿಗೆ ಸಾಧನವೆನಿಸಿದ ಮೋಹದ ಹೆಂಡತಿಯಿಂದ ಹೀಯಾಳಿಸಿಕೊಂಡೆನು. ಅವಳಿಂದ ಅಗಲಿದೆನು ಕೊನೆಗೆ ಜೀವನ ತಾಪಕ್ಕೆ ಬೇಸತ್ತು ನಿನ್ನ ರಾಜ್ಯಕ್ಕೊಳಪಟ್ಟ ಈ ವೇಂಕಟಾಚಲದಲ್ಲಿ ಗೌಪ್ಯವಾಗಿ ಈ ಹುತ್ತಿನಲ್ಲಿ ವಾಸವಾಗಿರಹತ್ತಿದೆನು. ಯಾರೂ ಅರಿಯದಂತ ಇದ್ದರೂ ಇಲ್ಲಿಯೂ ದುರ್ವಿಧಿಯು ನನ್ನನ್ನು ಬಿಡಲಿಲ್ಲವಲ್ಲ ! ನಿನ್ನ ಗೋಪಾ ಲನು ಕೊಡಲಿಯಿಂದ ನನ್ನ ತಲೆಗೆ ಬಲವಾದ ಏಟನ್ನು ಹಾಕಿದನು ! ಅವನೆಂಥ ದುಷ್ಟನು ? ಆತನು ನನ್ನನ್ನು ಗಾಯಗೊಳಿಸಿದ್ದರಿಂದ ನನಗೆ ಬಹಳ ತಾಪ

ವಾಗಿದೆ. ರಾಜ! ಇನ್ನು ನಾನು ಬಹಳವಾಗಿ ನುಡಿಯಲಾರೆ. ಇವೆಲ್ಲ ದುರಂತಕ್ಕೆ ಮದೋನ್ಮತ್ತನಾದ ನೀನೇ ಕಾರಣನು. ಎಂದು ನನ್ನ ಅಭಿಪ್ರಾಯವಿದೆ. ಚೋಳ! ನೀನು ಅನ್ಯಾಯ ಅಧರ್ಮಗಳಿಂದ ರಾಜ್ಯವಾಳುತ್ತಿರುವ ಮೂಲಕವಾಗಿಯೇ ನಿನ್ನ ರಾಜ್ಯದಲ್ಲಿ ಇಂಥ ದುರ್ಘಟನೆಗಳು ಒದಗ ಹತ್ತಿವೆ ನೀನು ರಾಜಛತ್ರದ ನೆರಳಲ್ಲಿ ಕುಳಿತುಕೊಂಡು ನಮ್ಮಂಥ ದೀನರಿಗುಂಟಾದ ತಾಪವನ್ನು ಲಕ್ಷಿಸದೆ ಇರುತ್ತಿರುವಿ. ರಾಜವ್ಯಜನಗಳ ಅಲೆದಾಟದಿಂದುಂಟಾದ ವಾಯುವಿನಿಂದ ನಿನ್ನಲ್ಲಿಯ ಒಳ್ಳೆ ಗುಣಗಳೆಲ್ಲ ಹಾರಿಹೋಗಿವೆ. ವಂದಿ–ಮಾಗಧ–ಭಟ್ಟಂಗಿ ಮೊದಲಾದ ಸ್ತುತಿಪಾಠಕರು ಹೊಗಳುವ ನಿನ್ನ ಸದ್ಗುಣಗಳು ದುರ್ಗುಣಗಳಾಗಿ ನಿನ್ನಲ್ಲಿ ತುಂಬಿಕೊಂಡಿರುವವು ಬಹಳ ಮಾತುಗಳಿಂದೇನು? ಒಂದೇ ಒಂದು ನುಡಿಯಲ್ಲಿ ಹೇಳುವದಾದರೆ ನೀನೊಬ್ಬ ಅಪರಾಧದ ಮೂರ್ತಿಯು. ಕ್ಷಮೆಹೊಂದಲು ತಕ್ಕವನಲ್ಲದ ದೋಷಿಯು ಆದುದರಿಂದಲೇ ನಾನು ನಿನಗೆ ಶಾಪವನ್ನು ಕೊಡುವೆ. 'ರಾಜ! ನೀನು ನನಗೆ ಕೊಟ್ಟ ಕಷ್ಟ–ಶೋಕಗಳ ಪರಿಣಾಮ–ಪ್ರಾಯಶ್ಚಿತ್ತತೆಗಾಗಿ ಪಿಶಾಚ್ಚನಾಗು' ಎಂದು ಸಿಟ್ಟಿನಭರದಲ್ಲಿ ಶ್ರೀಹರಿಯು ನುಡಿದೇಬಿಟ್ಟನು.

ಅಯ್ಯೋ! ಚೋಳರಾಜನಿಗೆ ಶ್ರೀನಿವಾಸನ ಬಲವತ್ತರವಾದ ಶಾಪವು ಅಕಸ್ಮಾತ್ತಾಗಿ ತಟ್ಟಿತು ಶ್ರೀಹರಿಯಮುಖದಿಂದ ಶಾಪವು ಹೊರಬಿದ್ದ ಕೂಡಲೆ ರಾಜನು ಬೇರು ತುಂಡಿರಿಸಿದ ತಾಳೆಮರದಂತೆ ದೊಪ್ಪನೆ ಭೂಮಿಗುರುಳಿದನು. ಮೂರ್ಛೆಹೋದನು ಎಚ್ಚತ್ತು ಶೋಕಿಸಿದನು; ಕೆಲಹೊತ್ತಿನನಂತರ ಶ್ರೀನಿವಾಸನ ಚರಣಾರವಿಂದಗಳನ್ನು ಗಟ್ಟಿಯಾಗಿ ಹಿಡಿದು ಶೋಕವಾದರೂ ಒಳ್ಳೆ ಭಕ್ತಿಯಿಂದ ಉದುರುತ್ತಿದ್ದ ತನ್ನ ಕಣ್ಣೀರಿನಿಂದ ಆತನ ಪಾದವನ್ನು ತೊಳೆದನು. ತನ್ನ ಶಿರಸ್ಸನ್ನು ಆತನ ಚರಣಗಳ ಮೇಲಿಟ್ಟನು. ಭೀತಿಯಿಂದಲೂ ಗದ್ಗದ ನಡುಗುವದನಿಯಿಂದಲೂ ಆ ಶ್ರೀಹರಿಯನ್ನು ಹಲವು ಬಗೆಯಾಗಿ ಬೇಡಿಕೊಳ್ಳಹತ್ತಿದನು. ಮತ್ತೆ ಮತ್ತೆ ನಮಸ್ಕಾರ ಮಾಡಿದನು. ಆದರೇನು; ಶ್ರೀಹರಿಯ ಶಾಪವು ಆತನಿಗೆ ವಜ್ರಲೇಪದಂತಾಯಿತು.

---

# ೪ನೆಯ ಅಧ್ಯಾಯ

ಚೋಳ ಭೂಪಾಲನು ಹುತ್ತಿನಿಂದ ಮೇಲಕ್ಕೆ ಎದ್ದ ದೇವ ದೇವೋತ್ತಮ ಶ್ರೀವಿಷ್ಣುವಿನಿಂದ ಶಾಪಹೊಂದಿದರೂ ಆತನ ಸಾಕಾರ ಮೂರ್ತಿ ದರ್ಶನದಿಂದ ಸಂತುಷ್ಟತೆಯನ್ನು ಪಡೆದನು. ಆದರೆ ಆ ಆನಂದವು ಕ್ಷಣ ಕಾಲವಲ್ಲಿ ಮರೆಯಾಯಿತು. ಶಾಪವುನೆನಪಾಗಿ ಕಳವಳಗೊಳ್ಳ ಹತ್ತಿದನು. ಕೂಡಲೆ ಆತನು ಶ್ರೀವಿಷ್ಣುವಿನನ್ನು ಕುರಿತು—' ದೇವ! ಕರುಣಾಸಾಗರರಾದ ನೀವು ಏನೂ ಅಪರಾಧವಿಲ್ಲದ ನನ್ನನ್ನು ಶಪಿಸಿಬಿಟ್ಟಿರಲ್ಲ! ಇಲ್ಲಿ ಒದಗಿದ ಯಾವ ದುರ್ಘಟನೆಗಳೂ ನನಗೆ ಅನ್ವಯಿಸಲಾರವು, ಸ್ವಾಮಿ! ನಿಮಗೆ ಮಾತ್ರ ನಮ್ಮ ತುರುಗಾಹಿ ಗೋಪಾಲನ ಕೊಡಲಿಯೇಟಿನಿಂದ ಪರಮದುಃಖವು ಪ್ರಾಪ್ತವಾದುದು ನನ್ನ ಅಂತಃಕರುಣಕ್ಕೆ ಮಾಯಲಾರದ ಹುಣ್ಣಾದಂತಾಯಿತು. ಆ ಮೇಲೆ ನೀವು ನನ್ನನ್ನು ಶಪಿಸಿದ್ದರಿಂದಂತೂ ಆ ಹುಣ್ಣಿನಮೇಲೆ ಕಾದ ಕಬ್ಬಿಣದ ಕಂಬಿಯಿಂದ ಬರೆಯನ್ನೆಳದಂತಾಯಿತು. ನನ್ನ ದುರ್ದೈವದ ಪ್ರಾಬಲ್ಯವಿದ್ದುದರಿಂದಲೇ ಈ ಘಟನೆಗಳೊದಗಿ ನನ್ನನ್ನು ಹೀನಾವಸ್ಥೆಗೆ ಗುರಿಮಾಡಿದವು ಈಶೇಚ್ಛೆಗೆ—ಉಪಾಯವಿಲ್ಲ" ಎಂದು ಅತಿ ವ್ಯಾಕುಲತೆಯಿಂದ ನುಡಿದು ದೇವನ ಎದುರಿನಲ್ಲಿ ಕೈಮುಗಿದು ಸ್ತಂಭದಂತೆ ನಿಂತು ಬಿಟ್ಟನು.

ಏನೊಂದು ವಿಚಾರ, ಕಾರಣಗಳಿಲ್ಲದೆ ವ್ಯರ್ಥವಾಗಿ ತನ್ನಿಂದ ಶಾಪ ಪಡೆದ ರಾಜನು ತನ್ನೆದುರಿನಲ್ಲಿ ನಿಂತುದನ್ನು ಶ್ರೀಮನ್ನಾರಾಯಣನು ಕಂಡು ಬಹುಪರಿಯಾಗಿ ಹಳಹಳಿಸಿದನು. ದಯಾಸಾಗರನೆಂಬ ಹೊಗಳಿಕೆಗೆ ತಕ್ಕವನೆನಿಸಿದ ನನ್ನಿಂದ ಇದೆಂಥ ಅನುಚಿತಕೃತಿಯುಂಟಾಯಿತು? ವಿಚಾರವಿಲ್ಲದೆ ಈ ರಾಜನಿಗೆ ಶಾಪಕೊಟ್ಟು ನನ್ನ ದೇವತ್ವಕ್ಕೆ ಕಲಂಕವನ್ನು ನಾನೇ ಉಂಟು ಮಾಡಿಕೊಂಡೆನಲ್ಲ! ಆದದ್ದಾಗಿ ಹೋಯಿತೆಂಬ ತಿಳಿವು ನನ್ನಲ್ಲಿ ಉದಿಸಲಿಲ್ಲವಲ್ಲ; ಎಂದು ಬಲು ಪಶ್ಚಾತ್ತಾಪದಿಂದ ನೊಂದನು. ಬಳಿಕ ಆ ರಾಜನನ್ನು ಕುರಿತು—' ಚೋಳರಾಜ! ನಾನು ಏನೂ ವಿಚಾರಮಾಡದ ಅಜ್ಞಾನದಿಂದಲೂ ಗಾಯದಿಂದುಂಟಾದ ಬಳಲಿಕೆಯಿಂದಲೂ ನೀನೇ ದೋಷಿಯೆಂದು ಭಾವಿಸಿದೆ.

ಆ ಭಾವಾವೇಶದಲ್ಲಿ ನಿನಗೆ ಶಾಪಕೊಟ್ಟೆ ಹಿಂದಿನಿಂದ ಎಲ್ಲ ತಿಳಿದು ಕಳವಳ ಪಟ್ಟೆ. ಆದರೆ ಉಪಯೋಗವೇನು ? ಬುದ್ಧಿ ಕಳೆದುಕೊಂಡು ಹುಡುಕಿದರೆ ದೊರೆಯುವದೇನು? ಮಿಂಚಿ ಮಾಯವಾದಮಾತಿಗೆ ಚಿಂತಿಸುವದು ಕೇವಲ ದಡ್ಡತನವೇಸರಿ ರಾಜ ; ಆದದ್ದಾಯಿತು. ಇನ್ನು ನಾನು ಕೊಟ್ಟ ಶಾಪವು ತೊಡೆಯಲು ಬಾರದಂತಹದು. ಅದನ್ನು ನೀನು ಅನುಭವಿಸಲೇ ಬೇಕಾಗು ವದು. ಇದಕ್ಕಾಗಿ ನಿನಗೆ ಅಸಹ್ಯವಾದ ತಾಪವಾಗುತ್ತಿರಬಹುದು ; ಆದರೂ ನಿನಗೆ ಸಮಾಧಾನವೆನ್ನಿಸುವ ಕೆಲವುಮಾತು ಹೇಳುವೆನು ಚಿತ್ತೈಸು. ಅದೇ ನೆಂದರೆ— "ರಾಜ! ಸದ್ಯದ ಕಲಿಯುಗ ಮುಗಿಯುವವರೆಗೆ ನಾವಿಬ್ಬರು ಸತ್ಯ ಸಂಕಲ್ಪವೆಂಬ ದೋಷದಿಂದ ಬೆರೆತು ಸಮದುಃಖಿಗಳಾಗಿ ಇರೋಣ. ಇನ್ನು ಮುಂದೆ ಕೆಲ ದಿನಗಳಲ್ಲಿಯೇ ತೋಂಡದೇಶದಲ್ಲಿ 'ಆಕಾಶರಾಜ' ಎಂಬೊಬ್ಬರಾಜನು ಜನಿಸುವನು. ಮುಂದೆ ಅವನಿಗೆ 'ಪದ್ಮಾವತಿ' ಎಂಬ ಕನ್ಯೆಯು ಮಗಳಾಗುವಳು. ಆ ರಾಜನು ತನ್ನ ಆ ಕನ್ಯೆಯನ್ನು ನನಗೇ ಕನ್ಯಾದಾನ ರೂಪದಿಂದೆ ಧಾರೆಯೆರೆದು ಕೊಡುವನು. ಕನ್ನೆಯನ್ನು ನನಗೊಪ್ಪಿ ಸುವ ಕಾಲದಲ್ಲಿ ಆ ನನ್ನಮಾವ ಆಕಾಶರಾಜನಿಂದೆ ನವರತ್ನ ಬಂಗಾರಗಳಿಂದ ವಿರಚಿತವಾಗಿರುವ ಕಿರೀಟವು ನನಗೆ ವರಭೂಷಣವೆಂದು ಅರ್ಪಿತವಾಗುವದು. ಮಾವನಿತ್ತ ಆ ಶಿರೋಭೂಷವನ್ನು ನಾನು ಪ್ರತಿ ಶುಕ್ರವಾರದಿವಸ ಧರಿಸುವೆ. ಆಗ ನನ್ನ ಕಣ್ಣುಗಳಲ್ಲಿ ನೀರುತುಂಬಿ ಬರುವವು. ಆಗ ಮಾತ್ರ ನೀನು ಅಲ್ಪ ಕಾಲದ ಮಟ್ಟಿಗೆ ನನ್ನನ್ನು ನಿರೀಕ್ಷಿಸಿ ಆಗ ಅಸ ದೃಶವಾದ ಸುಖಪಡುವಿ" ಎಂದು ಭವಿಷ್ಯ ಸೂಚನೆಯನ್ನು ಆ ರಾಜನಿಗೆ ತಿಳಿಸಿದನು. ಇಷ್ಟೇಅಲ್ಲ ತಾನು ಸದ್ಯ ಕ್ಕೆಕೊಂಡ ಅವತಾರದ ಪ್ರಯೋಜನದ ಗುಟ್ಟನ್ನು ಆ ಚೋಳ ರಾಜನಿಗೆ ತಿಳಿಸಿದನು.

ಚೋಳರಾಜನು ಶ್ರೀಹರಿಯ ಇಂಗಿತವನ್ನೆಲ್ಲ ಅರಿತನು. ಆತನುಕೊಟ್ಟ ಶಾಪವನ್ನು ಅಲ್ಲಗಳೆಯದೆ ಅದನ್ನೇ ಪ್ರಸಾದವೆಂದು ಸ್ವೀಕರಿಸಿದನು. ಆ ಶಾಪಕ್ಕನುಸರಿಸಿ ಪಿಶಾಚ್ಚರೂಪವನ್ನು ಧಾರಣಮಾಡಿದನು. ಹಾಗು ಆ ಜನ್ಮಕ್ಕೆ ತಕ್ಕ ವೃತ್ತಿಯನ್ನು ಕೈಕೊಂಡು ಕೂಡಲೆ ಅರಣ್ಯ-ವನಗಳನ್ನು ಸಂಚರಿಸಲು ಶೀಘ್ರಗತಿಯಿಂದ ಗಮನಿಸಿದನು

---

# ೫ನೆಯ ಅಧ್ಯಾಯ

ಚೋಳರಾಜನು ಶಾಪಗ್ರಸ್ತನಾಗಿ ವನಾಂತರವನ್ನು ಸೇರಿದನು. ಶ್ರೀಹರಿಯು ಆತನಿಗೆ ಕೊಟ್ಟ ವಚನದಂತೆ ತಾನೂ ಮತ್ತೆ ಮೊದಲು ವಾಸಿಸುತ್ತಿದ್ದ ಹುತ್ತನ್ನೇ ಸೇರಿ ತನ್ನ ತಲೆಗೆ ಗೋಪಾಲನ ಕೊಡಲಿಯ ಪೆಟ್ಟಿನಿಂದಾದ ಗಾಯವನ್ನು ಮಾಯಿಸಿಕೊಳ್ಳುವ ಕುರಿತು ದೇವಗುರು ಬೃಹಸ್ಪತಿಯನ್ನು ಸ್ಮರಿಸಿದನು ಕೂಡಲೆ ಸುರಗುರುವು ಆಗಮಿಸಿ ವಲ್ಮೀಕದಲ್ಲಿ ಇದ್ದ ಶ್ರೀಮನ್ನಾರಾಯಣನನ್ನು ಕಂಡು ಆತನ ತಲೆಗಾದ ಗಾಯನಿರೀಕ್ಷಿಸಿ ಗಾಯಕ್ಕೆ ಔದುಂಬರದ ಹಾಲಲ್ಲಿ ಎಕ್ಕೆಯ ಕಾಯಿಯಲ್ಲಿಯ ಅರಳೆಯನ್ನು ತೋಯಿಸಿ ಹಚ್ಚಲು ಮಾಯುವದೆಂದು ಹೇಳಿ ಬೃಹಸ್ಪತಿಯು ಹಿಂತೆರಳಿದನು

ಬೃಹಸ್ಪತ್ಯಾಚಾರ್ಯರು ಹೇಳಿದ ಔಷಧವನ್ನು ಶ್ರೀನಿವಾಸನು ತಾನೇ ಸಿದ್ಧಪಡಿಸಿಕೊಂಡು ಪ್ರತಿ ನಿತ್ಯವೂ ಗಾಯಕ್ಕೆ ಹಾಕಿ ಕೇವಲ ವಿಶ್ವಾಸದಿಂದಲೇ ತನ್ನನ್ನು ತಾನೇ ಉಪಚರಿಸಿಕೊಂಡು ತಲೆಯಗಾಯ ಕಳೆದುಕೊಳ್ಳುತ್ತ ವೇಂಕಟಾಚಲದಲ್ಲಿಯ ಹುತ್ತಿನಲ್ಲಿಯೇ ಇದ್ದುಕೊಂಡು ತನ್ನ ಮೊದಲಿನ ರಾಮಾವತಾರ ಹಾಗು ಕೃಷ್ಣಾವತಾರಗಳನ್ನು ಸ್ಮರಿಸಿಕೊಂಡು ಆನಂದದಿಂದ ಇರಹತ್ತಿದನು. ಆತನು ಕಲ್ಪಿಸಿದ ರಾಮಾವತಾರವೆಂದರೆ— ತಾನು ವಾಸಮಾಡಿದ ಹುತ್ತೇ ಕೌಸಲ್ಯಾಮಾತೆಯು, ಅದಕ್ಕೆ ನೆರಳನ್ನು ಕೊಟ್ಟ ಹುಣಿಸೇಮರವೇ ದಶರಥನು; ಶೇಷಗಿರಿಯೇ ತಮ್ಮ ಲಕ್ಷ್ಮಣನು. ಹಾಗು ವೇಂಕಟಾಚಲವೇ ತನ್ನ ಅಯೋಧ್ಯಾನಗರವು ಎಂಬದಾಗಿ ಉತ್ಪ್ರೇಕ್ಷಿಸಿ ತಾನು ಶ್ರೀರಾಮನ ಹಾಗೆ ಪತ್ನೀವಿರಹಿತನಾದವನು ಹೀಗೆ ಭಾವಿಸಿದನು. ಅದೇಪ್ರಕಾರವಾಗಿ ಆತನು ಕೃಷ್ಣಾವತಾರವನ್ನು ನೆನಸಿಕೊಂಡ ಬಗೆಹೇಗೆಂದರೆ– ಆ ವಲ್ಮೀಕವೇ ದೇವಕಿಯು, ತಿಂತ್ರಿಣೀವೃಕ್ಷವೇ ವಸುದೇವನು, ಶೇಷಗಿರಿಯೇ ಬಂಧು–ಬಲರಾಮನು, ವೇಂಕಟಾಚಲವೇ ಮಥುರೆಯು, ಸ್ವಾಮಿಪುಷ್ಕರಿಣಿ ತೀರ್ಥವೇ ಯಮುನಾನದಿಯು, ಮತ್ತು ಅಲ್ಲಿಯ ಪರ್ವತ ಪ್ರದೇಶದಲ್ಲಿರುವ ಮೃಗ–ಪಕ್ಷಿಗಳೆಲ್ಲ ಗೋಪ–ಗೋಪಿಯರು ಎಂಬ ಈ ಭಾವನೆಯನ್ನು ತಾಳಿ ಶ್ರೀನಿವಾಸನು ತನ್ನ ಲೀಲೆಯಿಂದ ಲೋಲುಪನಾಗಿರಲು ಇದಕ್ಕೂ ಮಿಗಿಲಾಗಿ

ಆತನಿಗೆ 'ತಾನು ವಾಸಮಾಡಿಕೊಂಡಿದ್ದ ವಲ್ಮೀಕವು ವೈಕುಂಠ ವನ್ನು ವಿಸ್ಮರಣೆಮಾಡುವಂತೆ ಭಾಸವಾಗಹತ್ತಿತು. ಆ ಪ್ರದೇಶದಲ್ಲಿ ಪ್ರವಹಿಸುವ ಸುವರ್ಣಮುಖರೀ ನದಿಯೇ ವೈಕುಂಠಲೋಕದಲ್ಲಿಯ ವಿರಜಾ ನದಿಗೆ ಸದೃಶವಾಗಿಯೂ, ಇಲ್ಲಿಯ ಪಕ್ಷಿಗಣಂಗಳು ವೈಕುಂಠಲೋಕದಲ್ಲಿಯ ಮುಕ್ತ ಬ್ರಹ್ಮರಾಗಿಯೂ, ಮೃಗ ಸಮುದಾಯವು ಮುಕ್ತರುದ್ರರಾಗಿಯೂ, ಇಲ್ಲಿಯ ಕಪಿಗಳೆಲ್ಲ ಸನಕ-ಸನಂದನ ಮೊದಲಾದ ವೈಕುಂಠದಲ್ಲಿಯ ಋಷಿ ಗಳಾಗಿಯೂ ಸ್ವಯಂ ಶ್ರೀನಿವಾಸನು ವೈಕುಂಠಾಧಿಪ ರಮಾಪತಿ ನಾರಾಯಣ ನಾಗಿಯೂ ಆಗಿರುವರೆಂಬ ದೃಢಭಾವನೆಯಿಂದ ಶ್ರೀನಿವಾಸನು ವೈಕುಂಠ ವನ್ನು ಈ ವೇಂಕಟಗಿರಿಯ ಸುಖದಿಂದ ಮರೆತು ಸುಖದಲ್ಲಿ ತಲ್ಲೀನನಾಗಿ ಇರಹತ್ತಿದನು.

ಈ ಪ್ರಕಾರ ಸಾಕ್ಷಾತ್ ಶ್ರೀನಿವಾಸನಿಗೆ ಅತ್ಯಂತ ಪ್ರಿಯವೆನಿಸಿದ ವೇಂಕಟಾಚಲ, ಶೇಷಾಚಲ, ಸ್ವಾಮಿಪುಷ್ಕರಿಣಿ ಮೊದಲಾದವುಗಳ ಮಹಾತ್ಮ್ಯವನು ಬ್ರಹ್ಮಮೊದಲಾದವರು ವರ್ಣಿಸಲು ನಿರ್ಬಲರಾದಾಗ ಮನು ಷ್ಯರು ಅದನ್ನು ಬಣ್ಣಿಸುವದು ಹೇಗೆ?

# ವರಾಹ—ಶ್ರೀನಿವಾಸರು

ಶ್ರೀನಿವಾಸನ ತಲೆಗೆ ಆದ ಗಾಯವು ಪ್ರತಿ ನಿತ್ಯವೂ ಬೃಹಸ್ಪತಿಯು ಹೇಳಿದ ಔಷಧಲೇಪನದಿಂದ ಗುಣವಾಗತೊಡಗಿತು ಶ್ರೀನಿವಾಸನು ತಾನೇ ಅರಣ್ಯದಲ್ಲಿ ಅಡ್ಡಾಡಿ ವನಸ್ಪತಿಯನ್ನು ತಂದು ಔಷಧವನ್ನು ಸಿದ್ಧ ಪಡಿಸಿ ಕೊಂಡು ತಾನೇ ಗಾಯಕ್ಕೆ ಲೇಪಿಸಿಕೊಳ್ಳುವನು ಯಾರೂ ದಿಕ್ಕಿಲ್ಲದೆ ಅನಾಥನಾಗಿ ಅಜ್ಞಾತವಾಸಿಯಾದವನಿಗೆ ಆರೈಕೆ ಮಾಡುವವರೆಲ್ಲಿ ಬರಬೇಕು? ಅದೇ ಸ್ಥಿತಿಯು ಈಗ ಶ್ರೀನಿವಾಸನಿಗೆ ಉಂಟಾಗಿದೆ ಒಂದಾನೊಂದುದಿನ ಔಷಧಿ ಸಂಗ್ರಹಕ್ಕಾಗಿ ಆತನು ಅರುಣೋದಯದಲ್ಲಿದ್ದು ಅರಣ್ಯದಲ್ಲಿ ನಡೆದು ಹೋಗುತ್ತಿದ್ದನು. ಆತನೆದುರಿಗೆ ವರಾಹಮೂರ್ತಿಯು ತನ್ನ ಹಲವು ಸೂಕರ ಗಣಗಳೊಂದಿಗೆ ಬರುತ್ತಿರುವನನ್ನು ಕಂಡನು ಬೇಟೆಯ ನೆವದಿಂದ ಅಲ್ಲಿ ಸಂಚರಿಸುವ ಆ ತಂಡವೂ ಈ ಶ್ರೀನಿವಾಸನನ್ನು ನೋಡಿತು ಆ ಸೂಕರ ತಂಡದವರು ಶಾಮುಕಧಾನ್ಯವನ್ನು ಅಪಹರಿಸಿದ ವೃಷಭಾಸುರನನ್ನು ಅಷ್ಟರಲ್ಲೇ

ಜಯಿಸಿ ಗೆಲುವಿನ ಮದದಿಂದ ಉನ್ಮತ್ತರಾಗಿ ಬರುತ್ತಿದ್ದರು. ಅವರು ಶ್ರೀನಿವಾಸನನ್ನು ದೂರಿಂದಲೇ ನಿರೀಕ್ಷಿಸಿ—'ಎಲೈ ನಮಗೆ ಎದುರಾಗಿಬರುವ ನೀನಾರು? ನಿಲ್ಲು, ನಿಲ್ಲು ಎಂದು ಗರ್ಜಿಸಿ ಆರ್ಭಟಿಸುತ್ತ ಶ್ರೀನಿವಾಸನಕಡೆಗೇ ಒತ್ತರದಿಂದ ಬರಹತ್ತಿದರು. ಮಾರಿಬಂದಾಗ ಓರೆಯಾಗುವದೇಲೇಸು' ಎಂದರಿತು ಶ್ರೀನಿವಾಸನು ತಾನು ಮುಂದೆ ಹೋಗುವದನ್ನು ನಿಲ್ಲಿಸಿದನು ಹಾಗೇ ಹಿಂತಿರುಗಿ, ತಡಮಾಡದೆ ಬಂದು ತನ್ನ ವಾಸಸ್ಥಾನವಾದ ಹುತ್ತನ್ನು ಸೇರಿಕೊಂಡನು. ಆ ಸೂಕರ ತಂಡದ ಒಡೆಯನಾದ ವರಾಹಮೂರ್ತಿಯು ಶ್ರೀನಿವಾಸನಿರುವ ಹುತ್ತಿನ ಹತ್ತಿರಬಂದು ಅಡಗಿಕುಳಿತಿರುವ ಆತನನ್ನು ಗಟ್ಟಿಯಾಗಿ ಕೂಗಿಕರೆದು 'ಶ್ರೀನಿವಾಸಾ! ನೀನು ಅಂಜಬೇಡ, ನನ್ನಿಂದ ನಿನಗೆ ಏನೊಂದು ತೊಂದರೆ ಯಾಗುವದಿಲ್ಲ ಹುತ್ತಿನಿಂದ ಹೊರಗೆ ಬಾ" ಎಂದು ಆತನನ್ನು ಕರೆದನು. ಕೇವಲ ಲೋಕರೀತಿಗನುಗುಣವಾಗಿ ಭಯಪಟ್ಟವನಂತೆ ನಟಿಸುವ ಶ್ರೀನಿವಾಸನಿಗೆ ಭಯವೆಲ್ಲಿ? ವರಾಹಮೂರ್ತಿಯು ತನ್ನನ್ನು ಕರೆದಕೂಡಲೆ ಆತನು ನಿರ್ಭಯವಾಗಿ ಹುತ್ತಿನಿಂದ ಹೊರಬಂದನು. ಎದುರುನಿಂತಿರುವ ವರಾಹ ಮೂರ್ತಿಯನ್ನು ಕಂಡನು. ವರಾಹಮೂರ್ತಿಯೂ ಶ್ರೀನಿವಾಸನನ್ನು ಎವೆಯಿಕ್ಕದೆ ನೋಡಿದನು. ಹೀಗೆ ಒಬ್ಬರನ್ನೊಬ್ಬರು ಗುರುತಿಸುವ ಸೂಚನೆಯಿಂದ ಅನ್ಯೋನ್ಯರಾಗಿ ಅವಲೋಕಿಸಿದರು. ಇಬ್ಬರೂ ತಮ್ಮ ಕಣ್ಣುಗಳಲ್ಲಿ ತುಂಬಿಬಂದ ಆನಂದ ಬಾಷ್ಪಗಳನ್ನು ಕೈಬೆರಳುಗಳಿಂದ ಮಿಡಿದುಚಲ್ಲಿದರು. ಕಣ್ಣನ್ನೊರಿಸಿಕೊಂಡರು. ತಮ್ಮ ತಮ್ಮ ಭುಜಗಳಿಂದ ಒಬ್ಬರನ್ನೊಬ್ಬರು ಗಟ್ಟಿಯಾಗಿ ಆಲಂಗಿಸಿದರು. ಸರಸವಿಸುಖದ ನುಡಿಗಳನ್ನಾಡಿದರು. ಇಂತು ಪ್ರತ್ಯಕ್ಷವಾಗಿ ಶೋಭಿಸುವ ಶ್ರೀನಿವಾಸ—ವರಾಹ ಮೂರ್ತಿಗಳು ಕೇವಲ ಲೌಕಿಕರಂತೆ ತಮ್ಮಲ್ಲಿ ಅನೇಕ ತರಹದ ಮಾತು-ಕತೆಗಳನ್ನಾಡಹತ್ತಿದರು. ಆಗ ಬ್ರಹ್ಮನೇ ಮೊದಲಾದ ಸುರರು ಅಲ್ಲಿಬಂದರು. ಆ ವರಾಹ-ಶ್ರೀನಿವಾಸರ ಸಂದರ್ಶನ ಪ್ರಸಂಗದಲ್ಲಿ ಅವರಮೇಲೆ ಹೂಮಳೆಗರೆದರು. ಹಾಗು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ಇಷ್ಟೇಅಲ್ಲ. ದೇವತೆಗಳೆಲ್ಲರು ವೇಂಕಟಾಚಲದ ಮಹಿಮೆಯನ್ನೂ ಲಕ್ಷ್ಮೀವಲ್ಲಭಶ್ರೀನಿವಾಸನ ಅಗಮ್ಯವಾದ ಮಾಯಾಲೀಲೆಯನ್ನೂ ಕೊಂಡಾಡಿ ತಮ್ಮ ತಮ್ಮ ಸ್ಥಾನಗಳಿಗೆ ಹೋದರು.

ಶ್ರೀನಿವಾಸ.— ವರಾಹಮೂರ್ತಿಗಳ ಮಾತು-ಕತೆಗಳು ಇನ್ನೂ ಮುಗಿದಿರಲಿಲ್ಲ. ಹುತ್ತಿನ ಬಳಿಯಲ್ಲಿ ಕುಳಿತುಕೊಂಡು ಹೆಚ್ಚೆಚ್ಚು ವೇಳೆಗಳೆದಂತೆ ಅವರ ಮಾತುಗಳೂ ಹೆಚ್ಚಾಗಹತ್ತಿದವು. ವರಾಹದೇವನು ಶ್ರೀನಿವಾಸನನ್ನು ಕುರಿತು 'ನೀನು ವೈಕುಂಠವನ್ನು ಬಿಟ್ಟು ಇಲ್ಲಿಗೇಕೆ ಬಂದೆ? ಎಂದು ಕೇಳಿದನು ಆಗಕ್ಕೆ ಶ್ರೀನಿವಾಸನು ತಾನು ವೈಕುಂಠದಲ್ಲಿ ಸುಖನಿದ್ರೆಗೈಯ್ಯುತ್ತಿರುವಾಗ ಭೃಗುಮುನಿಯು ಬಂದು ಹೋದಂದಿನಿಂದ ಮೊದಲಾಗಿ ಲಕ್ಷ್ಮೀದೇವಿಯು ತನ್ನನ್ನು ಧಿಕ್ಕರಿಸಿ ಕರವೀರಪುರಕ್ಕೆ ಹೋದವರೆಗಿನ ಸಾದ್ಯಂತ ಸಂಗತಿಯನ್ನು ವಿವರಿಸಿದನು. ಮತ್ತು ಲಕ್ಷ್ಮೀವಿರಹಿತ ವೈಕುಂಠ ಮಂದಿರಕ್ಕಿಂತಲೂ ಭೂಲೋಕದ ವೇಂಕಟಾಚಲದ ಈಹುತ್ತೇ ನನಗೆ ಸೋಗಸಾಗಿ ತೋರಿದ್ದರಿಂದ ಇಲ್ಲಿ ಬಂದು ನಾನು ವಾಸಮಾಡಹತ್ತಿರುವೆ ಎಂಬದಾಗಿ ಹೇಳಿದನು ಮತ್ತು ಗೋಪಾಲನಿಂದ ತನ್ನ ತಲೆಗೆ ಗಾಯವಾದುದನ್ನೂ ತಾನು ಚೋಳರಾಜನಿಗೆ ಶಾಪಕೊಟ್ಟದ್ದನ್ನೂ ಔಷಧಕ್ಕಾಗಿ ಅಡವಿಯಲ್ಲಿ ತಾನು ಚರಿಸುವದನ್ನೂ ಒಂದೂಬಿಡದೆ ಆ ವರಾಹಮೂರ್ತಿಗೆ ನಿರಭಿಮಾನದಿಂದ ತಿಳಿಸಿದನು. ಶ್ರೀನಿವಾಸನಿಂದ ಎಲ್ಲ ಸಂಗತಿಗಳನ್ನರಿತು ವರಾಹಮೂರ್ತಿಯು—' ಇನ್ನು ಮುಂದೆ ನಿನ್ನವಿಚಾರವೇನು ? ಎಂದು ಕೇಳಲು ಶ್ರೀನಿವಾಸನು ' ಮೂರ್ತಿ ! ಇಂದಿನದಿನ ಆಕಸ್ಮಿಕವಾಗಿ ನಿನ್ನ ದರ್ಶನವಾಯಿತು. ಇದು ನನ್ನ ಭಾವೀ ಸುದೈವದ ಸೂಚನೆಯೆಂದೇ ತಿಳಿಯುವೆನು. ಇನ್ನು ಕಲಿಯುಗ ಮುಗಿಯುವವರೆಗೂ ನಾನಿಲ್ಲಿಯೇ ಇರುವ ವಿಚಾರವನ್ನು ಮಾಡಿರುವೆ. ಅದಕ್ಕಾಗಿ ನಿನ್ನಲ್ಲಿ ನನ್ನ ಬೇಡಿಕೆಯು ಒಂದು ಇರುವದು. ನೀನು ಅದನ್ನು ಪೂರ್ಣಮಾಡುವಿ ಎಂಬ ಭರವಸಯೂ ನನಗಿದೆ. ಅದೇನೆಂದರೆ " ನಾನು ಇಲ್ಲಿ ಇರುವವರೆಗೂ ನೀನು ನನಗೆ ಇರಲಿಕ್ಕೆ ತೀರ ಹೆಚ್ಚೆಂದರೆ ನೂರುಅಡಿ ಆಳತೆಯ ಭೂಮಿಯನ್ನು ಕೊಡಬೇಕು " ಎಂಬದಾಗಿ ಮೂರ್ತಿಯನ್ನು ಕೇಳಿಕೊಂಡನು. ಮನುಷ್ಯನು ಯಾವಾಗಲೂ ಒಂದೇ ಸ್ಥಿತಿಯಲ್ಲಿ ಇರುವದು ಅಶಕ್ಯವು. ಸಾಕ್ಷಾತ್ ವೈಕುಂಠನಾಥ ಶ್ರೀನಿವಾಸನು ವರಾಹಮೂರ್ತಿಯ ಹತ್ತರ ಕೇವಲ ನೂರು ಅಡಿ ಭೂಮಿಯನ್ನು ದಾನವಾಗಿ ಬೇಡುವದು ಆತನ ಎಂಥ ಹೀನದೆಸೆಯನ್ನು ವ್ಯಕ್ತಪಡಿಸುವದು ? ಇದರಿಂದ ಐಶ್ವರ್ಯಮದದಿಂದ ಮೆರೆಯುವ ಮಾನವನ ಪಾಡೇನು ? ಅದೇನೇ ಇರಲಿ.

ಸದ್ಯ ವರಾಹ ಮೂರ್ತಿಯಲ್ಲಿ ಶ್ರೀನಿವಾಸನು ನೂರುಅಡಿ ಭೂಮಿಯನ್ನು ಬೇಡಲು ಆತನಿಗೆ ವರಾಹಮೂರ್ತಿಯು—'ಶ್ರೀನಿವಾಸ! ನೀನು ಕೇಳಿದಂತೆ ಭೂಮಿಯನ್ನು ಕೊಡಲು ಏನೊಂದು ಆತಂಕವಿಲ್ಲ. ಆದರೆ ನಿನ್ನ ಇಚ್ಛೆಯಂತೆ ಆ ಭೂಮಿಯು ದಾನವಾಗಿ ಇಲ್ಲವೆ ಬೆಲೆಯಿಲ್ಲದೆ ನಿನಗೆ ದೊರೆಯಲಾರದು. ನೀನು ಕೊಂಡ ನೆಲಕ್ಕಾಗಿ ಅಗ್ರೋಗ್ರಹಣವನ್ನು ಸಲ್ಲಿಸಲೇ ಬೇಕಾಗುವದು ಎಂದು ಸ್ಪಷ್ಟವಾಗಿ ಹೇಳಿಬಿಟ್ಟನು. ವರಾಹಮೂರ್ತಿಯ ಉತ್ತರದಿಂದ ಶ್ರೀನಿವಾಸನು ತನ್ನ ದರಿದ್ರತನವನ್ನೇ ಮಾತ್ರ ಹೀಯಾಳಿಸಿಕೊಂಡನು ಹೊರತು ವರಾಹಮೂರ್ತಿಯ—ನಿರ್ದಾಕ್ಷಿಣ್ಯ ವೃತ್ತಿಗೆ ಹೆಸರಿಡಲಿಲ್ಲ ಆತನು 'ನನಗಂತೂ ನೂರುಅಡಿ ಭೂಮಿಯ ಆವಶ್ಯಕತೆಯುಂಟು. ನಾನು ಈಗ ಹೀಲಾದ ದರಿದ್ರನಾಗಿರುವೆ ಕನಕ—ಕಾಂತೆಯರಿಂದ ದೂರಾಗಿರುವೆನು. ಆದರೆ ನೀನು ಕೊಟ್ಟ ಭೂಮಿಯ ಬೆಲೆಗಾಗಿ ನನ್ನ ವಿಚಾರವೊಂದನ್ನು ನಿನ್ನ ಮುಂದಿಡುವೆ. ಅದು ನಿನಗೆ ಒಪ್ಪಿತವಾಗುವದು ಎಂದು ನನ್ನ ನಂಬುಗೆಯಿದೆ' ಎನ್ನಲು ವರಾಹ ಮೂರ್ತಿಯು 'ಅದಾವುದು ?' ಎಂದು ಕೇಳಿದನು. ಅದಕ್ಕೆ ಶ್ರೀನಿವಾಸನು 'ಕರುಣಾಸಿಧಿಯಾದ ವರಾಹಮೂರ್ತಿಯೆ! ಈ ವೇಂಕಟಾ ಚಲಕ್ಕೆ ನನ್ನ ಪರಮ ಭಕ್ತರುಬಂದು ನನ್ನ ದರ್ಶನವನ್ನು ತೆಗೆದುಕೊಳ್ಳುವ ಮುಂಚೇ ಅವರು ನಿನ್ನ ದರ್ಶನವನ್ನು ತಕ್ಕೊಳ್ಳಲಿ ನಿನಗೆ ಕ್ಷೀರಾಭಿಷೇಕವನ್ನೂ ನೈವೇದ್ಯವನ್ನೂ ಸಮರ್ಪಿಸಿ ಆ ಬಳಿಕ ಆ ಉಪಚಾರಗಳನ್ನು ನನಗೆ ಮಾಡಲಿ ನೀನು ನನಗೆ ದಯಪಾಲಿಸುವ ಭೂಮಿಯ ಅಮೂಲ್ಯವಾದ ಬೆಲೆಯು ಇದೇ ಎಂದು ಭಾವಿಸು ಇದನ್ನು ನೀನು ಒಪ್ಪಿಕೊಳ್ಳು ಮತ್ತು ನನ್ನ ಇಚ್ಛೆಯಂತೆನನಗೆ ನೂರುಅಡಿ ಭೂಮಿಯನ್ನು ನೀಡು. ದಯಮಾಡು ಎಂದು ಹೇಳಲು ವರಾಹ ಮೂರ್ತಿಯು ಶ್ರೀನಿವಾಸನ ಭಕ್ತವರ್ಗದರಿಂದ ಪೂಜಾಪೇಕ್ಷೆಯುಳ್ಳವನಾಗಿ ಆತನ ಮಾತುಗಳಿಗೊಪ್ಪಿದನು. ನೂರುಅಡಿ ಭೂಮಿಯನ್ನು ಆತನಿಗೆ ನೀಡಿದನು.

ಈ ಪ್ರಕಾರ ಭೂಲೋಕದಲ್ಲಿ ಮಾನವರಂತೆ ಲೋಕವ್ಯವಹಾರಗಳಲ್ಲಿ ಶ್ರೀನಿವಾಸನು ಮನಸ್ಸುತೊಡಗಿಸಿದನು. ಅಜ್ಞರಿಗೆ ಮೋಹವನ್ನುಂಟುಪಡಿ ಸುವದಕ್ಕಾಗಿಯೂ ತನ್ನ ಭಕ್ತರ ಮನೋಭೀಷ್ಟತೆಗಳನ್ನು ಪೂರ್ಣಗೊಳಿ ಸುವದಕ್ಕಾಗಿಯೂ ಶ್ರೀನಿವಾಸ–ವರಾಹಮೂರ್ತಿಗಳು ಒಂದೇರೂಪಿನ ಲಿಲಾ ವತಾರಿಗಳಾಗಿ ಶೇಷಾಚಲವಾಸಿಗಳಾದರು.

# ಬಯಕೆಯು ಬಕುಲಾವತಿ

ಶ್ರೀನಿವಾಸ ಹಾಗು ವರಾಹಮೂರ್ತಿಯರಲ್ಲಿ ಸ್ನೇಹವು ಭೂವ್ಯವಹಾರವಾದಂದಿನಿಂದ ಹೆಚ್ಚು ಹೆಚ್ಚು ಬೆಳೆಯಹತ್ತಿತು ಪರಸ್ಪರಹಿತವನ್ನು ಅವರು ಚಿಂತಿಸಹತ್ತಿದರು. ಹುತ್ತಿನ ಮನೆಯಲ್ಲಿ ಶ್ರೀನಿವಾಸನೊಬ್ಬನೇ ಇರುತ್ತಿದ್ದರಿಂದ ಅವನ ಊಟ-ಉಡಿಗೆಗಳ ಉಪಚಾರಕ್ಕಾಗಿಯೂ ತಲೆಯಗಾಯದ ಶುಶ್ರೂಷೆಗಾಗಿಯೂ ವರಾಹಮೂರ್ತಿಯು ಬಕುಲಾವತಿಯೆಂಬವಳನ್ನು ನಿಯಮಿಸಿದನು ಆಕೆಯು ಪ್ರತಿದಿನವೂ ಮಧುಯುಕ್ತ ಶಾಮಾಕಾನ್ನವನ್ನು ಸಿದ್ಧಪಡಿಸಿ ತಂದು ಆತನಿಗೆ ಉಣ್ಣಲು ನೀಡುವಳು. ತಲೆಗೆ ಔಷಧವನ್ನು ಲೇಪಿಸುವಳು. ವಾದ ಸಂವಾಹನೆಗಳನ್ನು ತಪ್ಪದೆ ಮಾಡುತ್ತಿದ್ದಳು. ಆ ಬಕುಲಾವತಿಯೆಂದರೆ ಶ್ರೀನಿವಾಸನಿಗೆ ಈ ಜನ್ಮದಲ್ಲಿ ಅನ್ಯಳಾಗಿ ತೋರಿದರೂ ಆತನಿಗೆ ಜನ್ಮಾಂತರದ ಸಂಬಂಧಿಕಳಾಗಿದ್ದಳು. ಪೂರ್ವಜನ್ಮದಲ್ಲಿ ಆಕೆಯು ಕೃಷ್ಣನ ತಾಯಿಯಾದ ಯಶೋದೆಯಾಗಿದ್ದಳು. ಆಗ ಆಕೆಯು ಆ ಮಗನ ಕಲ್ಯಾಣೋತ್ಸವವನ್ನು ನೋಡಲು ಬಯಿಸಿ ಆ ಪ್ರಕಾರ ತನ್ನ ಇಚ್ಛೆಯನ್ನು ಪೂರ್ಣಮಾಡಲು ಆತನನ್ನು ಕೇಳಿಕೊಂಡಳು. ಅದಕ್ಕೆ ಕೃಷ್ಣನು 'ತಾಯಿ! ಈ ಜನ್ಮದಲ್ಲಿ ನಿನ್ನ ಬಯಕೆಯು ಈಡೇರಲಾರದು ಮುಂದೆ ನಿನ್ನ ಇನ್ನೊಂದು ಜನ್ಮದಲ್ಲಿ ನನ್ನ ವಿವಾಹ ಮಹೋತ್ಸವದ ಸಡಗರವನ್ನು ತೋರಿಸುವೆನು. ಎಂದು ವಾಗ್ದಾನಮಾಡಿದ್ದನು. ಆ ಪ್ರಕಾರ ಯಶೋದಾಮಾತೆಯು ಮಗನ ಮದುವೆಯ ಆಶೆಯನ್ನೊಂದುಳಿಸಿಕೊಂಡು ಆ ಜನ್ಮವನ್ನು ನೀಗಿದಳು. ಮಗನೂ ತನ್ನ ಕೃಷ್ಣಾವತಾರವನ್ನು ಮುಗಿಯಿಸಿದನು. ಮುಂದೆ ಇಪ್ಪತ್ತೆಂಟನೆಯ ಕಲಿಯುಗವು ಪ್ರಾಪ್ತಿಸಲು ಕೃಷ್ಣನು ಶ್ರೀನಿವಾಸನ ಅವತಾರವನ್ನುತಾಳಿ ವೇಂಕಟಾಚಲವಾಸಿಯಾದನು. ಯಶೋದಾಮಾತೆಯು ವರಾಹಮೂರ್ತಿಯಿಂದ ಶ್ರೀನಿವಾಸನ ಸೇವೆಗಾಗಿ ನಿಯಮಿಸಲ್ಪಟ್ಟ ಬಕುಲಾವತಿಯೆಂದು ಜನ್ಮತಾಳಿದಳು. ಈ ಪ್ರಕಾರ— ಪೂರ್ವಜನ್ಮದ ಸಂಸ್ಕಾರದಿಂದ ಬಕುಲಾವತಿಯು ಶ್ರೀನಿವಾಸನ ಸೇವೆಗಾಗಿ ಬಂದಳು ಆಕೆಯು ಪುತ್ರಮೋಹದಿಂದ ಶ್ರೀನಿವಾಸನ ಸೇವೆಕೈಕೊಂಡಳು. ಪೂರ್ವಜನ್ಮದ ತಾಯಿಯಿಂದ ರಕ್ಷಿಸಲ್ಪಡುವ ಶ್ರೀನಿವಾಸನು ಸಾಮಾನ್ಯ ಮಾನವ

ರಂತೆ ನಟಿಸಹತ್ತಿ ತನ್ನ ಇಚ್ಛೆಯಿಂದ ಕ್ರೀಡಿಸಹತ್ತಿದನು. ಬಕುಲಾವತಿಯು ಯಾವಾಗಲೂ ಆತನ ಹಿತವನ್ನು ಬಯಸುವಳು. ಆತನು ಸಂತುಷ್ಟನಾದ ರೇನೇ ತನ್ನ ಬಯಕೆಯೀಡೇರುವದೆಂದು ಆಕೆಯ ನಂಬುಗೆ. ಆತನ ಮೇಲೆ ತನ್ನ ಭಕ್ತಿಯನ್ನಿರಿಸುವದೇ ತನಗೆ ಮುಕ್ತಿ ಎಂದು ಅವಳ ಭಾವನೆ. ಆ ಶ್ರೀನಿವಾಸನ ಕಲ್ಯಾಣವನ್ನು ತನ್ನ ಕಣ್ಮುಟ್ಟ ಕಾಣುವದೇ ತನ್ನ ಜನ್ಮಸಾರ್ಥಕ್ಯವೆಂದು ಆಕೆಯ ತಿಳುವಳಿಕೆ.

ಹೀಗೆ ಅನಂತ ಆಶೆ—ಬಯಕೆಗಳಿಂದ ಕೂಡಿದ ಬಕುಲಾವತಿಯು ವೇಂಕಟಾಚಲನಿವಾಸಿ ಶ್ರೀನಿವಾಸನ ಸೇವೆ ಭಕ್ತಿಯಲ್ಲಿಯೇ ಕಾಲಕಳೆಯ ಹತ್ತಿದಳು.

---

# ೬ನೆಯ ಅಧ್ಯಾಯ

## ಮೃಗಯಾತುರನಾದ ಶ್ರೀನಿವಾಸನು.

ಸುರಗುರು ಬೃಹಸ್ಪತಿಯು ಹೇಳಿದ ಔಷಧದಿಂದಲೂ ಬಕುಲಾವತಿಯು ಮಾಡುವ ಆರೈಕೆಯಿಂದಲೂ ಶ್ರೀನಿವಾಸನ ತಲೆಯ ಗಾಯ ಮಾಯಹತ್ತಿತು. ಇತ್ತಿತ್ತಲಾಗಿ ಬಕುಲಾವತಿಯು ಮಾಡಿ ನೀಡುವ ಪಥ್ಯಕರವಾದ ಆಹಾರ ಸೇವನೆ ಮಾಡಹತ್ತಿದಂದಿನಿಂದ ಶ್ರೀನಿವಾಸನ ಆ ಗಾಯವೆಲ್ಲ ಸಂಪೂರ್ಣ ನಿವಾರಣೆಯಾಗಿ ಆತನಲ್ಲಿ ಕುಂದಿದ ಸಾಮರ್ಥ್ಯವು ಬರಹತ್ತಿತು. ಈಗ ಅವನಿಗೆ ಕೇವಲ ಪತ್ನೀಸುಖದ ಹೊರತು ಇನ್ನಾವ ಸುಖಕ್ಕೂ ಕೊರತೆಯಿಲ್ಲದಂತಾಯಿತು. ವರಾಹಮೂರ್ತಿಯಿಂದ ಕಾಲೂರಿ ನಿಲ್ಲಲು ನೂರು, ಅಡಿನೆಲವು ದೊರೆತಾಗಿನಿಂದಂತೂ ಸಂಪೂರ್ಣ ಸ್ವಾತಂತ್ರ್ಯ ಸುಖದ ಸವಿಯೇ ತನ್ನದಾಗಿದೆಂದಾತನ ಭಾವನೆ. ಈ ಪ್ರಕಾರ ಆತನಲ್ಲಿ ಉತ್ಸಾಹವು ಇಮ್ಮಡಿಯಾಗಿಯೂ ಶಕ್ತಿಯು ಹೆಚ್ಚಾಗಿಯೂ ಉಂಟಾದವು ಆತನ ಮನಸ್ಥಿತಿಯಲ್ಲಿ ಒಳ್ಳೆಮಾರ್ಪಾಟಾಯಿತು. ಹಲವು ಲೀಲೆಗಳನ್ನು ಬಯಲಿಗಿಡಬೇಕೆನ್ನುವನು. ವನವನಾಂತರದಲ್ಲಿ ಮನಬಂದಂತೆ ಸಂಚರಿಸುವದಕ್ಕೆ ಅಪೇಕ್ಷಿಸುವನು ಮತ್ತು ಗಜದ ಸೊಂಡಿಲನ್ನೆಳೆದು ಚಲ್ಲುವ ಹವಣಿಕೆಯೂ ಕ್ರೂರಸಿಂಹನ ದವಡೆಯನ್ನು ಕಿತ್ತಿ ಅದನ್ನು ಕೊಲ್ಲುವ ಹುರುಪೂ ಆತನಲ್ಲಿ ಬಲವಾಗಹತ್ತಿತು.

ವಸಂತಕಾಲದ ಒಂದಾನೊಂದು ದಿನದಲ್ಲಾತನು ಮೃಗಯಾ ವ್ಯಸನಾತುರನಾದನು ಆ ತನ್ನ ಅಪೇಕ್ಷೆಯನ್ನು ತನ್ನನ್ನು ಪೋಷಿಸುತ್ತಿದ್ದ ಬಕುಲಾವತಿಗೆ ತಿಳಿಸಿದನು. ಆಗ ಆಕೆಯು ಶ್ರೀನಿವಾಸನ ವಿಜಯ ಪ್ರಯಾಣಕ್ಕಾಗಿ ಹಲವು ಬಗೆಯ ಸಿದ್ಧತೆ ನಡಿಸಿದಳು. ಅವನು ಬೇಟೆಗಾಗಿ ತಾನೇರಿಕೊಂಡು ಹೋಗಲು ದೇವಲೋಕದ ಇಂದ್ರನ ಕುದುರೆಯನ್ನು ಮನೋಮಾತ್ರವಾಗಿ ಸ್ಮರಿಸಿದನು. ಆ ಕೂಡಲೆ ತುರಗವು ಪ್ರತ್ಯಕ್ಷವಾಗಿ ಬಂದು ಎದುರು ನಿಂತಿತು. ಬಳಿಕ ಶ್ರೀನಿವಾಸನು ಬೇಟೆಯಾಡಲು ಯೋಗ್ಯವಾದ ಕಿರಾತರೂಪವನ್ನು

ಧರಿಸಿದನು. ತನ್ನ ಚಲ್ವಿಕೆಗೆ ಅವಶ್ಯಕವಾದ ಆಭರಣಗಳಿಂದ ಭೂಷಿತನಾದನು ತನ್ನ ಮನವೊಪ್ಪುವಂತಹ ಶುಭ್ರವಸ್ತ್ರ ಧರಿಸಿದನು. ಗಂಧಾಕ್ಷತೆ–ಮಾಲ್ಯಾದಿಗಳಿಂದೆ ತನ್ನನ್ನು ಅಲಂಕರಿಸಿಕೊಂಡನು. ಕೊರಳಲ್ಲಿ ಬಂಗಾರದ ಕಂಠಿ–ಗೋಪುಗಳನ್ನು ಹಾಕಿಕೊಂಡನು. ಆ ಬಳಿಕ ಕೈಯಲ್ಲಿ ಬೆರಳುಂಗರ, ಕಡೆ–ತೋಡೆಗಳನ್ನೂ ಭುಜಗಳಿಗೆ ಕಿರೀಟಗಳನ್ನೂ ಧರಿಸಿಕೊಂಡು ಮೈಗೆ ಸುಗಂಧಯುಕ್ತ ದ್ರವ್ಯ ಪೂಸಿಕೊಂಡನು ಇದಲ್ಲದೆ ತಲೆಗೂದಲನ್ನು ಸರಿಪಡಿಸಿ ಜರತಾರೀ ಕೆಂಪು ಬಣ್ಣದ ರುಮಾಲನ್ನು ಸುತ್ತಿಕೊಂಡನು. ಕೈಯಲ್ಲಿ ಧನುರ್ಬಾಣಗಳನ್ನು ಹಿಡಿದು ಕಾಲಲ್ಲಿ ಆವುಗೆಗಳನ್ನು ಮೆಟ್ಟಿಕೊಂಡು ತನ್ನ ಶೃಂಗಾರವನ್ನು ಪೂರ್ಣಮಾಡಿಕೊಂಡನು. ಬಳಿಕ ಬಕುಲಾವತಿಯು ಆತನಿಗೆ ಆರತಿಯನ್ನೆತ್ತಿ ಅಕ್ಷತೆಯನ್ನು ಹಾರಿಸಿ 'ಮಗು ಶ್ರೀನಿವಾಸ ! ವಿಜಯಿಯಾಗು' ಎಂದು ಹರಕೆಯಿತ್ತಳು.

ಬಕುಲಾವತಿಯಿಂದ ಆಶೀರ್ವಾದವನ್ನು ಪಡೆದು ಹುತ್ತಿನಿಂದ ಸಜ್ಜಾಗಿ ಹೊರಬಿದ್ದ ಶ್ರೀನಿವಾಸನು ಬಾಗಿಲಿನಲ್ಲಿ ಸಿದ್ಧವಾಗಿ ನಿಂತಿದ್ದ ಕುದುರೆಯನ್ನೇರಿದನು. ಆ ಕುದುರೆಯ ಸೊಬಗನ್ನು ಹೇಳುವದೇನು ? ಸಾಕ್ಷಾತ್ ಇಂದ್ರನ ಕುದುರೆಯೇ ಅದಾದುದರಿಂದ ಅದು ಪಡೆಯದ ಶೃಂಗಾರವೇ ಇರಲಿಲ್ಲ. ಆದರೆ ನೀಲವರ್ಣದ ಶರೀರಕಾಂತಿಯೂ ಬಿಳಿಬಣ್ಣದಿಂದ ಎಸೆವ ನಾಲ್ಕೂ ಚರಣಗಳೂ ಅದರ ಒಳ್ಳೆ ಲಕ್ಷಣವನ್ನು ತೋರಿಸುತ್ತಿದ್ದವು ಅದಕ್ಕಿರುವ ದೇವಮಣಿ, ಕಂಠಾಭರಣ ಇತ್ಯಾದಿ ಎಪ್ಪತ್ತೆರಡೂ ಸುಳಿಗಳಲ್ಲಿ ದೋಷವೇನೊಂದೂ ಇದ್ದಿರಲಿಲ್ಲ. ಆ ಅಶ್ವದ ನಿಡಿದೆತ್ತರಗಳಲ್ಲಿ ಸರಿಯಾದ ಪ್ರಮಾಣದಳತೆಯಿತ್ತು. ತನ್ನ ಮೈಕಟ್ಟಿನಿಂದ ಅದು ಬಲು ನುಣ್ಣಗೆಕಾಣುತ್ತಿತ್ತು. ಈ ಪ್ರಕಾರದ ಸಲ್ಲಕ್ಷಣದ ಕುದುರೆಯನ್ನೇರಿ ಶ್ರೀನಿವಾಸನು ಶೇಷಾಚಲದ ಅರಣ್ಯವನ್ನು ಹೊಕ್ಕು ಮನಬಂದಂತೆ ಅಲ್ಲಿಯ ಕ್ರೂರವನ್ಯಪ್ರಾಣಿಗಳನ್ನು ಸಂಹರಿಸಹತ್ತಿದನು. ಆತನ ಬಾಣದ ಹೊಡೆತದಿಂದ ಬಲವುಳ್ಳ ಹಾಗು ಬಲವಿಲ್ಲದ ಪ್ರಾಣಿಗಳಲ್ಲಿ ಮರಣವೊಂದೇ ಸಮನಾಗಿ ತೋರಿತು. ಇಷ್ಟೆಲ್ಲ ಮೈಬೆವರುವಂತೆ ಬೇಟೆಯಾಡಿಯಾತನು ಇನ್ನೂ ಸ್ವಲ್ಪ ಮುಂದರಿಸು ಹೋಗಲು ಪರ್ವತಪ್ರಾಯವಾದ ಸೊಕ್ಕಾನೆಯೊಂದು ಸೊಡರುತ್ತ ಸಿಟ್ಟಾಗಿ ಅವನ ಮೇಲೇರಿಬಂದಿತು. ಆತನ ಒಂದೇ ಒಂದು ಹೊಡೆತದಿಂದ ಆ ಮದ

ಕರಿಯು ಘೀಳಿಡುತ್ತ ಹಿಂತಿರುಗಿ ಓಡಹತ್ತಿತು. ಶ್ರೀನಿವಾಸನು ಅದರ ಬೆಂಬತ್ತಿ ಬಿಡದೆ ಆ ವನದಲ್ಲಿ ಅದನ್ನು ಬಹುದೂರದವರೆಗೆ ಓಡಿಸಿದನು. ಓಡಿ ಓಡಿ ಬೇಸತ್ತು ಆ ಸ್ಥೂಲಕಾಯದ ಆನೆಯ ಮದವಿಳಿಯಿತು, ಬಲವಳಿಯಿತು ತನ್ನನ್ನು ನಿರ್ಬಲನನ್ನಾಗಿ ಮಾಡಿದ ಈತನು ಸಾಮಾನ್ಯನಲ್ಲ ಅಷ್ಟೇಏಕೆ ಮಾನವನೂ ಅಲ್ಲ, ದಾನವನೂ ಅಲ್ಲ ಇವನು ದೇವಾಧಿದೇವ ಶ್ರೀಹರಿಯೇ ಇರಲಿಕ್ಕೆಬೇಕು ಎಂಬ ವಿಶ್ವಾಸತಾಳಿತು ಇನ್ನು ಇವನಿಗೆ ಮೊರೆ ಹೊಕ್ಕರೇಮಾತ್ರ ಮರಣವನ್ನು ಗೆಲ್ಲುವೆ ಎಂಬ ವಿಚಾರದಿಂದ ಶ್ರೀನಿವಾಸನ ಸನ್ನಿಧಿಗೆ ಬಂದು ತನ್ನ ಸೀಳ್ಟವಾದ ಸೊಂಡಿಲವನ್ನು ಎತ್ತಿ ನಮಸ್ಕಾರ ಮಾಡಿತು. ಹಾಗು 'ನಿನ್ನನ್ನು ಮೊರೆ ಹೊಕ್ಕಿರುವೆನು' ಎಂಬದನ್ನು ಸುಚಿ ಸವಂತೆ ತನ್ನ ದೊಡ್ಡ ದನಿಯಿಂದ ಘೀಳಿಡಹತ್ತಿತು. ದಯಾಸಾಗರ ನಾದ ಶ್ರೀನಿವಾಸನು ಆ ಆನೆಯ ಹತಬಲವನ್ನೂ ಅದರ ಕರುಣಾ ಜನಕ ಸ್ಥಿತಿಯನ್ನೂ ನಿರೀಕ್ಷಿಸಿ ತನ್ನ ಬಿರುದಿಗೊಪ್ಪುವಂತೆ ಅದರಮೇಲೆ ಕೃಪೆಮಾಡಿ ದನು ಹಾಗು 'ನೀನು ಒಳ್ಳೆಗತಿಯನ್ನು ಪಡೆ' ಎಂದು ಹರಿಸಿ ಬಿಟ್ಟು ಬಿಟ್ಟನು. ಕೂಡಲೆ ಆ ಮದಗಜವು ಗರ್ಜನೆಯನ್ನು ಮಾಡುತ್ತ ಓಡಿತು. ಅದೇ ಪರ್ವತದ ಒಂದು ಪ್ರದೇಶದ ವನವೊಂದರಲ್ಲಿ ಆಕಾಶರಾಜನ ಸುತೆಯಾದ ಪದ್ಮಾವತಿಯು ತನ್ನ ಕೆಳದಿಯರೊಂದಿಗೆ ಕುಳಿತ ಮರದ ಹತ್ತಿರಬಂದಿತು. ಶ್ರೀನಿವಾಸನು ತಾನೂ ವನಶೋಭೆಯನ್ನು ನೋಡನೋಡುತ್ತ ತನ್ನ ಕುದುರೆ ಯನ್ನೋಡಿಸುತ್ತ ಆ ಆನೆಯು ಹೋಗುತ್ತಿರುವ ಮಾರ್ಗದಲ್ಲಿಯೇ ಬಂದನು. ಪದ್ಮಾವತಿಯೂ ಆಕೆಯ ಸಖಿಯರೂ ತಮ್ಮೆದುರುಗೆ ಓಡಿಬರುವ ಆನೆಯ ರಭಸಕ್ಕೆ ಅಂಜಿ ಗದಗದನೆ ನಡುಗಹತ್ತಿದರು ಆನೆಯು ಸನಿಹಕ್ಕೆ ಬಂದ ಬಂದಂತೆ ಅವರು ತಮ್ಮ ಕೈಗಳಿಂದ ಗಟ್ಟಿಯಾಗಿ ಕಣ್ಣುಗಳನ್ನು ಮುಚ್ಚಿ ಕೊಂಡರು. ಒಬ್ಬರನ್ನೊಬ್ಬರು ಹೊಂದಿಕೊಂಡರು. ಎಲ್ಲರೂ ಅಲ್ಲಿಯೇ ನೆಲಕ್ಕುರುಳಿದರು. ನಡುನಡುವೆ ಮುಚ್ಚಿದ ಕಣ್ಣುಗಳನ್ನು ಪಿಳುಕಿಸಿ 'ತಮ್ಮ ಕಡೆಗೆ ಬರುತ್ತಿರುವ ಆನೆಯು ಇತ್ತ ಕಡೆಗೇ ಬರುವದೋ ಇಲ್ಲವೆ ಬೇರೆಕಡೆ ಹೋಗುವದೋ' ಎಂಬದನ್ನು ನಿರೀಕ್ಷಿಸುತ್ತಿದ್ದರು. ಕೆಲ ನಿಮಿಷಗಳಲ್ಲಿ ಆನೆಯು ಮಾಯವಾಗಿ ಮರೆಯಾಯಿತು ಆದರೆ ಆನೆ ಬರುತ್ತಿದ್ದ ಆ ಮಾರ್ಗದಲ್ಲಿ ಪುರುಷನೊಬ್ಬನು ಬರುತ್ತಿರುವದನ್ನು ಕಂಡು ಆ ಸಖಿಯ ರಲ್ಲೊಬ್ಬಳು—'ಏಳಿರೇಳಿರೇ ಅದು ಆನೆಯಲ್ಲ! ಸಿಂಹವು! ಕಣ್ತೆರೆಯಿರಿ.

ನಮ್ಮೆದುರಿಗೆ ಬರುತ್ತಿರುವ ಆ ಹಿಂಹವನ್ನು ನೋಡಿರಿ. ನಮ್ಮ ಒಡತಿ ಪದ್ಮಾವತಿಯ ಬಲವಿರಲು ಇಂಥ ಸಿಂಹಕ್ಕೆ ಬೆದರುವದೇಕೆ ? ಏಳಿ! ಸಖಿ ಪದ್ಮಾವತಿ! ಏಳಿರೇಳಿರಿ ಎದ್ದುಬಿಡಿರಿ ಎಂದು ಎಲ್ಲರನ್ನು ಎದ್ದು ಕುಳ್ಳಿರಿಸಿದಳು. ಎಲ್ಲರೂ ನೋಡುತ್ತಿರಲು ಆ ಸಖಿಯಳು ಆಡಿದಂತೆ ಸಿಂಹವು ಕಾಣಲಿಲ್ಲ. ಆಗ ಪದ್ಮಾವತಿಯು ಆ ಸಖಿಯಮೇಲೆ ಹರಿಹಾಯ್ದು—ಸಿಂಹ, ಸಿಂಹ! ಎಂದು ಎಲ್ಲರಿಗೂ ಮೋಸ ಮಾಡುವಿಯಾ ಮೂರ್ಖೆ! ಇದಕ್ಕಾಗಿ ನಿನಗೆ ಬಲವಾದ ಏಟು ಕೊಡಬೇಕಾಗಿದೆ ನಿಲ್ಲು 'ಎಂದು ಆ ಸಖಿಯಮೇಲೇ ಹೋದಳು. ಆಗಲಾಸಖಿಯು 'ಮಹಾಸಖಿ! ನಾನಿದುವರೆಗೆ ಸುಳ್ಳು ಮಾತುಗಳನ್ನಾಡಲಿಲ್ಲ ಈಗಲಾದರೂ ಸಿಂಹಬರಹತ್ತಿದೆ. ಎಂದು ನಾನಾಡಿದ ಮಾತು ಸುಳ್ಳಲ್ಲ' ಅಗೋ ನೋಡಿ! ಆ ಮಾರ್ಗದಿಂದ ನಮ್ಮ ಎದುರಿಗೇ ಆ ಪುರುಷ ಸಿಂಹವು ಬರುತ್ತಿದೆ ಅಲ್ಲವೇ? ಎಂದು ತೋರಿ ಹಾಸ್ಯಮಾಡಿದಳು ಆಗ ಪದ್ಮಾವತಿಯು ಹುಬ್ಬುಗೈ ಹಚ್ಚಿ ತಮ್ಮಕಡೆಗೆ ಬರುತ್ತಿರುವ ಅಶ್ವಾರೋಹಿಯನ್ನು ಕಂಡು ಸಖಿಯ ಜಾಣ್ಮನದ ಮಾತಿಗೆ ಮನಸಿನಲ್ಲಿ ಆಕೆಯನ್ನು ಪ್ರಶಂಸಿಸಿದಳು. ಬಹಿರಂಗವಾಗಿ ಆ ಸಖಿಯರಿಗೆ 'ಅಶ್ವಾರೋಹಿಯಾದ ಆತನೇ? ಇರಲಿಬಿಡು ಅವನೊಬ್ಬ ಅರಣ್ಯದಲ್ಲಿ ಬೇಟೆಗಾಗಿ ಚರಿಸುತ್ತಿರುವ ಕಿರಾತನಂತೆ ತೋರುವನು ಅವನಿಂದ ನಾವು ಭಯಪಡುವ ಕಾರಣವಿಲ್ಲ' ಎಂಬದಾಗಿ ನುಡಿದಳು. ಹೀಗೆ ತನ್ನ ಗೆಳತಿಯರೊಂದಿಗೆ ನುಡಿಯುತ್ತ ಹೊರಡುತ್ತಿರುವಷ್ಟರಲ್ಲಿಯೇ ಕುದುರೆಯನ್ನೇರಿದ ಆತನು ಅರ್ಥಾತ್ ಕಿರಾತರೂಪಿಯಾದ ಶ್ರೀನಿವಾಸನು ಅವರಿದ್ದಲ್ಲಿಗೇ ಬಂದನು. ಒಂದೆಡೆಗೆ ಒಟ್ಟಾಗಿದ್ದ ಆ ಕನ್ಯೆಯರ ಗುಂಪನ್ನು ಕಂಡನು. ತಾರೆಯರಂತಿದ್ದ ಆ ಕನ್ಯೆಯರ ಮಧ್ಯದಲ್ಲಿ ರೋಹಿಣೀ ನಕ್ಷತ್ರದಂತೆ ಪ್ರಕಾಶಮಾನಳಾದ ಪದ್ಮಾವತಿಯನ್ನು ನೋಡಿದನು. ಅಲ್ಲಿಯೇ ಕೆಲನಿಮಿಷ ಕುದುರೆನಿಲ್ಲಿಸಿದ, ನೋಡುವ ಮಬ್ಬಿನಲ್ಲಿಯೇ ಕುದುರೆಯನ್ನು ಬೆದರಿಸಿ ಮುಂದೆ ಸಾಗುವದನ್ನು ಮರೆತ.

ಇನ್ನು ಶ್ರೀನಿವಾಸನ ಬೇಟೆಯಮಾರ್ಗದಲ್ಲಿ ಅವನ ಕಣ್ಣಿಗೆ ತೋರಿದ ಪದ್ಮಾವತಿಯೆಂದರಾರು? ಯಾವರಾಜನ ಮಗಳು? ಇದೆಲ್ಲ ವಿಚಾರವನ್ನು ನಾವಿಲ್ಲಿ ತಿಳಿಯೋಣ. ಹಿಂದಕ್ಕೆ ತನ್ನ ತಲೆಗೆ ಗಾಯವಾದಾಗ ಶ್ರೀನಿವಾಸನು ಶಾಪಿತ ಚೋಳರಾಜನಿಗೆ ಕೊಟ್ಟ ಅಶ್ವಾಸನ ನುಡಿಗಳನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ಆಗ ಆತನು ಚೋಳರಾಜನಿಗೆ ಮುಂದೆ ಕಲಿಯುಗ

ದಲ್ಲಿ ಆಕಾಶರಾಜನು ಜನಿಸುವನು ಇತ್ಯಾದಿಯಾಗಿ ಕೊಟ್ಟ ಭವಿಷ್ಯ ಸೂಚನೆಯೇ ಅದಾಗಿರುವದು. ಭಾರತೀಯ ಯುದ್ಧ ಸಮಾಪ್ತಿಯನಂತರ ಕೆಲವಾರು ವರ್ಷಗಳ ತರುವಾಯ ಚಂದ್ರವಂಶದಲ್ಲಿ ಸುವೀರನೆಂಬ ಪ್ರಖ್ಯಾತ ರಾಜನಾಗಿ ಹೋದನು ಆತನ ತರುವಾಯ ಅವನ ಮಗ ಸುಧರ್ಮನು ರಾಜ್ಯವಾಳಿದನು. ಸುಧರ್ಮನಿಂದ ಜನಿಸಿದ ಇಬ್ಬರು ಮಕ್ಕಳಲ್ಲಿ ಹಿರಿಯನೇ ಆಕಾಶರಾಜನು. ಕಿರಿಯನು ತೋಂಡಮಾನನೆಂಬವನು.

ತಂದೆತರುವಾಯ ಆಕಾಶರಾಜನು ತೋಂಡದೇಶಕ್ಕೊಡೆಯನಾಗಿ ಧರ್ಮದಿಂದ ಪ್ರಜಾಪಾಲನೆಯನ್ನು ನಾಗಿಸಿದನು. ಅವನ ರಾಜ್ಯದಲ್ಲಿ ಸತತವು ಸುಭಕ್ಷ್ಯೆಯೇ ನೆಲೆಸಿತ್ತು ವರ್ಣಾಶ್ರಮಧರ್ಮಿಗಳೆಲ್ಲ ತಮ್ಮ ತಮ್ಮ ವಿಧಿ ನೇಮುಗಳನ್ನು ಬಿಡದೆ ಆಚರಿಸುತ್ತಿದ್ದರು. ರಾಜ್ಯವೆಲ್ಲ ಗೋ-ಧನ-ಕನಕ-ಧಾನ್ಯಾದಿ ಸಂಪದುಗಳಿಂದ ಪರಿಪೂರ್ಣವಾಗಿದ್ದಿತು ನಾರೀವರ್ಗವೆಲ್ಲ ಲಜ್ಜಾ–ವಿನಯ–ಮರ್ಯಾದೆಗಳ ಮೂರ್ತಸ್ವರೂಪವಾಗಿದ್ದಿತು. ಪುರುಷರು ಪರಮಧಾರ್ಮಿಕರೂ ಏಕಪತ್ನೀವ್ರತಸ್ಥರೂ ತಾವಾಗಿದ್ದರು ಎಲ್ಲರೂ ನಿರುದ್ಯೋಗದಿಂದ ವಿಮುಖರಾಗಿದ್ದರು ಅಕಾಲಿಕ ಮರಣವೂ ಕೊಲೆ–ಸುಲಿಗೆ, ಮರೆಮೋಸ, ತಗಲು–ತಪ್ಪಡಿಗಳೂ ಇವುಯಾವವನ್ನೂ ಜನರು ಆ ರಾಜನ ಆಳಿಕೆಯಲ್ಲಿ ಕಾಣದಾಗಿದ್ದರು. ಒಟ್ಟಿನ ಮೇಲೆ ಆಕಾಶರಾಜನ ರಾಜ್ಯವೆಂದರೆ ಅದೊಂದು ಮಹತ್ತಮವಾದ ಸುಖದ ಸಾಮ್ರಾಜ್ಯವೇ ಆಗಿತ್ತು. ಭೂಲೋಕದಲ್ಲಿ ಸ್ವರ್ಗದ ಒಂದು ಭಾಗವು ಇದೆ ಎಂದು ಯಾರಾದರೂ ಹೇಳಿದ್ದಾದರೆ ಈ ಆಕಾಶರಾಜನಾಳುವ ನಾಡೇ ಅದೆಂದು ನಿಸ್ಸಂದೇಹವಾಗಿ ತೋರಿಸಬಹುದಾಗಿತ್ತು.

ಜಗತ್ತಿನಲ್ಲಿ ಯಾವ ಸಂಗತಿಗಳಲ್ಲಿಯೂ ಪೂರ್ಣತೆಯನ್ನು ಪಡೆದ ವಸ್ತುವನ್ನು ಕಾಣುವದು ಅಶಕ್ಯವೇ ಕೇವಲ ದೇವನೊಬ್ಬನೇ ಪೂರ್ಣ ಪರಾತ್ಪರನು. ಅವನ ಹೊರತು ಯಾವನೂ ಆ ಅಧಿಕಾರಕ್ಕೆ ; ಮುಟ್ಟನು. ಅಂತೆಯೇ ಮೇಲೆ ವರ್ಣಿಸಿನ ಆಕಾಶರಾಜನೂ ಅವನ ರಾಜ್ಯವೂ ಎಲ್ಲ ಸಂಗತಿ ವಿಷಯಗಳಿಂದ ಸಮೃದ್ಧತೆ ಪಡೆದಿದ್ದರೂ 'ಪರಲೋಕ ಸಾಧನೆಗಾಗಿ ಅವಶ್ಯಕವಾದ ಸಂತತಿಯು ಮಾತ್ರ ಅವನಿಗಿರಲಿಲ್ಲ. ವಯಸ್ಸು ಹಿಂಚಲಿಸ ಹತ್ತಿತು. ಶರೀರದ ಬಲವೂಚೆಲುವೂ ಕ್ರಮಕ್ರಮವಾಗಿ ಕುಂದಹತ್ತಿದವು. ಆತ

ನಿಗೂ ಆತನ ಪತ್ನಿಗೂ ಪುತ್ರೇಷ್ಟಿಯ ಹುಚ್ಚೇ ಹಿಡಿಯಿತೆನ್ನುವದು ಮಾತ್ರ ತಪ್ಪಾಗುವದು. ಏಕೆಂದರೆ ಆ ಬಯಕೆಯು ಪ್ರಾಣಿವರ್ಗಕ್ಕೆಲ್ಲವೂ ಸಾಮಾನ್ಯವಾದುದು 'ಮಕ್ಕಳಿಲ್ಲದ ಮಾನವಗೆ ಮೋಕ್ಷಲಭಿಸದು' ಎಂದು ಆ ಶಾಸ್ತ್ರಗಳು ಕೇವಲ ಒಬ್ಬನಿಗಾಗಿಯೇ ಉಸುರಲಿಲ್ಲ. ಈ ಎಲ್ಲ ವಿಚಾರಗಳಿಂದ ಆಕಾಶರಾಜನು ಮಕ್ಕಳಿಗಾಗಿ ಹಾರೈಸುವದು ಸಹಜವಾಗಿತ್ತು. ದಂಪತಿಗಳೀರ್ವರು ಹಲವು ವಿಧವಾದ ವ್ರತೋಪವಾಸನೆ, ಪೂಜೆ ಪುನಸ್ಕಾರ, ದಾನ-ಧರ್ಮ, ತೀರ್ಥಯಾತ್ರೆ ಇವಾವುಗಳಲ್ಲಿ ಒಂದನ್ನೂ ಹಿಂದುಳಿಸಲಿಲ್ಲ ಎಲ್ಲವನ್ನೂ ಕೈಕೊಂಡು ಮುಗಿಸಿದುದಾಯಿತು. ಅವರು ತಮ್ಮ ಕುಲಗುರುವನ್ನು ಕರೆಯಿಸಿಕೊಂಡು ಆತನನ್ನು ಸತ್ಕರಿಸಿ "ಗುರುಗಳೇ 'ದೇವ-ಗುರು-ಪಿತೃಗಳ ಋಣಗಳಿಂದ ನಮ್ಮನ್ನು ಉದ್ಧರಿಸುವ ಪುತ್ರನು ಇದುವರೆಗೆ ನಮಗೆ ಪ್ರಾಪ್ತಿನಲಿಲ್ಲವಲ್ಲ" ಎಂದು ಹಲಬಗೆಯಿಂದ ಹಲುಬಿದರು ತಮ್ಮ ದುರ್ದೈವವನ್ನೇ ಹಳಿಯುತ್ತ 'ನಾವು ಹಿಂದಿನ ಜನ್ಮದಲ್ಲಿ ಅದೆಂಥ ಘೋರ ಪಾಪಕರ್ಮವನ್ನು ಮಾಡಿರುವೆವು? ಎಂದು ಮೊರೆಯಿಟ್ಟರು. ಹಾಯ್! ಹಾಯ್! ಮಗನನ್ನೆತ್ತಿ ಆಡಿಸಿ ಸೊಬಗನ್ನು ನಾವು ಕಾಣಲಿಲ್ಲವಲ್ಲ? ಪುತ್ರೋತ್ಸವವೂ ಆ ಪುತ್ರನಿಗೆ ಮಾಡತಕ್ಕ ಚೌಲಾದಿ ಸಂಸ್ಕಾರಗಳೂ ಆತನಿಗೆ ಗೈಯ್ಯುವ ಯೌವರಾಜ್ಯಾಭಿಷೇಕವೂ ಇವೆಲ್ಲವುಗಳನ್ನು ಕೇವಲ ಹಸರಿನಿಂದ ಮಾತ್ರ ನಾವು ಕೇಳಿವ್ಯಥೆಪಡಬೇಕಾಯಿತೇ ಹೊರತು ಅವುಗಳನ್ನು ನೆರವೇರಿಸಿ ಸುಖವನ್ನು ಕಾಣುವ ಸೌಭಾಗ್ಯವು ಇದುವರೆಗೆ ನಮಗೆ ದೊರೆಯಲಿಲ್ಲ. ಇದೆಲ್ಲಕ್ಕೂ ನಮ್ಮ ದುರ್ವಿಧಿಯೇ ಕಾರಣವು. ಮಕ್ಕಳಿಲ್ಲದ ನಾವು ಯಮಪಾಶದ ಬಂಧನಕ್ಕೊಳಗಾಗಬೇಕಾಯಿತು ಜಗತ್ತಿನ ಜನರಿಂದ 'ಇವರು ಬಂಜೆಗಳು' 'ನಿಪುತ್ರಿಕರು' ಇತ್ಯಾದಿ ದೂಷಣೆಯುಳ್ಳ ವಾಕ್ಯಗಳನ್ನು ಆಡಿಸಿಕೊಂಡು ನಾವು ಸಹಿಸಬೇಕಾಯಿತು. ಇವೆಲ್ಲಕ್ಕೂ ಆ ದುರ್ವಿಧಿಯೇ ಕಾರಣವಾಗಿರುವದು ಆಯ್ತು ನಿರುಪಾಯವಾಯ್ತು ನನ್ನಿಂದಲೇ ನಮ್ಮ ಚಂದ್ರವಂಶದ ಬೆಳೆಯುವ ಮೊಳಕೆಯು ಕರಿಬಿದ್ದಂತಾಯಿತು! ದೇವಾ! ನಾವು ಪಾಪಿಷ್ಟರೆಂದು ನಮ್ಮನ್ನು ಈ ಸ್ಥಿತಿಗೆ ಗುರಿಗೈದೆಯಾ! ನಮಗೆ ಪುತ್ರಸಂತತಿಯನ್ನೀಯದೆ ಹೋದರೂ ಧರ್ಮ ಸಂತಾನಾರ್ಥವಾಗಿ ಒಬ್ಬ ಹೆಣ್ಣುಮಗಳನ್ನು ನಮ್ಮುದರಲ್ಲಿ ಜನಿಸುವಂತೆ ದಯೆಮಾಡಬಾರದೇ! ಇನ್ನೇನು

ಮಾಡುವದು ? ನಾವು ಹಂಬಲಿಸುವದೆಲ್ಲ ವ್ಯರ್ಥವೇ ಅಹುದು ! ಎಂದು ಗುರುವಿನ ಸನ್ನಿಧಿಯಲ್ಲಿ ಕರಳು ಕರಗುವಂತೆ ಆ ರಾಜದಂಪತಿಗಳು ಉದ್ಗಾರ ತೆಗೆದರು. ಮತ್ತು ಅವರು ತಮ್ಮ ಗುರುವನ್ನು ಕುರಿತು–'ಮಹಾಪ್ರಾಜ್ಞರೇ ! ಇನ್ನು ಮುಂದೆಯೂ ಕೂಡ ನಮಗೆ ಪುತ್ರ ಪ್ರಾಪ್ತಿಯಮಾರ್ಗವನ್ನು ತೋರುವ ಕೃಪೆಯಾಗಬೇಕು' ಎಂದು ಕೇಳಿಕೊಂಡರು

ಹಲವು ಬಗೆಯಿಂದ ಮಕ್ಕಳ ಆಶೆಯಿಂದ ತಾಪಬಡುವ ಅವರನ್ನು ಕುರಿತು ಗುರುವು ಸಾಂತ್ವನಪರವಾದ ನುಡಿಗಳಿಂದ— "ರಾಜ ! ಸಂತಾನಾರ್ಥವಾಗಿ ಅಜ್ಞ ಜೀವಿಗಳಂತೆ ನೀನು ದುಃಖಮಾಡುವದು ಯುಕ್ತವೇ ? ಶಾಸ್ತ್ರಸಮ್ಮತವಾದ ಪುತ್ರಕಾಮೇಷ್ಟೀ ಎಂಬ ಯಾಗವನ್ನು ಕೈಕೊಂಡು ನಿನ್ನ ಇಚ್ಛೆಯನ್ನು ಪೂರ್ಣಮಾಡಿಕೊಳ್ಳು. ಆ ಯಾಗಕ್ಕಾಗಿ ನೀನು ಒಂದು ಯೋಗ್ಯ ಸ್ಥಾನವನ್ನು ಆರಿಸಿಕೊಂಡು ಬಂಗಾರದ ನೇಗಿಲುಗಳಿಂದ ಆ ಭೂಮಿಯನ್ನು ಶೋಧಿಸು. ಬ್ರಾಹ್ಮಣರ ವೇದಘೋಷದೊಡನೆ ಯಜ್ಞವನ್ನು ಸಮಾಪ್ತಿಗೊಳಿಸು. ಅದರಿಂದ ನಿನ್ನ ಇಷ್ಟಾರ್ಥ ಸಿದ್ಧಿಸುವದು." ಎಂದು ಹೇಳಿ ಗುರುವು ತನ್ನ ಸ್ಥಾನಕ್ಕೆ ಹಿಂತೆರಳಿದನು.

ಕುಲಗುರುವಿನ ಹೇಳಿಕೆಯಂತೆ ರಾಜನು ಯಾಗಕ್ಕಾಗಿ ಭೂಮಿಯೊಂದನ್ನು ಗೊತ್ತುಪಡಿಸಿಕೊಂಡು ಸುವರ್ಣಮಯ ನೇಗಿಲಿನಿಂದ ಅದನ್ನು ಹರಗಿಸಹತ್ತಿದನು. ಆಗ ಆ ಭೂಮಿಯಲ್ಲಿ ಸಹಸ್ರದಳವುಳ್ಳ ಒಂದು ಅರಳಿದ ಕಮಲ ಪುಷ್ಪವನ್ನು ಕಂಡು— "ಅಹಹ ! ಇದೆಂಥ ಕಮಲವು ? ನಾನಿದುವರೆಗೂ ಇಂಥ ಪುಷ್ಪವನ್ನು ಕಂಡಿರಲೇ ಇಲ್ಲ ! ಎಂದು ಒಳ್ಳೆ ತವಕದಿಂದ ಅದರ ಸನಿಹಕ್ಕೆ ಹೋಗಿ ಅದನ್ನು ನಿರೀಕ್ಷಿಸಿದನು. ಅದರಲ್ಲಿ ಸಾಕ್ಷಾತ್ ಶ್ರೀಲಕ್ಷ್ಮಿಯ ಸ್ವರೂಪಾಕೃತಿಯುಳ್ಳ ಒಂದು ಕೂಸನ್ನು ಕಂಡನು. ಅದರ ಮಂಗಲಕರವಾದ ಮುಖವೂ ಪದ್ಮಪತ್ರದಂತೆ ಶೋಭಿಸುವ ನಯನಗಳೂ ರಾಜನನ್ನು ಕೆಲನಿಮಿಷ ಭ್ರಾಂತಗೊಳಿಸದಿರಲಿಲ್ಲ. ಬಳಿಕ ಆತನು ಅತ್ಯಂತ ಹರುಷದಿಂದ ಶ್ರೀಹರಿಯ ದಯಾಲುತ್ವವನ್ನು ಸ್ಮರಿಸಿದನು. ಆ ಶಿಶುವನ್ನೆತ್ತಿ ತನ್ನೆದೆಗವಚಿಕೊಂಡು— "ಅಹಹ ! ಶ್ರೀಹರಿಯ ಮಾಯೆಯು ಅಗಾಧವಾದುದು ! 'ಮಕ್ಕಳು, ಮಕ್ಕಳು' ಕಕ್ಕಸಪಡುವ ನನಗೆ ಈ ಅಕ್ಕರೆಯ ಶಿಶುವನ್ನು

ಆತನು ನನಗೆ ದಯಪಾಲಿಸಿದನು! ಈ ಕೂಸನ್ನು ಆ ದೇವನು ನನಗಾಗಿಯೇ ಉದ್ಭವಿಸಿರಬಹುದೇ, ಅಥವಾ ಅನ್ಯರಿಗಾಗಿಯೋ? ಎಂದು ಕಿಂಚಿತ್ ಸಂಶಯುಕ್ತನಾದನು. ರಾಜನಿಗೆ ಉಂಟಾದ ಸಂದೇಹದ ತೊಡಕು ಆ ಸಮಯದಲ್ಲಿ— "ಆಕಾಶರಾಜ! ಈ ಅಯೋನಿಜ ಕನ್ನಿಕೆಯುನಿನಗಾಗಿಯೇ ನಿರ್ಮಿತವಾದುದು. ಇದರಿಂದಲೇ ನಿನ್ನ ಕೀರ್ತಿಯೂ ಪುಣ್ಯವೂ ಹೆಚ್ಚುವದು. ಆದುದರಿಂದ ಈ ಶಿಶುವು ನಿನ್ನಿಂದಲೇ ಸಂರಕ್ಷಿತವಾಗುವದು ಉಚಿತವು." ಎಂಬದಾಗಿ ಉಂಟಾದ ಆಕಾಶವಾಣಿಯಿಂದ ಬಿಚ್ಚಿ ಹೋಯಿತು.

ಆ ದೇವವಾಣಿಯನ್ನು ಕೇಳಿದ ಆಕಾಶರಾಜನು ನಿಸ್ಸಂದಿಗ್ಧನಾಗಿ ಆ ಕೂಸನ್ನೆತ್ತಿಕೊಂಡು ತೀವ್ರವೇ ತನ್ನ ರಾಜಮಂದಿರದೊಳಹೊಕ್ಕನು. ತನ್ನ ಪ್ರಿಯ ಪತ್ನಿಯನ್ನು ಕರೆದು ಆಕೆಯ ಮಡಿಲಲ್ಲಿ ಅದನ್ನು ನೀಡಿದನು. 'ದೇವಿ! ಹಡೆಯದ ಮಕ್ಕಳೂ ಪಡೆಯದ ಭಾಗ್ಯವೂ' ನಮ್ಮೊರತು ಇನ್ನಾರಿಗೂ ಲಭಿಸಲಿಲ್ಲ. ಸಾಕ್ಷಾತ್ ಶ್ರೀನಿವಾಸನು ಮಕ್ಕಳಿಲ್ಲೆಂದು ಕೊರಗುತ್ತಿರುವ ನಮಗೆ ತನ್ನ ಕಾಂತಿಯಿಂದ ಕಣ್ಣು ಕುಕ್ಕಿಸುವ ಈ ಚಿಕ್ಕ ಕಂದಮ್ಮನನ್ನು ದಯಪಾಲಿಸಿರುವನು! ಇದನ್ನು ನೀನು ನಿನ್ನ ಔರಸ ಸಂತತಿಗಿಂತಲೂ ಮಿಗಿಲಾದ ಮಮತೆಯುಳ್ಳದೆಂದು ಭಾವಿಸಿ ಸಂಗೋಪನ ಮಾಡು, ಯಾವ ಬಗೆಯಿಂದಲೂ ಏನೊಂದರಿಂದಲೂ ಅದಕ್ಕೆ ಕೊರತೆಯುಂಟಾಗದಂತೆ ಸಂರಕ್ಷಿಸು." ಎಂದು ಹೇಳಿ ಆಗಲೇ ಮಗುವಿನ ಜನನೋತ್ಸವಕ್ಕೆ ಮಿಗಿಲಾದ ಸಂಭ್ರಮೋತ್ಸವವನ್ನು ಸಡಗರದಿಂದ ನೆರವೇರಿಸಿದನು. ದಾನ- ಧರ್ಮಗಳನ್ನು ಮಾಡಿದನು

ರಾಜಪತ್ನಿ ಧರಣೀದೇವಿಯು— 'ಅನಾಯಾಸದಿಂದ ತನಗೆ ಕೂಸು ದೊರೆಯಿತು. ತನ್ನ ಬರಿದಾದ ಉಡಿಯು ತುಂಬಿತು' ಎಂದು ಹಿರಿಹಿರಿ ಹಿಗ್ಗಿದಳು. ಅವಳು ರಾಜಮಂದಿರದ ನಾರಿಯರಿಗೆಲ್ಲ— "ಇಂದಿಗೆ ನನ್ನ ಬಂಜೆತನವು ಹಿಂಗಿತು. ಸಾಕ್ಷಾತ್ ಶ್ರೀನಿವಾಸನೇ ಈ ಶಿಶುವನ್ನು ನಮಗಾಗಿ ನಮ್ಮ ಧರ್ಮವರ್ಧನೆಗಾಗಿ ಹಾಗು ನಮ್ಮ ವಂಶದ ಉದ್ಧಾರಕ್ಕಾಗಿ ನೀಡಿರುವನು." ಎಂದು ಹರ್ಷಾತಿರೇಕದಿಂದ ನುಡಿದಳು. ಮುಂದೆ ಅವಳು ಆ ಕೂಸನ್ನು ಪರೋಪರಿಯಿಂದ ಸಲಹಹತ್ತಿದಳು. ರಾಜನೂ ಕೂಡ ಮೇಲೆ

ಮೇಲೆ ದರಬಾರಿನಿಂದ ಅರಮಂದಿರಕ್ಕೆ ಬಂದು ಕೂಸಿನ ಸಮಾಚಾರ ತೆಗೆದು ಕೊಳ್ಳುವನು. ಎತ್ತಿ ಮುದ್ದಾಡುವನು. ಆ ಸೊಬಗಿನಲ್ಲಿಯೇ ಒಮ್ಮೊಮ್ಮೆ ರಾಜ್ಯಕಾರಭಾರದ ಕಡೆಗಿರುವ ತನ್ನ ಲಕ್ಷ್ಯವನ್ನು ಮರೆಯುವನು. ಅಹಹ! ಮಕ್ಕಳ ಮೋಹವು ಎಂತಹದು !!

ಶ್ರೀಹರಿಯ ಕೃಪೆಯಿಂದ ರಾಜನಿಗೆ ಕನ್ನಿಕೆಯು ದೊರೆತಳು. ಆ ಸಂಭ್ರಮದಲ್ಲಿಯೇ ಆತನ ಧರ್ಮಪತ್ನಿ ಧರಣೀದೇವಿಯು ಗರ್ಭವತಿಯಾದಳು. ವಂಶ ವಿಚ್ಛೇದದ ಸಂಶಯಮಡುವಿನ ಸುಳಿಯಲ್ಲಿಸಿಕ್ಕ ಆಕಾಶ ರಾಜನಿಗೂ ಅವನ ಸತಿಗೂ ಹಿಡಿಸಲಾರದಷ್ಟು ಸಂತೋಷವಾಯಿತು ಗರ್ಭಿಣೀಸ್ತ್ರೀಯ ಳಿಗೆ ಜರುಗಿಸುವ ಸಂಸ್ಕಾರ ವಿಧಿಗಳೆಲ್ಲ ಶಾಸ್ತ್ರೋಕ್ತದಂತೆ ನಡೆಯಿಸಲ್ಪಟ್ಟವು. ಆಕೆಗೆ ಉಂಟಾಗುತ್ತಿರುವ ಬಯಕೆಗಳನ್ನೆಲ್ಲ ಸಂಪೂರ್ಣಸಲ್ಲಿಸಲಾಯಿತು ಗರ್ಭಿಣಿಗೆ ಐದನೆಯತಿಂಗಳು ಪ್ರಾಪ್ತವಾಗಲು ಸೀಮಂತಕಾರ್ಯವನ್ನು ಸಡ ಗರದಿಂದ ಮಾಡಿದರು ಆಪ್ತೇಷ್ಟವರ್ಗದವರಿಂದ ಆಕೆಗೆ ಹೂಮುಡಿಸುವ, ಉಡಿತುಂಬುವ ಮರ್ಯಾದೆಗಳು ಅರ್ಪಿಸಲ್ಪಟ್ಟವು. ಆಶ್ರಮದ ಋಷಿಪತ್ನಿ ಯರು ಗರ್ಭವತಿ ಧರಣೀದೇವಿಯನ್ನು ತಮ್ಮ ಆಶ್ರಮಗಳಿಗೆ ಕರೆದೊಯ್ದು ರಾಜ್ಞಿಯಳಿಗೆ ತಕ್ಕವಾದ ಮನ್ನಣೆಯಿಂದಲೂ ಸಡಗರದಿಂದಲೂ ಉಡಿತುಂಬಿ ದರು. ಉದ್ಯಾನೋಪವನಗಳಲ್ಲಿ ಸೊಗಸಿನ ವನಭೋಜನ ಮಾಡಿಸಿದರು. ಶುಭಾ ಕ್ಷತೆಗಳನ್ನು ಹಾರಿಸಿ ಆರತಿ ಮಾಡಿದರು. ಮನಸೋಕ್ತವಾಗಿ ಹರಸಿದರು

ಈ ಪ್ರಕಾರ ಧರಣೀದೇವಿಯು ತನ್ನ ಬಸಿರಿನ ನವಮಾಸಗಳನ್ನು ಸೊಗಸಿನಿಂದ ಕಳೆದು ಹತ್ತನೆಯತಿಂಗಳಿನ ಒಂದು ದಿನದಲ್ಲಿ ರವಿಶಶಿಗಳ ಕಾಂತಿಯನ್ನು ಮೀರುವ ಸ್ವರೂಪವುಳ್ಳ ವರಪುತ್ರನನ್ನು ಹೆತ್ತಳು. ಅಂದು ಸೂರ್ಯನು ಕನ್ಯಾರಾಶಿಯಲ್ಲಿಯೂ ಚಂದ್ರನು ರೋಹಿಣೀತಾರೆಯಲ್ಲಿಯೂ ಇದ್ದರು. ಅಲ್ಲದೆ ಆ ಕೂಸಿನ ಜನ್ಮದಿನವು ಶುಕ್ಲ ಪಕ್ಷದ ದಶಮಿಯ ಗುರುವಾರ ಸಂಜೆಯದಾಗಿತ್ತು.

ರಾಜನು–ತನಗೆ–ಪುತ್ರ ಪ್ರಾಪ್ತಿಯಾದ ಆನಂದವನ್ನು ಉತ್ಸವದಿಂದ ವ್ಯಕ್ತಪಡಿಸಿದನು. ಬ್ರಾಹ್ಮಣಾದಿ ಭಿಕ್ಷುಕರಿಗೆ ಬಹುಬೆಲೆಯುಳ್ಳ ವಸ್ತು ಗಳನ್ನೂ, ಆನೆ–ಕುದುರೆ–ಆಕಳುಗಳನ್ನೂ ನವವಿಧದ ಧಾನ್ಯಗಳನ್ನೂ ದಾನ

ಮಾಡಿದನು ಮಗನ ಜಾತಕರ್ಮೋತ್ಸವವಂತೂ ಸರಿಯೇ. ಆತನು ಅದರೊಡನೆ ತನಗೆ ಯಾಗ ಭೂಮಿಯಲ್ಲಿ ದೊರೆತ ಕನ್ಯೆಯ ನಾಮಕರಣ ವಿಧಿಯನ್ನೂ ನೆರವೇರಿಸಿದನು ಮಗಳಿಗೆ 'ಪದ್ಮಾವತಿ' ಎಂದೂ ಮಗನಿಗೆ 'ವಸುದಾನ' ಎಂದೂ ಹೆಸರಿಡಿಸಿದನು. ಭೂಮ್ಯಾಂತರ್ಗತಸ್ಥಿತಪದ್ಮದಲ್ಲಿಂದ ದೊರೆದ ಕನ್ಯೆಗೆ ಪದ್ಮಾವತಿಯೆಂಬ ಹೆಸರೇ ಅನ್ವರ್ಥಕವಾಯಿತು

ಲಕ್ಷ್ಮೀದೇವಿಯೇ ಸಾಕ್ಷಾತ್ತಾಗಿ ಅವತರಿಸಿದ ಪದ್ಮಾವತಿಯನ್ನೂ ವಸುದಾನನ್ನೂ ರಾಜ-ರಾಣಿಯರು ತಮ್ಮ ಪ್ರಾಣಗಳಿಗಿಂತ ಹೆಚ್ಚಿನವರೆಂದು ಭಾವಿಸಿ ಸಲುಹಹತ್ತಿದರು ಅವರ ಸಂಗೋಪನವನ್ನು ಒಳ್ಳೆ ದಕ್ಷತೆಯಿಂದ ತಾವೇ ವಹಿಸಿದರು ನಲಿದಾಡುವ ಮಕ್ಕಳ ಮುಖನೋಡಿ ಅಕ್ಕರತೆಗೊಳ್ಳುವರು ಅವಕ್ಕೆ ಏನೊಂದು ಅಳುವಾದಲ್ಲಿ ಬಹುಪರಿಯಿಂದ ರಮ್ಮಿಸುವರು. ಮಕ್ಕಳ ತಿನಿಸು-ಉಣಿಸು, ಉಡಿಗೆ-ತೊಡಿಗ, ಆಟ-ನೋಟಗಳಲ್ಲಿಯೇ ಅವರ ದಿನದ ಬಹುಕಾಲವು ಕಳೆಯುತ್ತಿತ್ತು. ಇದರಲ್ಲಿಯೇ ಆಕಾಶರಾಜನು ಒಮ್ಮೊಮ್ಮೆ ತನ್ನ ರಾಜ್ಯಕಾರ್ಯವನ್ನು ಮರೆತು ಬಿಡುತ್ತಿದ್ದನು.

ಆಕಾಶ ರಾಜನು ಕಲಂಕವಿಲ್ಲದೆ ಕಾಂತಿಯಿಂದ ಶೋಭಿಸುವ ತನ್ನ ಮಕ್ಕಳು ಶುಕ್ಲಪಕ್ಷದ ಚಂದ್ರನಂತೆ ವರ್ಧಿಸುವದನ್ನು ನೋಡಿ ಹರುಷಿತನಾದನು. 'ನಾನು ಹಲವು ಜನ್ಮಗಳಲ್ಲಿ ಮಾಡಿದ ಪುಣ್ಯ ಕರ್ಮಗಳ ಫಲವೆಲ್ಲ ಒಟ್ಟುಗೂಡಿ ನನ್ನ ಇಹ-ಪರಗಳ ಸಾಫಲ್ಯಕ್ಕಾಗಿಯೇ ಈ ಎರಡುರೂಪಗಳಿಂದ ಈ ಮಕ್ಕಳು ನನಗೆ ಲಭಿಸಿದರು' ಎಂದು ನುಡಿಯುವನು.

ಹೀಗೆ ಸುಖದಲ್ಲಿದ್ದರಾಜನ ಮಗಳೂ, ಮಗನೂ ಶೈಶವವನ್ನು ನೀಗಿ ಬಂದ ಬಾಲ್ಯತ್ವವನ್ನು ಹಿಂದೊಗೆದರು. ಪದ್ಮಾವತಿಯಂತೂ ಯೌವನಾವಸ್ಥೆಯ ಹೊಸ್ತಿಲವನ್ನು ಮೆಟ್ಟಿಯೇ ನಿಂತಳು. ಮಗಳುಮದುವೆಗೆ ತಕ್ಕ ವಯಸ್ಸಿನವಳಾದಳೆಂದು ರಾಜ-ರಾಣಿಯರಿಗೆ ಸಂತೋಷ. ಅದರೊಡನೆ ಆಕೆಗೆ ತಕ್ಕ ಪತಿಯನ್ನು ದೊರಕಿಸುವ ಒಂದು ಚಿಂತೆ; ರಾಜನು ವರಶೋಧನೆಯ ವಿಚಾರದಲ್ಲಿ ಮಗ್ನನಾದನು ಮಗವಸುದಾನನಿಗೂ ಕಾಲಕ್ಕೆ ಅನುಸರಿಸಿ ವ್ರತಬಂಧ ಮುಂತಾದಸಂಸ್ಕಾರ ಮಾಡಿದರು. ಗುರುಗಳಿಗೆ ಒಪ್ಪಿಸಿ ರಾಜರಿಗವಶ್ಯವಾದ ವಿದ್ಯೆಗಳನ್ನು ಕಲಿಸಲು ಏರ್ಪಾಡುಮಾಡಿದನು. ಇಂತು ತನ್ನ ಮಕ್ಕಳ ಉತ್ಕರ್ಷೆಯ ವಿಚಾರದಲ್ಲಿ ರಾಜನು ದಿನಗಳೆಯಹತ್ತಿದನು.

ಶ್ರೀನಿವಾಸನು ಮೃಗಯಾರ್ಥವಾಗಿ ಶೇಷಗಿರಿ ತಟದ ಅರಣ್ಯದಲ್ಲಿ ಸೇರಿದ ಸಂಗತಿಯ ವರ್ಣನೆಯು ಈ ಮೊದಲು ಬಂದಿದೆ. ಆತನು ಬೇಟೆಯಾಡಿ ಒಂದು ಮದ್ದಾನೆಯ ಬೆನ್ನುಹತ್ತಿ ಗಿರಿಯನ್ನಿಳಿದುದನ್ನೂ ಹೇಳಿದೆ. ಆ ಆನೆಯು ಅವನಿಂದ ಅಂತರಿಸಿ ಹೋಗಲು ಆತನು ಆ ಅರಣ್ಯದ ಸಮೀಪದಲ್ಲಿದ್ದ ರಮ್ಯವನವೊಂದನ್ನು ನಿರೀಕ್ಷಿಸಿ ತಾನೇರಿದ ಕುದುರೆಯನ್ನು ಮುಂದೂಡುತ್ತ ಆ ವನದಲ್ಲಿ ಪ್ರವೇಶಿಸಿದನು. ಅದೇ ದಿನದಲ್ಲಿ ಆಕಾಶರಾಜನ ಮಗಳಾದ ಪದ್ಮಾವತಿಯು ತನ ಓರಗೆಯ ಗೆಳತಿಯರೊಂದಿಗೆ ವನವಿಹಾರಕ್ಕಾಗಿ ಆ ವನದಲ್ಲಿ ಅತ್ತಿತ್ತ ಸಂಚರಿಸುತ್ತಲಿದ್ದರು ಹಲತೆರದ ಸೌಗಂಧಯುಕ್ತ ಹೂಗಳನ್ನು ಸಂಗ್ರಹಿಸುತ್ತಿರುವ ಆ ಕನ್ನಿಕೆಯರೆಲ್ಲ ಆಗಿನ ವಸಂತಕಾಲದ ಬಿಸಿಲಿನ ಬೇಗೆಯಿಂದ ಬೆಂದು ಬಳಲಿ ಒಂದು ಮಹಾವೃಕ್ಷವನ್ನು ಆಶ್ರಯಿಸಿ ವಿಶ್ರಮಿಸಿದ್ದರು ಅವರಾಡುವ ಮಾತುಗಳೂ, ಅವರ ಹರಟೆಯೂ ಅವರ ವಯಸ್ಸಿಗೆ ತಕ್ಕ ಬಗೆಯಿಂದಲೇ ಅವರವರಲ್ಲಿ ನಡೆದಿದ್ದವು. ಅವರ ವನದಲ್ಲಿಯ ವಿಹಾರಕ್ಕೆ ಯಾರೊಬ್ಬರಿಂದ ತಡೆಯೂ, ಭೀತಿಯೂ ಇಲ್ಲವಾಗಿದ್ದವು. ಅವರೆಲ್ಲ ಒಂದೇ ಓರಿಗೆಯವರಾಗಿದ್ದರೂ ಸಂಪತ್ತಿನ ಸೊಬಗಿನಿಂದಲೂ, ಕುಲಶೀಲ ವೃತ್ತಿಗಳಿಂದಲೂ ಭಿನ್ನಭಿನ್ನ ತರಗತಿಯುಳ್ಳವರಾಗಿದ್ದರು ಆದರೂ ಅವರಲ್ಲಿ ಮೇಲು-ಕೀಳುಗಳೆಂಬ ತಾರತಮ್ಯದ ಹೆಮ್ಮೆಯಿರಲಿಲ್ಲ ಪದ್ಮಾವತಿಯು ರಾಜನ ಮಗಳಾದರೂ ಗೆಳತಿಯರೆಲ್ಲರೊಡನೆ ಬೆರೆತು ಒಳ್ಳೆ ಉತ್ಸಾಹದಿಂದ ಕೆಲೆಯುತ್ತಿದ್ದಳು, ನಲಿಯುತ್ತಿದ್ದಳು. ಆ ಗುಂಪಿನಲ್ಲಿ ಅನಿಯಂತ್ರಿತವಾಗಿ ಒತ್ತಟ್ಟಿಗೆ ಕುಳಿತು ಸರಸವಾಡುವ ಆ ಸಖಿಯರಲ್ಲಿ ಪ್ರತಿಯೊಬ್ಬರು ತಮ್ಮ ತಮ್ಮ ಸರಿಕರೆದುರು—ದುರಭಿಮಾನ, ಗರ್ವ, ಕಪಟ, ಮೋಸ ಮುಂತಾದ ಕೀಳುತನ ತೋರಿಸುತ್ತಿದ್ದಿಲ್ಲ ಹೀಗೆ—ಅವರ ಅಂದಿನ ಸೊಗಸಿನ ವನವಿಹಾರವಾಗಿತ್ತು.

ಮೇಲೆ ಹೇಳಿದಂತೆ ಪದ್ಮಾವತಿಯು ತನ್ನ ಸಖಿಯರೊಡನೆ ಒಂದು ಮರದ ತಂಪಾದ ನೆರಳಲ್ಲಿ ಕುಳಿತಿರುವಾಗ ಅವರ ಮುಂಪುಗಡೆಯ ಮಾರ್ಗವನ್ನು ಬಳಸಿ ನಾರದ ಮುನಿಯು ನೇರವಾಗಿ ಅವರಿದ್ದಲ್ಲಿಯೇ ಬರುವವನ್ನು ಕಂಡರು. ಆದರೆ ಅವರು ಅವನನ್ನು ಋಷಿಯೊಬ್ಬನೆಂದೇ ಅರಿತರಲ್ಲದೆ ನಾರದನೆಂದವರು ಗುರುತಿಸಲಿಲ್ಲ. ಋಷಿಯ ಮಂದ ಹಾಗು ಸ್ಖಲಿತ ಗತಿಯಿಂದ

ಆತನು ಮುಪ್ಪಿನ ಮುದುಕನೆಂದವರು ಸಹಜವಾಗಿ ತಿಳಿದರು ಅವನ ಉದ್ದ ವಾದ ಕೆಂಜೆಡೆಗಳೂ ಭಸ್ಮದಿಂದ ಲೇಪಿತವಾಗಿದ್ದ ಶುಭ್ರವಾದ ಶರೀರವೂ, ಅವನ ಒಂದು ಕೈಯಲ್ಲಿರುವ ನಾಮಜಪ ಸರವೂ, ಇನ್ನೊಂದು ಕೈಯಲ್ಲಿದ್ದ ವೀಣೆಯೂ ಪದ್ಮಾವತಿ ಮೊದಲಾದ ಸಖಿಯರೆಲ್ಲರಲ್ಲಿ 'ಇವನೊಬ್ಬ ಪೂಜ್ಯ ನಿರುವನು' ಎಂಬ ಭಾವನೆಯುದಿಸಿತು. ಆ ಋಷಿಯು ಮುಖದಿಂದ ಯಾವಾಗಲೂ 'ವೈಕುಂಠಪತೇ! ನಾರಾಯಣಾ! ಶ್ರೀನಿವಾಸಾ!' ಎಂಬ ನಾಮೋಚ್ಚಾರ ನಡೆಯಿಸಿದ್ದನು. ನಡನಡುವೆ ಬಿಸಿಲಿನ ಆಯಾಸವನ್ನಾತನು ಹೊಂದಿರುವನೆಂಬದರ ಸೂಚಕವಾದ 'ಉಶ್' ಎಂಬುದು ಆತನ ಮುಖಶ್ವಾಸದಿಂದ ನಿಡಿದಾಗಿ ಹೊರಬರುತ್ತಿತ್ತು. ಇಂಥ ಸ್ವರೂಪದ ಆ ಋಷಿಯು ಪದ್ಮಾವತಿಯು ಗೆಳತಿಯರೊಡನೆ ಕುಳಿತ ಮರವನ್ನೇ ಕಂಡು ಅಲ್ಲಿಗೆ ಬಂದನು. ಆಗ ಅವರೆಲ್ಲರು ಬಹಳವಾಗಿ ನಡೆಯಿಸಿದ ಮಾತುಕತೆಗಳನ್ನು ನಿಲ್ಲಿಸಿದರು. ತಮ್ಮ ದೃಷ್ಟಿಯನ್ನೆಲ್ಲ ಆ ಋಷಿಯತ್ತ ಚಲ್ಲಿದರು. ಇವನು 'ನಮ್ಮಜ್ಜನು' 'ನಮಗೆ ಪೂಜ್ಯನು' ಎಂಬ ಗೌರವಬೀರುವ ಮನಸ್ಸನ್ನೊಪ್ಪಿದರು ಆ ಕೂಡಲೆ ಅವರೆಲ್ಲ ಸಖಿಯರೊಬ್ಬೊಬ್ಬರಾಗಿ ಬಂದು ಆತನಿಗೆ ನಮಸ್ಕರಿಸಿದರು. ಋಷಿಯಿಂದ 'ಸುಖಮಸ್ತು' ಎಂಬದಾಗಿ ಹರಕೆಹೊಂದಿದರು. ಕೊನೆಗೆ ವಂದಿಸಿದ ಆಕಾಶ ರಾಜಪುತ್ರಿ ಪದ್ಮಾವತಿಯನ್ನು ಕುರಿತು— 'ತಾಯಿ ತೀವ್ರವೇ ನಿಮಗೆ ಕಲ್ಯಾಣವಾಗಲಿ' ಎಂದು ಆಶೀರ್ವಾದದ ಮಾತು ನುಡಿದರು.

ಹರಕೆಯ ತಾರತಮ್ಯಯುಕ್ತ ವಾಣಿಗಳಿಂದ ಪದ್ಮಾವತಿಯಲ್ಲಿ ಕೌತುಕವೆನಿಸಿತು. ತನ್ನ ಹಿಂಡು ಜನ ಗೆಳತಿಯರಿಗೆ ಋಷಿಯು ಕೊಟ್ಟ ಆಶೀರ್ವಾದದಿಂದ ತಾನು ಪಡೆದ ಅಶೀರ್ವಾದವು ಮೇಲೆತ್ತರವಾದುದೆಂಬ ತಿಳುವಳಿಕೆಯಾಕೆಯದಾಯ್ತು. ಹಾಗೂ ಅವಳಲ್ಲಿ ಒಂದು ತರದ ಗೌರವದ ಅಂಕುರವು ಮೊಳೆಯಿತು ಆ ಋಷಿಯು ಯಾರಿರುವರೆಂಬುದನ್ನರಿಯುವ ಕುತೂಹಲವು ಆಕೆಯಲ್ಲುಂಟಾಯಿತು. ಆ ಕೂಡಲೆ ಆಕೆಯು ತನ್ನ ಸಖಿಯರಿಗೆ— 'ಗೆಳತಿಯರೆ! ಈ ನಿರ್ಮಾನುಷವಾದ ಅರಣ್ಯದ ವನದಲ್ಲಿ ಸ್ವೇಚ್ಛೆಯಿಂದ ಸಂಚರಿಸುವ ಈ ದಿವ್ಯ ಮುನಿಪೋತ್ತಮನು ಯಾರಿವರೆಂಬದನ್ನು ವಿನಯದಿಂದ ಅವರವನ್ನು ವಿಚಾರಿಸಿರಿ.' ಎಂದು ಹೇಳಿದಳು. ಸಖಿ ಪದ್ಮಾವತಿಯ ಮಾತ್ನು ಕೇಳಿ ಆಕೆಯ ಕೆಳದಿಯರು ಆ ಮರದ ನೆರಳಿನಲ್ಲೆ ಕುಳಿತು ಶ್ರಮವನ್ನು ಪರಿ

ಹೆರಿಸಿಕೊಳ್ಳುವ ಮುನಿಯನ್ನು ಕಂಡು— 'ಮಹಾಪ್ರಾಜ್ಞರಾದ ಮುನಿಗಳೇ ನೀವು ಯಾರು? ಈ ನಿರ್ಜನವಾದ ಅರಣ್ಯವನಕ್ಕೆ ಬಂದಿರುವ ವಿಚಾರ ವೇನು? ನಮ್ಮ ಪ್ರೇಮದ ಸಖಿಯಾದ ಪದ್ಮಾವತಿಯವರು ತಮ್ಮ ವೈಯಕ್ತಿಕ ಪರಿಚಯವನ್ನು ಅಪೇಕ್ಷೆ ಮಾಡಿದುದರಿಂದ ನಾವೀಗ ತಮ್ಮನ್ನು ಪ್ರಶ್ನೆ ಮಾಡಬೇಕಾಯಿತು. ಅನ್ಯಥಾ ಗೃಹಿಸಬಾರದು' ಎಂದು ಕೇಳಿದರು. ಆ ಕನ್ನಿಕೆಯರ ಜಿಜ್ಞಾಸುಯುಕ್ತ ಪ್ರಶ್ನೆಗಳಿಂದ ನಾರದನು ಸಮಾಧಾನ ಹೊಂದಿದನು ಆಗ ಆತನು, ಮಕ್ಕಳೇ! ನಾನೇನು ನಿಮ್ಮ ಪದ್ಮಾವತಿಯಳಿಗೆ ಹೊರಗಿನವನಲ್ಲ. ಆಕೆಯ ಕುಲಗುರುವು ನಾನಾಗಿರುವೆನು. ಇದು ಆಕೆಗೆ ತಿಳಿಯದಿದ್ದರೂ ನಾನೀಗ ತಿಳಿಸುವೆನು. ಎಂದು ಹೇಳಿದನು. ಹಾಗು ಹಿಂದೆನಿಂತ ಪದ್ಮಾವತಿಯನ್ನು ಕುರಿತು—'ಮಗಳೆ ಇತ್ತಬಾರಮ್ಮ, ನೀನು ನನ್ನ ಪರಿಚಯವನ್ನರಿಯೆ. ನಾನು ನಿನ್ನ ಇತ್ಥಂಭೂತ ಹಾಗು ಭವಿಷ್ಯತ್ ವರ್ತಿತ ಸಂಗತಿಗಳನ್ನರಿತಿರುವೆ. ಅದನ್ನು ಕೇಳುವದರಿಂದ ನಿನಗೆ ಕೌತುಕವಾಗುವದಲ್ಲದೆ ನಿನ್ನ ಹೃದಯದ ಅಂತರಾತ್ಮನಿಗೆ ನೀನು ಸೇವೆಸಲ್ಲಿಸುವಿ. ಬಾ. ಮಗು. ಮುಂದೆಬರು ನನಗೆ ಗೊತ್ತಿರುವ 'ಹಸ್ತಸಾಮುದ್ರಿಕೆಯ ಶಾಸ್ತ್ರದಬಲದಿಂದ ನಿನ್ನ ಸಲ್ಲಕ್ಷಣಗಳನ್ನೆಲ್ಲ ಸ್ಪಷ್ಟವಾಗಿ ವಿವರಿಸುವೆನು. ಎಂದು ನುಡಿದನು. ತಾನು ಇದೀಗ ಪ್ರಾಯದ ಸೋಪಾನವನ್ನು ಮೆಟ್ಟಿದ ಆಕೆಗೆ ತುಸು ಸಂಶಯವುಂಟಾದರೂ ಆತನಲ್ಲಿ ಪಿತೃ ಭಾವನೆಯನ್ನು ಕಲ್ಪಿಸಿದಳು ತಾನು ಆತನ ಮುಂದೆ ಬಂದು 'ತಾತ! ಇದುಕೊಳ್ಳಿ. ನನ್ನ ಅಂಗೈಯನ್ನು ನಿರೀಕ್ಷಿಸಿರಿ. ನನ್ನ ಆಜನ್ಮದಲ್ಲಿಯೂ ನನ್ನ ಅದೃಷ್ಟವನ್ನು ತಿಳಿಸುವ ಗ್ರಹಾದಿಗಳ ಬಲಾಬಲತೆಯನ್ನು ತಿಳಿಸಿರಿ' ಎಂದು ನುಡಿದಳು. ಆಗ ನಾರದನು ಆಕೆಯ ಪದ್ಮತಲದಂತೆ ಶೋಭಿಸುವ ಹಸ್ತವನ್ನು ನವಿರೆವೆಗಳಿಂದ ಮುಚ್ಚಿದ ತನ್ನ ಎರಡೂ ಕಣ್ಣುಗಳನ್ನು ತೆರೆದು ನಿರೀಕ್ಷಿಸಿ ಒಳ್ಳೆ ಆಳವಾಗಿ ಪರೀಕ್ಷಿಸಿ— 'ತಾಯಿ! ಆಕಾಶಗುವರಿ! ಪದ್ಮಾವತಿಯೆ! ಜಗತ್ಪತಿಯಾದ ಶ್ರೀನಿವಾಸ ಸ್ವಾಮಿಯೇ ನಿನ್ನನ್ನು ವರಿಸುವನೆಂಬದನ್ನು ಪ್ರಥಮದಲ್ಲಿಯೇ ನಾನು ನಿನ್ನ ಹಸ್ತದಿಂದೆ ಕಾಣುವೆನು.' ಎಂದು ನುಡಿದನು. ಆಗ ಅವಳು 'ತಾತಾ! ಇದು ಚೇಷ್ಟೆಯೇಕೆ?' ಎಂದು ಕೈಹಿಂದೆಗೆಯುತ್ತಿರುವಷ್ಟರಲ್ಲಿಯೆ ನಾರದನು 'ತಾಯಿ! ಇದು ಅನೃತವಾಕ್ಯವಲ್ಲ. ಅಮೃತ ವಾಕ್ಯವೆಂದು ಭಾವಿಸು.

ನಾನು ವಿಶದ ಪಡಿಸುವ ನಿನ್ನ ಹಸ್ತವಿಚಾರಗಳನ್ನೆಲ್ಲ ಹಿಂದನಿಂದ ಒರೆಹಚ್ಚು ವಿಶ್ವಾಸವು ಫಲದಾಯಕವಲ್ಲವೇ ? ಎಲ್ಲರೂ ಕಲ್ಯಾಣವನ್ನು ಬಯಸುವರು ಅದೇ ಸಮಂಜಸವು. ನೀನು ಕೈಹಿಂದೆ ಸೆಳೆದುಕೊಂಡು ದೇವತೆಗಳೂಕೂಡ ಮನ್ನಿಸಿದ ಈ ಸಾಮುದ್ರಿಕೆಯನ್ನಲ್ಲಗಳೆಯುವಿಯಲ್ಲ ! ಇದು ನನ್ನ ಚೇಷ್ಟೆ ಯಲ್ಲ. ನೀನು ಅಶಾಸ್ತ್ರಕ್ಕೆಮಾಡಿದ ಚೇಷ್ಟೆ. ಎಂದು ನುಡಿದನು ಆಗ ವಿಚಾರವಂತೆಯಾದ ಪದ್ಮಾವತಿಯು ಮತ್ತೆ ತನ್ನ ಕೈಮುಂದೆಮಾಡಿ–ತಾತ ! ಕ್ಷಮಿಸಿರಿ ಸಂಪೂರ್ಣವಾಗಿ ನನ್ನ ಹಸ್ತವನ್ನು ಪರಿಶೋಧಿಸಿ ನನ್ನ ಮುಂದಿನ ಆಗು–ಹೋಗುಗಳನ್ನು ಹೇಳಿರಿ ಎಂದು ನುಡಿದಳು ಆಗ ನಾರದನು ತನ್ನ ಪರೀಕ್ಷೆಯನ್ನು ಮುಂದುವರಿಸಿ— 'ತಾಯಿ! ನಿನ್ನ ಅಂದವಾದ ಮುಖವು ಬಾಲಚಂದ್ರನಂತೆಯೂ, ಕಣ್ಣುಗಳು ಕಮಲದೆಸಳುಗಳಂತೆಯೂ ನೂಗ ಸಾಗಿ ತೋರುವ ನಾಸಿಕವು ತಿಲಕುಸುಮದಂತೆಯೂ ಎಸಯುತ್ತವೆ. ಕಪೋಲ ಗಳು ದರ್ಪಣಕಾಂತಿಯನ್ನೂ ಹುಬ್ಬುಗಳು ಧನುಸ್ಸಿನಾಕಾರವನ್ನೂ ಹೊಂದಿ ಶೋಭಿಸುವವು. ದಾಡಿಮದ ಬೀಜಗಳನ್ನು ಹೋಲುವ ಹಲ್ಲುಗಳೂ ಕೆಂಪು ರಾಗರಂಜಿತತುಟಿಗಳೂ ಕೋಮಲವಾದ ನಾಲಿಗೆಯೂ ವರ್ಣನೆಗೆ ತಕ್ಕವುಗಳಾ ಗಿರುವವು. ಭ್ರಮರವರ್ಣದ ಮುಂಗುರುಳುಗಳಿಂದ ಕೂಡಿದ ಕಪ್ಪು ಕೂದಲು ಗಳು ನಿನ್ನ ಸೌಂದರ್ಯದ ಶಿಖರವನ್ನು ಸೂಚಿಸುವದು. ಕಾಂತಿಯುಳ್ಳ ನಿನ್ನ ಹಣೆಯೆಂಬದು ಮಣಿಮಯ ಪೀಠದಂತಿದ್ದು ಅದು ನಿನ್ನ ಸುಷ್ಟ ವಾದ ಅದೃಷ್ಟವನ್ನು ವ್ಯಕ್ತಪಡಿಸುವದು. ಪದ್ಮಾವತಿ! ಪದ್ಮ ತಲ ದಂತೆ ಪ್ರಕಾಶಿಸುವ ನಿನ್ನ ಹಸ್ತಗಳ ಶೋಭೆ ಮಿಗಿಲಾಗಿರುವದು ಬಾಲ ಸೂರ್ಯನ ಕಿರಣಕ್ಕೆ ಸರಿಯಾದ ಕಾಂತಿಯುಳ್ಳ ಕಂಠವು ಒಳಸೇರುವ ತಾಂಬೂ ಲದ ರಸವನ್ನು ಬಾಹ್ಯದಲ್ಲಿ ತೋರ್ಪಡಿಸುವದು. ನಿನ್ನ ಎದೆಯ ಪ್ರದೇಶವು ಕಿರಿದೆತ್ತರದ್ದು. ನಿನ್ನುದರವು ಬಾಳೆಯ ಎಲೆಯಂತೆ ತೆಳುವಾಗಿಯೂ ಸುಳಿನಾ ಭಿಯು ಕಮಲದಂತೆಯೂ ಇರುವದು ಬಾಳೆ ಕಂಬಗಳಂತೆ ಆಕಾರವಿರುವ ನಿನ್ನ ತೊಡೆಗಳಿಂದ ನಿನ್ನ ಶರೀರದ ಸೊಬಗು ಎದ್ದು ನಿಂತಂತೆ ಭಾಸವಾಗು ವದು ಮಗು! ಪದ್ಮಾವತಿ! ನೀನೇಸು ಜನ್ಮದಲ್ಲಿ ಸುಕೃತಗಳನ್ನಾಚರಿಸಿದೆಯೋ ಏನೋ ! ತತ್ಫಲವಾಗಿ ನಿನ್ನ ಸರ್ವಸಲ್ಲಕ್ಷಣಗಳೆಲ್ಲ ಶ್ರೇಷ್ಠತಮವಾಗಿರುತ್ತವೆ.

ಈ ಪ್ರಕಾರವಾಗಿ ಪದ್ಮಾವತಿಯ ಕರಪದ್ಮವನ್ನು ಪರಿಶೋಧಿಸಿ ನುಡಿದು ಕೂಡಲೇ ಅಲ್ಲಿಂದ ಪದ್ಮಾವತಿ ಮೊದಲಾದವರು ನೋಡ ನೋಡುತ್ತಿರುವಷ್ಟ ರಲ್ಲಿಯೇ ನಾರದನು ಅಂತರ್ಧಾನವನ್ನು ಹೊಂದಿದನು. ಮತ್ತು ತಾನೊಂದು ಯೋಚಿಸಿದ ಕಾರ್ಯದ ಅರ್ಥಾತ್ ಶ್ರೀನಿವಾಸಕಲ್ಯಾಣದ ಅರ್ಧಭಾಗವು ಮುಗಿದು ದೆಂದು ಹರುಷಹೊಂದಿ ಮನಸ್ಸಿನಲ್ಲಿ ಲಕ್ಷ್ಮೀದೇವಿಯನ್ನು ಸ್ತೋತ್ರ ಮಾಡುತ್ತ ಅಲ್ಲಿಂದ ಹೊರಟು ಶ್ರೀಮನ್ನಾರಾಯಣನ ಆವಾಸವೆನಿಸಿದ್ದ ಶೇಷಾಚಲಕ್ಕೆ ಹೊರಟು ಹೋದನು.

ಇಂತಿದೆ ಶ್ರೀನಿವಾಸನ ಮೃಗಯಾವಿಹಾರದಿಂದ ಮೊದಲಾಗಿ ನಾರದನು ಶೇಷಾಚಲದಿಂದ ಮರೆಯಾದವರೆಗಿನ ವರ್ಣನೆಯು.



# ೭ನೆಯ ಅಧ್ಯಾಯ

ಈ ಮೊದಲು ಶ್ರೀನಿವಾಸನು ತನ್ನ ಹಯಶ್ವನ್ನೇರಿ ಆನೆಯನ್ನು ಬೆಂಬಳಿಸುತ್ತ ಪದ್ಮಾವತಿಯೂ ಆಕೆಯ ಸಖಿಯರೂ ವಿಹರಿಸುತ್ತಿದ್ದ ವನದಲ್ಲಿ ಬಂದು ಪ್ರವೇಶಿಸಿದನೆಂಬದನ್ನು ಮಾತ್ರ ಹೇಳಿದೆ ಆತನಿಂದ ತಪ್ಪಿಸಿಕೊಂಡ ಆ ಆನೆಯು ಅವನಿಗಿಂತ ಮೊದಲೇ ಆವನದಲ್ಲಿ ಪದ್ಮಾವತಿ ಮೊದಲಾದವರು ಕುಳಿತಲ್ಲಿ ಓಡುತ್ತ ಬಂದಿತು. ಆ ಸಖಿಯರೆಲ್ಲ ಅದೇ ಬಂದು ಹೋದ ನಾರದರು ಹೇಳಿದ ಸಾಮುದ್ರಿಕೆಯ ವಿಷಯವಾಗಿ ತಮ್ಮ ತಮ್ಮಲ್ಲಿ ವಿಚಾರ ವಿನಿಮಯ ನಡೆಯಿಸಿದ್ದರು ಅಕಸ್ಮಾತ್ತಾಗಿ ಆನೆಯು ಘೀಳಿಡುತ್ತ ತಮ್ಮ ಕಡೆಗೇ ಸಾಗಿಬರುತ್ತಿರುವದನ್ನು ಕಣ್ಣಾರೆ ಕಂಡು ಭಯಗೊಂಡರು ಮರದ ಬೊಡ್ಡೆಯ ಮರೆಗೆ ತಮ್ಮ ತಮ್ಮ ಕಣ್ಣುಗಳನ್ನು ಮುಚ್ಚಿಕೊಂಡು ಒಬ್ಬರ ಮೇಲೊಬ್ಬರು ಬಿದ್ದುಕೊಂಡರು. ಸ್ವಲ್ಪಹೊತ್ತಿನಲ್ಲೇ ಆ ಮದ್ದಾನೆಯು ಹೋಯಿತೋ ಹೇಗೋ ಎಂದು ಕಣ್ಣುಗಳನ್ನು ಮುಚ್ಚಿದ ಕೈಗಳಬೆರಳುಗಳ ಸಂದಿನಿಂದ ನಿರೀಕ್ಷಿಸಹತ್ತಿದರು ಆದರೆ ಅವರಿಗೆ ಭಯಪ್ರದವೆನಿಸಿದ್ದ ಆನೆಯು ಕಾಣಿಸಲಿಲ್ಲ. ಅವರ ಎದುರಿನಲ್ಲಿ ಕಣ್ಣನ್ನು ಕುಕ್ಕಿಸುವ ರವಿಕಾಂತಿಯಿಂದ ಮಿಗಿಲಾದ ಪ್ರಕಾಶಮಾನನಾದ ದಿವ್ಯಪುರುಷನೊಬ್ಬನು ಅಶ್ವಾರೂಢನಾಗಿ ನಿಂತದು ಕಂಡುಬಂದಿತು. ಆತನು ನವರತ್ನಖಚಿತವಾದ ಆಭರಣಗಳಿಂದಲೂ ಮೃಗಯಾರ್ಥವಾಗಿಯೇ ಧರಿಸಿದ ಉಡುಪು-ತೊಡವುಗಳಿಂದಲೂ ಬಗಲಿಗಿರಿಸಿದ ಬಾಣ-ಬತ್ತಳಿಕೆಗಳಿಂದಲೂ ಒಳಿತಾಗಿ ಶೋಭೆವಂತನಾಗಿದ್ದನು. ಆತನ ಈ ಅಪೂರ್ವವಾದ ಸಡಗರವನ್ನು ಆ ಯುವತಿಯರೆಲ್ಲ ಮುಚ್ಚಿಕೊಂಡ ತಮ್ಮ ತಮ್ಮ ಕಣ್ಣುಗಳೆಂಬ ಭ್ರಮರಗಳನ್ನು ಕರಪಲ್ಲವಗಳೆಂಬ ಕಮಲಗಳಿಂದ ಮುಕ್ತವನ್ನಾಗಿಮಾಡಿ ಕಣ್ಣಾರೆ ಕಂಡರು. ಮನದಣಿಯುವಂತೆ ತಾವಿದ್ದಲ್ಲಿಯೇ ನಿಂತು ನಿರೀಕ್ಷಿಸಿದರು. ಮದ್ದಾನೆಯನ್ನು ಬೆನ್ನು ಬಿಡದೆಬಂದ ಆತನನ್ನು ಗಜರಾಜವು ಈ ವನಕ್ಕೆ ಆ ಪುರುಷನು ಬಂದ ಕೂಡಲೆ ತನ್ನ ಸೊಂಡಿಲಿನಿಂದ ಆತನಿಗೆ ನಮಸ್ಕಾರಮಾಡಿ ಘೀಳಿಡುತ್ತ ಆತನನ್ನು ದಯಾದೃಷ್ಟಿಯಿಂದ ನೀರಿಕ್ಷಿಸಿ ವನಪ್ರದೇಶದಲ್ಲಿ ಓಡಿಹೋಯಿತು.

ಶ್ರೀನಿವಾಸನು ಪುನಃ ಆದನ್ನು ಬೆಂಬಳಿಸಿ ಬೇಟೆಯಾಡಬೇಕೆಂದು ಹವಣಿಸಿದ್ದನು. ಆದರೆ ಆ ವನದಲ್ಲಿ ಒಟ್ಟಾಗಿನಿಂತ ಪದ್ಮಾವತಿ ಮೊದಲಾದ ಕನ್ನಿಕೆಯರು ಆತನ ದೃಷ್ಟಿಯನ್ನು ಸೆಳೆದದ್ದರಿಂದ ಅವನ ಆ ಹವಣಿಕೆಯು ಬಯಲಾಗಿ ಆ ಕನ್ನಿಕೆಯರನ್ನೇ ಮಿಕಿ ಮಿಕಿ ನೋಡುತ್ತ ಹತ್ತಿದ ಕುದುರೆಯನ್ನಿಳಿಯದೆ ಅಲ್ಲಿಯೇ ನಿಂತನು. ಗಜರಾಜವು ಶ್ರೀನಿವಾಸನಿಗೆ ತನ್ನ ಸೊಂಡಿಲಿನಿಂದ ನಮಸ್ಕಾರಮಾಡಿ ಹೋದದ್ದನ್ನೂ ಶ್ರೀನಿವಾಸನು ಕುದುರೆಯನ್ನೇರಿನಿಂತುಕೊಂಡು ತಮ್ಮನ್ನು ಒಂದೆಸವನೆ ನಿರೀಕ್ಷಿಸುತ್ತಿರುವದನ್ನೂ ಕಂಡು ಪದ್ಮಾವತಿಯ ಸಖಿಯರೆಲ್ಲ ಶ್ರೀನಿವಾಸನಕಡೆಗೆ ತಮ್ಮ ಬೆರಳುಮಾಡಿ ತೋರಿಸುತ್ತ ತಮ್ಮತಮ್ಮೊಳಗೆ ಪಿಸುಪಿಸು ಮಾತನಾಡುತ್ತಿದ್ದರು. ಆ ಸಖಿಯರಲ್ಲೋರ್ವಳು ಇನ್ನೊಬ್ಬಳಿಗೆ—'ಗೆಳತಿ ! ನೋಡಿದಿಯಾ ಆ ಕಿರಾತನನ್ನು. ಆತನೆಷ್ಟು ಚೆಲುವನಾಗಿರುವನು? ಅವನ ಕಣ್ಣುಗಳೆಂಬ ಕಮಲಗಳು ಎಂಥ ಮನಹರವಾಗಿರುವವು ? ಆತನ ಮುಖಮುದ್ರೆಯು ಗಂಭೀರವಾಗಿ ತೋರುವದರಿಂದ ಅವನೊಳ್ಳೆ ಬಲವಂತನಾಗಿರಬಹುದಲ್ಲವೆ ? ತ್ರಿಭುವನ ಬಲಯುತನವನಾದ್ದರಿಂದಲೇ ಅಗೋ ಆ ಪರ್ವತಪ್ರಾಯವಾದ ಮದ್ದಾನೆಯು ಅವನಿಗೆ ಸೊಂಡಿಲಿನಿಂದ ಶರಣುಮಾಡಿ ಓಡಿಹೋಯಿತು' ಎಂದು ಹೇಳಿದಳು. ತನ್ನ ಸಮೀಪದಲ್ಲಿಯ ತನ್ನ ಗೆಳತಿಯರಿಬ್ಬರಲ್ಲಿ ನಡೆದ ಈ ಮೆಲ್ಮಾತುಗಳು ಬಲುಮೆಯಿಲ್ಲದೆ ತನ್ನ ಕರ್ಣಪಟಲಗಳನ್ನು ಒಳಸೇರಲು ಪದ್ಮಾವತಿಯಳಿಗೆ ಶ್ರೀನಿವಾಸನನ್ನು ನೋಡುವ ಕೂತುಹಲವಿಮ್ಮಡಿಸಿತು. ಪರಿಚಯವಿಲ್ಲದ ಆತನನ್ನು ಕಣ್ತುಂಬ ನೋಡಿನೋಡಿದರೂ ಅವಳ ಮನದಣಿಯಲಿಲ್ಲ. ಆಕೆಯ ಕಿವಿಗಳು ಅವನ ಹೆಸರು–ದಸೆಗಳನ್ನು ಕೇಳಲು ಹಾತೊರೆದರೂ ಅವಳ ನಾಲಗೆಯು ಆ ಕ್ರಿಯೆಗೆ ಸಮ್ಮತಿಸದಾಯಿತು. ಕೊನೆಗೆ ಆಕೆಯು ತನ್ನ ಸಖಿಯರನ್ನು ಕುರಿತು—' ಗೆಳತಿಯರೇ ನಮ್ಮೆದುರಿನಲ್ಲಿ ಕುದುರೆಯನ್ನೇರಿನಿಂತ ಆ ಕಿರಾತರೂಪನಾದವನು ಯಾರು ? ಅವನ ದೇಶ-ಕೋಶ, ತಾಯಿ-ತಂದೆ, ಕುಲ-ಶೀಲಗಳನ್ನು ವಿಚಾರಿಸಿರಿ' ಎಂದು ಹೇಳಿದಳು. ಪದ್ಮಾವತಿಯ ಹೇಳಿಕೆಯಂತೆ ಆ ಗೆಳತಿಯರು ಸ್ವಲ್ಪ ಮುಂದೆ ಬಂದು ಶ್ರೀನಿವಾಸನಿಗೆ—' ಎಲೈ ಮಹಾನ್ ! ನೀವು ಯಾರು ? ನಿಮ್ಮ ನಾಡಾವುದು ? ನಿಮ್ಮನ್ನು ಹೆತ್ತ ಪುಣ್ಯವಂತರದಾರು ? ಪುರುಷರಿಲ್ಲದ ಈ ವನದಲ್ಲಿ ಬಂದಿರುವ ಉದ್ದೇಶವೇನು ?

ಈ ಎಲ್ಲ ನಿಮ್ಮ ಸಾಗ್ರ ಸಂಗತಿಯನ್ನು ನಮಗೆ ತಿಳಿಸುವಿರೆಂದು ಆಶಿಸುವೆವು. ಹಾಗು ಇದು ನಮ್ಮ ರಾಜಪುತ್ರಿ ಪದ್ಮಾವತಿಯವರ ಸ್ವಚ್ಛಂದ ವಿಹಾರಸ್ಥಾನ ವಿರುವದರಿಂದ ತಾವು ತೀವ್ರವೇ ಇಲ್ಲಿಂದ ಕಾಲ್ಕೆಗೆಯುವದು ಉತ್ತಮವು' ಎಂದು ಹೇಳಿದರು.

ಪದ್ಮಾವತಿಯ ಗೆಳತಿಯರು ಎದುರುಬಂದು ತನ್ನನ್ನು ನುಡಿಸಿ ಪ್ರಶ್ನೆ ಗಳನ್ನು ಕೇಳಿದ್ದೂ ಅವರು ಕೊನೆಗೆ ತನಗೆ ಭೀತಿಯನ್ನು ನಿರ್ದೇಶಿಸುವ ವಾಕ್ಯವನ್ನು ನುಡಿದದ್ದೂ ಶ್ರೀನಿವಾಸನಿಗೆ ಅಷ್ಟೊಂದು ಮಹತ್ವವೆನಿಸಲಿಲ್ಲ. ಆಗಲಾತನು 'ಕನ್ನಿಕೆಯರೇ ನೀವು ಕೇಳಿದ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರ ಹೇಳುವದು ಉಕ್ತವಿದ್ದರೂ ಇಷ್ಟವಿಲ್ಲ ನಾನು ಇಲ್ಲಿ ಬಂದ ಕಾರ್ಯದ ಉದ್ದೇಶವೊಂದನ್ನೇ ತಿಳಿಸುವದಾದರೆ ನಿಮಗೆ ತಿಳಿಸದೆ ಆ ನಿಮ್ಮ ಸಖಿ ರಾಜಪುತ್ರಿಯಳಿಗೇ ತಿಳಿಸುವೆನು' ಎಂದು ಪದ್ಮಾವತಿಯ ಕಡೆಗೆ ತನ್ನ ಎಡಗೈ ಬೆರಳನ್ನು ಮುಂದೆಮಾಡಿ ಆಕೆಯನ್ನು ತೋರಿಸಿದನು. ಆಗ ಸಖಿಯರು ಮಾರುನುಡಿಯಲರಿಯದೆ ಪದ್ಮಾವತಿಯನ್ನೇ ನೋಡಹತ್ತಿದರು. ಶ್ರೀನಿವಾಸನಂತೂ ಕಣ್ಣಾಲ್ಲಿ ಕಣ್ಣಿಟ್ಟು ಪದ್ಮಾವತಿಯ ಅಸದೃಶರೂಪ ನಿರೀ ಕ್ಷಿಸಿ ಮನದಲ್ಲಿ ಮಿಡುಕಹತ್ತಿದನು ಶ್ರೀನಿವಾಸನ ಹಾಗೂ ಗೆಳತಿಯರ ದೃಷ್ಟಿಗಳು ತನ್ನನ್ನು ಆವರಿಸಿದ್ದರೂಕೂಡ ಪದ್ಮಾವತಿಯು ಆ ಕಡೆಗೆ ಲಕ್ಷಿಸದೆ ತನ್ನದೇ ಆದ ಕಡೆಗಣ್ಣಿನ ನೋಟದಿಂದ ಪರಮ ಸುಂದರನಾತನನ್ನು ನೋಡು ವದರಲ್ಲಿ ತಲ್ಲೀನಳಾಗಿದ್ದಳು

ಶ್ರೀನಿವಾಸನನ್ನು ನಿರೀಕ್ಷಿಸುವಲ್ಲಿ ಮಗ್ನಳಾದ ಪದ್ಮಾವತಿಯಿಂದ ಏನೊಂದು ಮಾತುಗಳು ಹೊರಟು ಆತನನ್ನು ವಿಚಾರಿಸದಾದರಿಂದ ಆ ಸಖಿ ಯರು ತಾವೇ ಆತನನ್ನು ಕುರಿತು ಉಪರಿದರ್ಶಿತ ಪ್ರಶ್ನೆಗಳನ್ನೇ ಪುನಃ ಕೇಳಿ ದರು.

ಈಗ ಮಾತ್ರ ಶ್ರೀನಿವಾಸನು ಅವರಿಗೆ ಉತ್ತರಕೊಡದೆ ಗತ್ಯಂತರವುಳಿ ಯಲಿಲ್ಲ. ತಾನು ಆ ಸಖಿಯರ ಸಮ್ಮುಖದಲ್ಲಿಯೇ ಪದ್ಮಾವತಿಯನ್ನು ಕಾಮು ಕದೃಷ್ಟಿಯಿಂದ ನೋಡಹತ್ತಿದ್ದು ಅಯುಕ್ತವೆಂದೇ ಆತನ ಭಾವನೆಯಾಗಿ ಆ ದೋಷ ಮರೆಮಾಜುವದಕ್ಕಾದರೂ ಆತನು ಆ ಸಖಿಯರೊಡನೆ ಮಾತಾಡ

ಬೇಕಾಯಿತು ಆಗ ಅವನು 'ಕನ್ನಿಕೆಯರೇ! ನಾನು ಚಂದ್ರವಂಶದಲ್ಲಿ ಹುಟ್ಟಿದವನು, ವಸುದೇವ-ದೇವಕಿಯರೆಂಬವರು ನನ್ನ ಮಾತಾ-ಪಿತೃಗಳು. ಹಲಾಯುಧನಾದ ಬಲರಾಮನೇ ನನ್ನ ಅಣ್ಣನು ಸುಭದ್ರೆಯು ನನ್ನ ಚಿಕ್ಕ ಸಹೋದರಿ. ಪಂಚಪಾಂಡವರೆನ್ನಗೆ ಪಂಚಪ್ರಾಣಗಳೆನ್ನಿಸಿದ ಆಪ್ತರು ಶ್ರಾವಣಕೃಷ್ಣದಲ್ಲಿ ನನ್ನ ಕೃಷ್ಣವರ್ಣದ ತಾಯಿಯಿಂದ ನಾನು ಜನಿಸಿದೆನಾದ್ದರಿಂದ 'ಕೃಷ್ಣ' ಎಂಬ ಅಂಕಿತದಿಂದ ನನ್ನನ್ನು ಸಂಬೋಧಿಸುವರು. ಈಗ ನನ್ನ ಕಾರ್ಯೋದ್ದೇಶವೆಂದರೆ ಕೇವಲ ಕನ್ಯಾಪೇಕ್ಷೆಯೇ ತನ್ನಿಮಿತ್ತವಾಗಿಯೇ ನಾನಿಲ್ಲಿ ಬಂದಿರುವೆ. ಇವೆಲ್ಲವು ನನ್ನ ಸಂಬಂಧದ ಸಂಗತಿಯಾಯಿತು. ಇನ್ನು ಈ ರಾಜಪುತ್ರಿಯ ಕುಲ-ಗೋತ್ರಾದಿಗಳನ್ನು ಅವಳ ಮುಖದಿಂದಲೇ ಕೇಳುವ ಆಶೆ ನನಗಾಗಿದೆ. ಎಂದು ಹೇಳಿದನು.

ಶ್ರೀನಿವಾಸನ ಮಾತುಗಳಿಂದ ತನ್ನ ಮನಸ್ಸಿನಲ್ಲಿ ಸಂತುಷ್ಟತೆಯುಂಟಾಗಿದ್ದರೂ ಅದನ್ನು ಹೊರಗೆ ತೋರಿಸದೆ ಸಹಜಮುದ್ರೆಯಿಂದ ಪದ್ಮಾವತಿಯು 'ಕಿರಾತಸ್ವರೂಪನೆ! ಈ ತೋಂಡದೇಶವನ್ನು ಧರ್ಮದಿಂದ ಪರಿಪಾಲಿಸುವ ಆಕಾಶರಾಜನೆಂಬವನ ಮಗಳೆನ್ನಿಸಿದ 'ಪದ್ಮಾವತಿ'ಯು ನಾನಾಗಿರುವೆನು. ಚಂದ್ರಕುಲದಲ್ಲಿ ಹುಟ್ಟಿದವಳು ನನ್ನ ಪಿತೃಸಂಶವು ಅತ್ರಿಗೋತ್ರದಿಂದ ಪ್ರಸಿದ್ಧವಾದುದು ಇದಿಷ್ಟೇ ನೀವು ತಿಳಿದುಕೊಳ್ಳುವ ನನ್ನ ಸಂಗತಿಯು ಇದೆಲ್ಲವನ್ನು ಕೇಳಿಕೊಂಡಿದ್ದರ ಪ್ರಯೋಜನವು ನಿಮಗೇನು? ಇನ್ನು ನೀವು ಇಲ್ಲಿಂದ ಮುಂದೆ ಪಯಣ ಬೆಳಿಸಿರಿ! ಎಂದು ಸ್ಪಷ್ಟ ನುಡಿದಳು.

ಪದ್ಮಾವತಿಯ ನುಡಿಗಳಿಂದ ಶ್ರೀನಿವಾಸನು ತನ್ನ ಮಾತನ್ನು ಮುಂದುವರಿದನು. "ಪದ್ಮಾವತೀ ಕೇವಲ ನಾನು ನಿನ್ನನ್ನು ಅಪೇಕ್ಷಿಸಿಯೇ ಇಲ್ಲಿ ಬಂದಿರುವೆ ಈಗ ನೀನಾಡಿದ ನಿಷ್ಠುರ ನುಡಿಗಳು ನನ್ನನ್ನು ಬಾಧಿಸವಾದರೂ ಇನ್ನು ಮುಂದೆ ಮೃದುನುಡಿಗಳನ್ನಾಡುವದು ನಿನಗೆ ಭೂಷಣವು. ಅಶನಾರ್ಥಿಗಳಿಗೆ ಅನ್ನವನ್ನೂ ತೃಷಾರ್ತರಿಗೆ ಜಲದಾನವನ್ನೂ ಕೊಟ್ಟರೆ ಬಹಳ ಪುಣ್ಯ ಪ್ರಾಪ್ತಿಯೆಂದು ಮನುಮುನಿಪರುಗಳ ವಾಕ್ಯವುಂಟು. ಅದರಂತೆ ನಾನು ನಿನ್ನನ್ನು ಬಯಸಿ ಬಂದಿರುವೆನಾದುದರಿಂದ ನನ್ನ ಅಪೇಕ್ಷೆಯನ್ನು ದೂರೀಕರಿಸದೆ ಆನಂದವನ್ನು ಪಡೆದು ಅದರಿಂದಾದ ಪುಣ್ಯದಿಂದ ಉತ್ತಮಗತಿಯನ್ನು ಹೊಂದು ' ಎಂದು ಸ್ಪಷ್ಟವಾಗಿ ನುಡಿದು ಬಿಟ್ಟನು

ವಿಷಯವಾಸನಾನುರಕ್ತನಲ್ಲಿ ಭಯ—ಲಜ್ಜೆಗಳು ಲವಲೇಶವಿರುವ ದಿಲ್ಲ. ಶ್ರೀನಿವಾಸನ ವಿಕಾರದರ್ಶಕ ನುಡಿಗಳನ್ನು ಕೇಳಿದೊಡನೆ ಪದ್ಮಾವತಿಯ ಕೋಪವು ಹೊರಹೊಮ್ಮಿತು. ಆಕೆಯ ಕಣ್ಣುಗಳು ಕೆಂಡ ಸುರಿಸುವಂತೆ ತೋರಹತ್ತಿದವು. ಅಧರಗಳೆರಡೂ ಅದುರ ಹತ್ತಿದವು. ತನ್ನ ಕಾಲನ್ನಪ್ಪಳಿಸುತ್ತ ಒಂದೆರಡು ಹೆಜ್ಜೆ ಮುಂದೆ ಬಂದು ಒಳ್ಳೆ ರಭಸದಿಂದೆ—"ಎಲೈ ಕಿರಾತರೂಪಿಯೆ! ಏನೊಂದರಿವಿಲ್ಲದೆ ಅಲ್ಲದ, ಸಲ್ಲದ ಮಾತುಗಳನ್ನಾಡಿ ನಿನ್ನ ಅಜ್ಞತೆಯನ್ನು ಪ್ರಕಟಗೊಳಿಸುವಿ. ನೀನೊಬ್ಬ ಮಾತಿನ ಪಶುವೆಂದು ನಾನೇಕೆ ನಿನಗೆನ್ನಬಾರದು? ನನ್ನ ತಂದೆ ಆಕಾಶರಾಜನು ನಿನ್ನಂಥ ದೋಷಿಗೆ ಸಂಹಾರದಿಂದಲೇ ಶಾಸನ ನೀಡುವನು. ನಿನಗೆ ಇನ್ನೂ ನಾಲ್ಕೊಪ್ಪತ್ತು ಇಹಲೋಕದಲ್ಲಿ ಇರುವ ಆಶೆಯಿದ್ದುದಾದರೆ ಇದೊಂದು ಸಾರೆ ನಾನು ನಿನಗೆ ಕೊಡುವ ಕ್ಷಮೆಯನ್ನು ಉಡಿಯಲ್ಲಿ ಕಟ್ಟಿಕೊಂಡು ಇಲ್ಲಿಂದ ತೆರಳು. ನನ್ನ ತಂದೆಗೆ ಈ ನಿನ್ನ ವರ್ತನವು ಗೊತ್ತಾಗುವ ಮೊದಲೇ ಹೊರಟು ಹೋಗು" ಎಂದು ಹೇಳಿದಳು.

ಪದ್ಮಾವತಿಯ ಮಾತುಗಳಿಗೆ ಶ್ರೀನಿವಾಸನು ಹೆದರಲಿಲ್ಲ; ಹಿಂಜರಿಯಲಿಲ್ಲ; ಆಕೆಯೊಡನೆ ಮಾತಿಗೆ ಮಾತು ಬೆಳಿಸಿದನು. ಆಕೆಯ ಹೇಳಿಕೆಗೆ ಕೇಳಿಕೆಯನ್ನೂ ಕೇಳಿಕೆಗೆ ಹೇಳಿಕೆಯನ್ನೂ ಸಮಂಜಸವಾಗಿ ಸಾಗಿಸಿದನು. ಆತನು ಪದ್ಮಾವತಿಯನ್ನು ಕುರಿತು 'ಪದ್ಮಾವತಿ! ಇದರಲ್ಲಿ ನನ್ನ ಅಪರಾಧವೇನು? ನೀನು ಉಪವರಳಾದ ವಧುವೆಂದು ನಾನು ಕೇಳಿರುವೆನು. ಅದರಂತೆ ನಾನಾದರೂ ವಿವಾಹೇಚ್ಛುವಾದವನು. ನಿನ್ನ ತಂದೆಯ ಶಾಸನವು ಅನ್ಯಾಯಕ್ಕಲ್ಲದೆ ನ್ಯಾಯಕ್ಕಲ್ಲ. ನನ್ನದು ನ್ಯಾಯಪಕ್ಷವಾದುದರಿಂದ ನನಗಾವುದರಿಂದಲೂ ಭಯವಿಲ್ಲ' ಎಂದನು ಆಗ ಪದ್ಮಾವತಿಯು 'ಅಜ್ಞಪುರುಷನೆ! ನೀನಾಡುವನುಡಿಗಳು ತಿಳಿವಿಲ್ಲದ ಬಾಲಕನ ನುಡಿಗಳಂತಿವೆ. ಇಂತು ಮಾತಾಡುವದರಿಂದಾವ ಪ್ರಯೋಜನವಿಲ್ಲ. ನನ್ನ ತಂದೆಯು ಒಂದುವೇಳೆ ನಿನ್ನನ್ನು ಕ್ಷಮಿಸಿ ದಂಡನೆಮಾಡದಿದ್ದರೂ ಈಗ ನಾನು ನಿನಗೆ ನೀಡಿರುವ ಕ್ಷಮೆಯನ್ನು ಹಿಂತೆಗೆದುಕೊಂಡು 'ಕನ್ಯೆಯೊಬ್ಬಳಿಗೆ ಅವಾಚ್ಯನುಡಿಗಳನ್ನಾಡಿದನು' ಎಂಬ ಅಪರಾಧವನ್ನು ಎತ್ತಿಹಿಡಿದು ನಿನಗೆ ಸಂಕೋಲೆಗಳನ್ನು ಬಿಗಿಸಿ ಬೀದಿ ಬೀದಿಗಳಲ್ಲಿ ಮೆರೆಯಿಸ ಹಚ್ಚುವೆನು. ಇದು ನಿಶ್ಚಯವೆಂದು ತಿಳಿ'

ಎಂದು ದರ್ಪದಿಂದ ನುಡಿದಳು. ಶ್ರೀನಿವಾಸನು ತಾನಾಗ ಪದ್ಮಾವತಿಯ ಮಾತುಗಳನ್ನು ಕೇಳಿ 'ಪದ್ಮಾ! ಈ ಮೊದಲೇ ನಿನ್ನ ಕುಡಿನೋಟವೆಂಬ ಬೇಡಿಯಿಂದೆ ನನ್ನ ಮನಸ್ಸನ್ನು ಬಂಧಿಸಿರುವಿ ಅಂದಮೇಲೆ ಇನ್ನು ನೀನು ಬಿಗಿಸುವ ಬೇಡಿಗಳೆಲ್ಲಿ? ನೀನು ಬಿಗಿಸುವ ಬೇಡಿಗಳು ಕೈಕಾಲುಗಳಿಗೆ ಮಾತ್ರ ಹೃದಯಾಂತಸ್ಥಿತ ಮನಸ್ಸಿಗಲ್ಲ, ಪ್ರೇಮಕ್ಕಲ್ಲ, ಇದಾವುದೂ ನಿನಗೆ ತಿಳಿಯದಿದ್ದರೆ 'ಅದೃಷ್ಟದಲ್ಲಿಂದ ಸೂಸುವಭವಿಷ್ಯಗಳನ್ನು ಯಾರೂ ಒರೆಸಲಾರರು' ಇದೊಂದೇ ಮಾತನ್ನು ಉತ್ತರಿಸುವೆನು.

ಶ್ರೀನಿವಾಸನ ಉತ್ತರದಿಂದ ಪದ್ಮಾವತಿಯು ಮನಸಿನಲ್ಲಿ " ಈ ಕಿರಾತ ರೂಪಿಯ ಪುರುಷನಲ್ಲಿ ನಿಜವಾದ ಪೌರುಷವಿದೆ ನಾನಿದುವರೆಗೆ ಹೆದರಿಸಿ, ಹೀಯಾಳಿಸಿ ನುಡಿದ ನುಡಿಗಳಿಗೆ ತಿಲಮಾತ್ರವೂ ಬೆದರಲೊಲ್ಲನು. ಇನ್ನು ಮೇಲೆ ನಾನಾವ ಬಗೆಯನ್ನು ಕೈಕೊಳ್ಳಬೇಕು?" ಎಂದು ಆಲೋಚಿಸಿ ಆತನನ್ನು ಕುರಿತು " ಎಲೈ ಕಿರಾತವರೇಣ್ಯ! ನೀನಿಲ್ಲಿಂದ ಕೂಡಲೆ ತೆರಳಿ ನಿನ್ನ ಪ್ರಾಣಗಳನ್ನುಳಿಸಿಕೊಳ್ಳು, ಸುಕ್ಷೇಮವಾಗಿ ನಿನ್ನ ಮನೆಗೆ ಹೋಗು. ಇದಾಗದಿದ್ದರೆ ನಿನಗೆ ಧರ್ಮ ಪ್ರಭು ಆಕಾಶರಾಜನ ಆಣೆ, ವರಾಹಮೂರ್ತಿ ಶ್ರೀಹರಿಯಾಣೆ, ಗಿರಿಯ ವೇಂಕಟೇಶನ ಆಣೆ ಇವೆಲ್ಲ ಆಣೆಗಳಿಂದ ನೀನು ಹೊರತಾದರೆ ನಿನಗೆಒಳಿತಾಗದು. ಮೊದಲು ಇಲ್ಲಿಂದ ಹೊರಡು" ಎಂದು ಹೇಳಿದಳು. ಅವಳಿಕ್ಕುವ ಆಣೆಗಳೂಕೂಡ ಅವನಿಂದ ತಿರಸ್ಕರಿಸಲ್ಪಟ್ಟವು. ಇಷ್ಟೇಅಲ್ಲ. ಅವಳಿಂದ ತನ್ನ ಅಂತರವನ್ನು ಇನ್ನೂ ಸ್ವಲ್ಪ ಕಡಿಮೆ ಮಾಡಿದನು.

ಬರಬರುತ್ತ ತನ್ನನ್ನು ಸಮೀಪಿಸಿ ಕುದುರೆಯನ್ನು ಮುಂದೂಡುತ್ತ ಬರಲು ಹವಣಿಸುವ ಶ್ರೀನಿವಾಸನಿಗೆ ಪದ್ಮಾವತಿಯು—'ಎಲೋ ವನಚರ! 'ನಾನು ಗಂಡುನೆಂಬ ಹೆಮ್ಮೆಪಡುವಿ, ಬಲಾತ್ಕಾರ ಮಾಡಲಿಚ್ಛಿಸುವಿ; ಇದು ನಿನ್ನ ಅನೈತಿಕ ವರ್ತನೆಯನ್ನು ತೋರಿಸುವದು ನಿನಗಿದ್ದ ಈ ಹೆಮ್ಮೆಯನ್ನು ಬಿಡು. ನೀನು ನಿನ್ನವರನ್ನೆಲ್ಲತೊರೆದು ದಿಕ್ಕಿಲ್ಲದ ಅನಾಥನಂತೆ ಈ ವನದಲ್ಲಿ ಮರಣಹೊಂದುವ ಕುಯೋಗವನ್ನು ಗಳಿಸಿದಿ ಇನ್ನುಮುಂದೆ ನೀನು ನಾಯಿ—ನರಿಗಳ ಬಾಯಿಗೀಡಾಗಿ ಹೋಗುವ ಪ್ರಸಂಗವನ್ನುಪಡೆದಿ. ಇದರಲ್ಲೇನೂ ಸಂಶಯವಿಲ್ಲ. ಇನ್ನಾದರೂ ನಿನಗೆ 'ಶೀಘ್ರವೇ ಇಲ್ಲಿಂದ ಹೊರಡು' ಎಂದು

ಹೇಳುವೆ. ಇದಕ್ಕೂ ಮೀರಿದಲ್ಲಿ ನಿನ್ನ ಪರಿಣಾಮವನ್ನು ನೀನುಕಂಡುಕೊಳ್ಳು ಎಂದು ಖಂಡಿತವಾಗಿ ಮಾತಾಡಿದಳು ಆಗ ಶ್ರೀನಿವಾಸನು ತನ್ನ ಹಟವನ್ನು ಬಿಡದೆ—'ಪ್ರಿಯೆ ನನ್ನ ಅದೃಷ್ಟಲಿಖಿತವನ್ನು ತೊಡೆಯಲುಆರಿಂದಲೂ ಸಾಧ್ಯ ವಿಲ್ಲ ಅಂಜಿಕೆ—ಬೆಂಜಿಕೆಗಳನ್ನು ಸಾನೆಣಿಸನು ಜಯಾಪಜಯಗಳನ್ನೂ ಕೂಡ ಬಯಸದೆ ಕೇವಲ ನಿನ್ನನ್ನೇ ವರಿಸಿ ವೈವಾಹಿಕ ಸುಖಗಳಿಸುವದೇ ನನ್ನ ಧ್ಯೇಯವಿದೆ.' ಎಂದಾಡಿದ ಆತನ ದೃಢ ನಿರ್ಧಾರದಿಂದ ಪದ್ಮಾವತಿಯು ಮನಸ್ಸಿನಲ್ಲಿ ತುಷ್ಟತೆಪಡೆದರೂ ಅದನ್ನು ತನ್ನ ಸಖಿಯರೆದುರು ತೋರ ಗೊಡದೆ ಆತನೊಡನೆ ಮುನ್ನಿನಂತೆ ಪ್ರೇಮಕಲಹವನ್ನು ನಡೆಯಿಸಿ ಬಾಹ್ಯದಲ್ಲಿ ತನ್ನ ವಿಜಯವನ್ನೇ ಪ್ರಕಟಿಸುವ ವಿಚಾರದವಳಾದಳು ಆಗಲಾಕೆಯು ಉತ್ತರವನ್ನು ನಿರೀಕ್ಷಿಸುತ್ತಿದ್ದ ಶ್ರೀನಿವಾಸನನ್ನು ಕುರಿತು 'ನರವರ! ನಿನ್ನ ಅದೃಷ್ಟಫಲವನ್ನು ಕಾಣು' ಎಂದು ತನ್ನ ಸಖಿಯರಿಗೆಲ್ಲ—'ಈತನು ಇದು ವರೆಗೆ ನನ್ನನ್ನು ಪೀಡಿಯಾಳಿಸಿ ನುಡಿಯುವ ನುಡಿಗಳು ನಿಮಗೆ ರುಚಿಸಿದವೇ? ಮೂರ್ಖರೆ! ಇವನನ್ನೇನು ನೋಡುತ್ತ ನಿಂತಿರುವಿರಿ? ನಿಮಗೆಜ್ಞಾನವಿಲ್ಲೇ? ಬಲವಿಲ್ಲೇ? ಸ್ತ್ರೀಮರ್ಯಾದೆಯೆಂಬ ಮೋಹವಿಲ್ಲೆ? ಸಾಕು ಸಾಕು. ಈ ನಿಮ್ಮ ಹೇಡಿತನ ಅಬಲೆಯರೆಂದೆನ್ನಿಸಿಕೊಂಡ ಮಾತ್ರಕ್ಕೆ 'ಸ್ತ್ರೀಯರು ನಿಸ್ಸತ್ವರಾಗಿ ಬಾಳಬೇಕೆ? ಸ್ತ್ರೀಯರು ಪ್ರಸಂಗ ವಿಶೇಷ-ಸಾಮಾನ್ಯಗಳನ್ನರಿತು ತಮ್ಮ ಬಲಾಬಲಗಳನ್ನು ಪ್ರದರ್ಶಿಸಬೇಕು' ಎಂಬದಾಗಿ ಹಲವು ಉಪದೇಶದಿಂದ ಅವರನ್ನು ಹುರಿದುಂಬಿಸಿ 'ಈ ಅಶ್ವಾರೋಹಿಪುರುಷನನ್ನು ದೊಡ್ಡ ದೊಡ್ಡ ಕಲ್ಲುಗಳನ್ನೆಸೆದು ಗಾಸಿಮಾಡಿರಿ, ಅವನೇರಿರುವ ಕುದುರೆಯ ಸಮಾಚಾರವನ್ನೂ ಕೂಡ ತೆಗೆದುಕೊಳ್ಳಿರಿ' ಎಂದು ಉಚ್ಚರಿಸಿ ತಾನೂ ಕೈಯಲ್ಲಿ ಕಲ್ಲನ್ನು ತೆಗೆದುಕೊಂಡು ಶ್ರೀನಿವಾಸನ ಮೇಲೆ ಗುರಿತಪ್ಪಿ ಬೀಸಿ ಬೀಸಿ ಒಗೆಯಹತ್ತಿದಳು. ಉಳಿದ ಕನ್ನಿಕೆಯರೂ ತಮ್ಮ ತಮ್ಮ ಮನ ಬಂದಂತೆ ಕಲ್ಲುಗಳನ್ನು ಎಸೆದರು ಶ್ರೀನಿವಾಸನಿಗೆಸೆದ ಕಲ್ಲುಗಳೆಲ್ಲ ಆತ ನೇರಿದ ಕುದುರೆಗೇ ಬಲವಾದ ಪೆಟ್ಟುಗಳಾಗಿ ತಗಲಹತ್ತಿದವು ಅದರ ಸಂಕಟವನ್ನು ನೋಡಲಾರದೆ ಶ್ರೀನಿವಾಸನು ಕೆಳಗಿಳಿದನು. ಕುದುರೆಯು ಹೊಡೆತಗಳನ್ನು ತಾಳಲಾರದೆ ಅಲ್ಲಿಯೇ ಬಿದ್ದು ಹೊರಳಾಡಿ ಪಂಚತ್ವವನ್ನು ಹೊಂದಿತು. ಶ್ರೀನಿವಾಸನು ಆ ಕನ್ನಿಕೆಯರ ಮೇಲೆ ಪ್ರತಿಕ್ರಿಯೆಯನ್ನೇ



ಶ್ರೀನಿವಾಸನ ಕುದುರೆಯನ್ನು ಪದ್ಮಾವತಿಯ ಸಖಿಯರು ಕಲ್ಲಿನಿಂದ ಒಗೆದು ಕೊಂದುದು

ನೊಂದನ್ನು ಕೈಕೊಳ್ಳದೆ ಅಸ್ತವ್ಯಸ್ತವಾದ ತನ್ನ ಉಡಿಗೆ-ತೊಡಿಗೆಗಳನ್ನು ಸಹ ಸಾವರಿಸಿಕೊಳ್ಳದೆ ತನ್ನ ಮನಸ್ಸಿನಲ್ಲಿ 'ಇನ್ನು ನಾನಿಲ್ಲಿಯೇ ನಿಂತು ದಾದರೆ ಈ ಕನ್ನಿಕೆಯರಿಂದ ಕುದುರೆಗೊದಗಿದ ಗತಿಯು ನನಗಾಗುವದು. ಇಲ್ಲಿಂದ ಪಲಾಯನ ಮಾಡುವದೇ ಮೇಲಾದ ಉಪಾಯ' ಎಂದು ತಿಳಿದು ಕೇವಲ ಹುಚ್ಚನಂತಾಗಿ ದಿಕ್ಕೆಟ್ಟು ಓಡತೊಡಗಿದನು ಮನಸಿನಲ್ಲಾತನು- 'ನಾನು ಇಂದು ಮನೆಯಿಂದ ಹೊರಡುವ ಮುನ್ನ ನನ್ನ ಮಾತೃ ಸ್ವರೂಪಳಾದ ಬಕುಲಾವತಿಯ ಆಜ್ಞೆಯನ್ನು ಪಡೆದು ಬಂದಿದ್ದರ ಈ ದುರವಸ್ಥೆಯು ನನಗೆ ಪ್ರಾಪ್ತವಾಗುತ್ತಿರಲಿಲ್ಲ' ಎಂಬದಾಗಿ ಪಶ್ಚಾತ್ತಾಪ ಬಟ್ಟು ತಾನಿಳದ ಗಿರಿಯ ಸೋಪಾನಗಳನ್ನೇರಿ ಉತ್ತರ ದಿಕ್ಕಿಗೆ ನಡೆದನು

ಪದ್ಮಾವತಿಯಿಂದ ಪರಾಜಿತದನಾ ಶ್ರೀನಿವಾಸನು ಹಾಗೇ ತನ್ನ ವಾಸ ಸ್ಥಳವಾದ ತಿಂತ್ರಿಣಿ ವೃಕ್ಷದಡಿಯಲ್ಲಿಯ ವಲ್ಮೀಕದಲ್ಲಿ ತನ್ನ ಮಲಗಿಕೊಳ್ಳುವ ಸ್ಥಾನದಲ್ಲಿ ಮಲಗಿಕೊಂಡನು.

ಶ್ರೀನಿವಾಸನು ಗಿರಿಯನ್ನೇರಿಹೋದನಂತರ ಅಂತಸ್ಥದಲ್ಲಿ ಪದ್ಮಾವತಿ ಯಲ್ಲಿ ವಿರಹಾಗ್ನಿಯು ಜಾಜ್ವಲ್ಯವಾಯಿತು. ಬಾಹ್ಯದಲ್ಲಾಕೆಯು ಆ ವನ ದಲ್ಲಿರುವಾಗಲೇ ತನ್ನ ಸಖಿಯರೆದುರು ವಿಜಯೋತ್ಸಾಹವನ್ನು ತೋರ್ಪಡಿ ಸಿದರೂ ಆಕೆಯಲ್ಲಿಯ ವಿರಹಾಗ್ನಿಯು ಪ್ರಾಬಲ್ಯವಾಗಿ ಅದರಿಂದೆ ಮೂರ್ಛಿತ ಳಾಗಿ ಧರೆಗುರುಳಿದಳು. ಸಹಿಸಲು ಅಸಾಧ್ಯವಾದ ಅಂದರೆ ಮೈಮೇಲೆ ಜೋಳದ ಕಾಳನ್ನಿಡಲು ಅರಳಾಗಿ ಸಿಡಿದು ಬೀಳುವಂಥ ತಾಪವುಳ್ಳ ಜ್ವರ ವುಂಟಾಯಿತು. ಆ ಜ್ವರತಾಪದಿಂದ ಒಂದೇಸವನೆ ಬಡಬಡಿಸ ಹತ್ತಿದಳು.

ಕೂಡಲೆ—ಅವಳ ಸಖಿಯರೆಲ್ಲ ಕೂಡಿ ಆಕೆಯನ್ನು ಒಂದು ಯಾನ ದಲ್ಲಿ ಮಲಗಿಸಿಕೊಂಡು ಅರಮನೆಗೆ ಕರೆದುಕೊಂಡು ಹೋದರು.

ಇಂತಿದೆ-ಶ್ರೀನಿವಾಸ-ಪದ್ಮಾವತಿಯರ ಕಲಹಪ್ರಸಂಗ ವರ್ಣನೆಯು

---

# ೮ನೆಯ ಅಧ್ಯಾಯ

## ಶ್ರೀನಿವಾಸನ ಮನಸ್ಸಿನ ಅಸ್ವಸ್ಥತೆ

ಶ್ರೀನಿವಾಸನು ಪದ್ಮಾವತಿಯೊಡನೆ ಕಲಹಮಾಡಿ ತಾನು ಏರಿದ ಕುದುರೆಯನ್ನು ಕಳಕೊಂಡು ಹಿಂತಿರುಗಿದವನು ವನದಿಂದ ಗಿರಿಯನ್ನೇರಿ ತಾನಿರುವ ಹುತ್ತಿನ ಸ್ಥಳಕ್ಕೆ ಕಾಲ ನಡಿಗೆಯಿಂದಲೇ ಬಂದನು ಆತನಿಗೆ ಪದ್ಮಾವತಿಯಿಂದಾದ ಅಪಮಾನವೆಂಬ ತಾಪವು ಹೆಚ್ಚಾಗಿದ್ದಿತು ತಾನು ಆಕೆಯನ್ನು ಮೋಹಿಸಿದ್ದರಿಂದಾದ ವಿರಹತಾಪವು ಅದಕ್ಕಿಂತಲೂ ಮಿಗಿಲಾದದ್ದಿತ್ತು. ತಾಪದೊಡನೆ ಸಂತಪ್ತನಾದ ಶ್ರೀನಿವಾಸನು ತನ್ನ ಹುತ್ತನ್ನು ಸೇರಿದನು ಹಾಸುಗೆಯಮೇಲೆ ಮುಸುಕು ಹಾಕಿಕೊಂಡು ಮಲಗಿದನು. ಅವನು ನಿದ್ರೆಬಂದು ಮಲಗಿದವನಲ್ಲ ಹಾಗಿದ್ದರೆ ಗಾಢನಿದ್ದೆ ಹತ್ತಿದ್ದರೂ ಕೂಡ ಕರೆದ ಕೂಡಲೆ ಓಗೊಡುತ್ತಿದ್ದನು ಮುಸುಕು ತೆಗೆದು ಮೇಲೇಳುತ್ತಿದ್ದನು

ಶ್ರೀನಿವಾಸನು ಬೇಟೆಯಾಡಿ ಈಗ ಬರುವನು, ಇನ್ನೊಂದು ಅರಗಳಿಗೆಯಲ್ಲಿ ಬರುವನು. ಎಂಬ ಹವಣಿಕೆಯಲ್ಲಿದ್ದ ಬಕುಲಾವತಿಯು ಆತನು ಬರುವ ಮಾರ್ಗದ ಕಡೆಗೇ ನೋಡುತ್ತಿದ್ದಳು. ಅಷ್ಟರೊಳಗಾಗಿ ಹಸಿದು ಬರುವ ಆ ಶ್ರೀನಿವಾಸನಿಗಾಗಿ ಪಥ್ಯಕರವಾದ ಊಟದ ಪದಾರ್ಥಗಳನ್ನು ಸಿದ್ಧಪಡಿಸಿದ್ದಳು. ವನದಿಂದ ಬಂದ ಶ್ರೀನಿವಾಸನು ಆಕೆಯೊಡನೆ ಏನೂ ನುಡಿಯದೆ ನೆಟ್ಟಗೇ ಹೋಗಿ ಹಾಸುಗೆಯಮೇಲೆ ಮುಸುಕು ಹಾಕಿ ಮಲಗಿದನು.

ಪ್ರತಿದಿನವು ತನ್ನ ಸಂಗಡ ಪ್ರೀತಿಯಿಂದ ಮಾತಾಡುವ ಶ್ರೀನಿವಾಸನು ಇಂದು ಮಾತು–ಕತೆಯಾಡದೆ ಮಲಗಿದುದು ಬಕುಲಾವತಿಯ ಮನಸಿಗೆ ಸೊಗಸನ್ನಿಸಲಿಲ್ಲ. ಬೇಟೆಯ ಆಯಾಸವು ಆತನಿಗೆ ಹೆಚ್ಚಾಗಿರಬಹುದು· ಹೊಟ್ಟೆ ಹಸಿದಿರಬಹುದು, ಈ ತರ್ಕದಿಂದ ಬಕುಲಾವತಿಯು ಆತನು ಬಂದ ಕೂಡಲೆ ತಡಮಾಡದೆ ತಾನುಮಾಡಿಟ್ಟ ಅಡಿಗೆಯನ್ನೆಲ್ಲ ಶ್ರೀನಿವಾಸನು ಮಲಗಿದ್ದಲ್ಲಿಯೇ ತೆಗೆದುಕೊಂಡು ಹೋದಳು. ಆತನನ್ನು ಶ್ರೀನಿವಾಸ! ನೀನು

ಏಳಪ್ಪಾ! ಅಡಿಗೆ ಸಿದ್ಧವಾಗಿದೆ ನಿನಗೆ ಬೇಟೆಯ ದಣುವು ಹೆಚ್ಚಾಗಿದ್ದು ವಂತೆ ತೋರುವದು ಊಟಮಾಡಿದರೆ ನಿನ್ನ ದಣಿವೆಲ್ಲ ಹೋಗುವದು ಬಂಗಾರದ ತಟ್ಟೆಯಲ್ಲಿ ಊಟದ ಸಾಮುಗ್ರಿಗಳನ್ನು ಬಡಿಸಿ ಇಟ್ಟಿದೆ. ಬಿಸಿಯಿರುವಾಗಲೆ ಊಟವು ಸೊಗಸನಿಸುವದು ಏಳು ಮಗನೇ ಏಳು ಕೈ-ಕಾಲು ಮೋರೆಗಳನ್ನು ತೊಳೆದುಕೊಳ್ಳು" ಎಂದು ಭೋಜನಕ್ಕಾಗಿ ಎಚ್ಚರಿಸಿದಳು ಆತನನ್ನು ಕರೆಕರೆಯುತ್ತ ತಾಟಿನಲ್ಲಿ ಎಲ್ಲ ಭೋಜನ ಪದಾರ್ಥಗಳನ್ನು ವ್ಯವಸ್ಥಿತವಾಗಿ ಬಡಿಸಿಟ್ಟಳು

ಬಕುಲಾವತಿಯು ಕರೆಗೆ ಶ್ರೀನಿವಾಸನು ಏನೂ ನುಡಿಯಲಿಲ್ಲ ಎದ್ದು ಊಟಕ್ಕೆ ಬರಲಿಲ್ಲ. ಅಷ್ಟೇ ಏಕೆ! ಹಾಕಿದ ಮುಸುಕನ್ನು ಸಹ ತೆರೆಯಲಿಲ್ಲ. ಶ್ರೀನಿವಾಸನ ಆಗಿನ ಸ್ಥಿತಿಯು ಬಕುಲಾವತಿಗೆ ಒಂದು ಸಮಸ್ಯೆಯಾಯಿತು. ಆ ಕೂಡಲೆ ಅವಳು ಆತನ ಸನಿಹಕ್ಕೆ ಬಂದಳು. ಸಂದು ಬಿಡದೆ ಮುಸುಕಿಕ್ಕಿ ಮಲಗಿದ ಆತನನ್ನು ನಿರೀಕ್ಷಿಸಿದಳು ಮತ್ತೂ ಕರೆದಳು ಅವನು ಏಳದ್ದರಿಂದ ಗಾಬರಿಯಾದಳು ತನ್ನ ಕಾಲಿನಿಂದ ಗಟ್ಟಿಯಾಗಿ ಮುಸುಕು ಹಾಕಿಕೊಂಡು ನಿಡಿದಾಗಿ ಉಸುರಾಡಿಸುತ್ತ ಕಣ್ಣೀರು ಸುರಿಸುತ್ತ ಮಲಗಿದ ಶ್ರೀನಿವಾಸನನ್ನು ಆಕೆಯು ಎಬ್ಬಿಸಹತ್ತಿದಳು ಶ್ರೀನಿವಾಸಾ! ನೀನೇಕೆ ಮಲಗಿರುವೆ? ಎಂದೂ ಹಗಲು ಹೊತ್ತಿನಲ್ಲಿ ಮಲಗಿದವನಲ್ಲ; ದುಃಖ-ಶೋಕಗಳನ್ನು ಇದುವರೆಗೆ ನೀನು ಅರಿತವನಲ್ಲ. ನೀನು ಇಂದು ಮನಸಿನಲ್ಲಿ ಕಳವಳಪಡುವ ಕಾರಣವೇನಿರುವದು? ಅದನ್ನೆಲ್ಲ ಬಿಚ್ಚುಮನಸಿನಿಂದ ನನ್ನ ಮುಂದೆ ಹೇಳಬಾರದೇಕ? ಪರಮಾನಂದ ಮೂರ್ತಿಯೇ! ನಿನಗಾಗಿ ರುಚಿಕರವಾದ ಪರಮಾನ್ನವನ್ನು ಸಿದ್ಧಗೊಳಿಸಿ ತಂದಿರುವೆನು ನಿನ್ನ ಪಥ್ಯಕ್ಕೆ ಅವಶ್ಯವಿರುವ ಅಡುಗೆಯನ್ನೆಲ್ಲವನ್ನೂ ತಂದಿರುವೆನು ಇಂದು ನಿನ್ನ ಭೋಜನಕ್ಕೆ ವೇಳೆಯು ಒದಗಾಗಿದೆ ಹಸಿವು ನೀರಡಿಕೆಗಳಿಂದ ನೀನು ಬಳಲಿರುವಿ. ಬೇಗನೆ ಏಳು ಊಟಮಾಡಿ ಶಾಂತಿಯನ್ನು ಹೊಂದು" ಎಂದು ಮಾತನಾಡಿದಳು. ಆದರೂ ಆತನು ಮುಸುಕುತೆರೆಯಲಿಲ್ಲ. ಒಮ್ಮೊಮ್ಮೆ ಗಾಢನಿದ್ರೆ ಹತ್ತಿರುವವನಂತೆಯೂ ನಟಿಸುವನು. ನಿಜವಾಗಿ ನಿದ್ದೆಮಾಡುವವನನ್ನು ಎಚ್ಚರಿಸುವದು ಸುಲಭ. ಆದರೆ ನಿದ್ದೆಯ ಸೋಗು ಹಾಕಿದವನನ್ನು ಎಬ್ಬಿಸುವದು ಕಠಿಣವು. ಬಕುಲಾವತಿಯು ಎಷ್ಟು ಬಾಯಿಬಿಟ್ಟು ಹಲುಬಿದರೂ ಶ್ರೀನಿವಾಸನು ಎಚ್ಚ

ರಾದಂತಾಗಲಿಲ್ಲ ಮೇಲಕ್ಕೇಳಲಿಲ್ಲ, ಆಕೆಗೆ ಏನೂ ಉತ್ತರಕೊಡಲಿಲ್ಲ ಮುಸುಕಿನಲ್ಲಿಯೇ ಬಿಕ್ಕಿ ಬಿಕ್ಕಿ ಅಳಹತ್ತಿದನು. ಇದರಿಂದ ವ್ಯಸನಾಕ್ರಾಂತ ಳಾದ ಬಕುಲಾವತಿಯು ಮತ್ತೆ:—ಸ್ವಾಮಿ ಶ್ರೀನಿವಾಸಾ! ಜಗತ್ತಾಪಹರ! ನಿನ್ನ ಈ ಶೋಕದ ಕಾರಣವೇನು? ಹಸಿವೆಯಿಂದ ತಳಮಳಗೊಂಡಿರುವ ನಿನ್ನನ್ನು ಕುರಿತು ನನಗೆ ಅನಿವಾರ್ಯ ದುಃಖವಾಗಿದೆ. ನೀನು ಈಗ ಎದ್ದು ಊಟಮಾಡಿದರೆ ನನಗೆ ಸಮಾಧಾನವಾಗುವದು ಅಂದು ಅವನ ಹಾಸು ಗೆಯ ಬಳಿನಿಂತು ಕಣ್ಣೀರಿಟ್ಟಳು ಆದರೂ ಇಷ್ಟಕ್ಕೆ ಆಕೆಯು ಬಿಡದೆ ಆತನಿಗೆ— 'ದೇವ! ನೀನು ನಿನ್ನ ಶೋಕದ ಕಾರಣವನ್ನು ನನ್ನ ಮುಂದೆ ಹೇಳಲು ನಿನಗೆ ವಸುದೇವ–ದೇವಕಿಯರ ಆಜ್ಞೆಯಾಗಿದೆ ಎಂದು ತಿಳಿ. ನಿನ್ನ ಪ್ರಿಯ ಬಂಧು ಬಲರಾಮನ ಆಣೆಯಿರುವದೆಂದು ಅರಿ. ನನಗೆ ನಿಜವಾದ ಶೋಕದ ಕಾರಣವನ್ನು ಹೇಳು ಹಾಗು ಏನೊಂದು ಸಂಗತಿಯು ವರ್ತಿಸಿದ್ದರೆ ಅದನ್ನೂ ಹೇಳು ಯಾವುದನ್ನೂ ಬಚ್ಚಿಟ್ಟು ಆಡಬೇಡ ಮಗು! ಇನ್ನೂ ನೀನು ಮೌನತಾಳಿ ಮಲಗುವದರಿಂದ ಆಗುವದೇನು? ಸ್ಪಷ್ಟವಾಗಿ ಮಾತಾಡಿ ನಿನ್ನ ಮನೋಗತವನ್ನು ತಿಳಿಸು ನೀನು ವನದಲ್ಲಿ ಬೇಟೆಗೋಸುಗ ಹೋದಲ್ಲಿ ಕ್ರೂರ ಶ್ವಾಪದಗಳು ನಿನ್ನಮೇಲೆ ಏರಿಬಂದು ನಿನ್ನನ್ನು ಕಾಡಿದವೇ? ಘೋರ ವಾದ ಅರಣ್ಯದಲ್ಲಿ ಚೋರರು ನಿನ್ನನ್ನು ಬಾಧಿಸಿದರೇ? ತಮ್ಮ ಅದೃಷ್ಟ ಶಕ್ತಿ ಯಿಂದ ಮಾನವಪ್ರಾಣಿಗಳನ್ನು ಹೆದರಿಸುವ ಭೂತ–ವೇತಾಳ– ಪಿಶಾಚ್ಚಾದಿ ಗಳು ಪೀಡಿಸಿದವೇ? ನಾನು ಏನೊಂದನ್ನು ಅರಿಯೆನು ಹೀಗೇನಾದರೂ ಭೂತಾದಿಗಳಿಂದ ಅಂಜಿದ್ದರೆ ಯಂತ್ರ, ಮಂತ್ರ, ತಂತ್ರಾದಿಗಳಿಂದ ಆ ಬಾಧೆ ನಿವಾರಿಸುವೆನು, ರಕ್ಷಾಬಂಧನೆಯನ್ನು ಮಾಡುವೆನು ಮಂತ್ರಿತ ಭಸ್ಮ ವನ್ನು ನಿನ್ನಮೇಲೆ ಹಾರಿಸುವೆನು ಗಿಡ–ಮೂಲಿಕೆಗಳನ್ನು ಬಳಿಸಿ ನಿನ್ನ ಮನಸ್ಸಿನ ಹಾಗು ಶರೀರದ ವ್ಯಥೆಯನ್ನು ಕಳೆಯುವೆನು ಏಳು ಶ್ರೀನಿವಾಸಾ ಎದ್ದೇಳು." ಎಂದು ನುಡಿದಳು ಅಲ್ಲದೆ ಬಕುಲಾವತಿಯು ಮತ್ತೆ ಮೃದು ಮಾತಿನಿಂದ—' ಮಗನೇ! ನೀನು ವನದಲ್ಲಿ ಯಾವಳೊಬ್ಬ ಮಾನವ ಕನ್ಯೆ ಯನ್ನು ಕಂಡಿಯಾ! ಗಂಧರ್ವ ನಾರಿಯರನ್ನು ಕಂಡು ಮೋಹಿಸಿದಿಯಾ, ಅಂಥವರನ್ನು ನೋಡಿ ವಿರಹ ವೇದನೆಯನ್ನು ತಾಳಿರುವಿಯಾ! ಶ್ರೀನಿವಾಸಾ! ಹೇಳು ಏನೂ ಅಂದೇಶವಿಲ್ಲದೆ ನನ್ನ ಮುಂದೆ ಹೇಳು ನೀನು ನೋಡಿದ ಅಂಥ ಪುಣ್ಯವಂತೆ ಕನ್ನಿಕೆಯಾವಳಾಗಿದ್ದರೂ ನೀನು ಬಯಸಿದಂತೆ ನಿನ್ನ

ಕಾರ್ಯವು ಕೈಗೂಡುವಂತೆ ಮಾಡುವೆ. ನಿನ್ನನ್ನು ಮೋಹಪಡಿಸಿದ ಅಂಥ ಮೋಹಿನೀ ಸ್ವರೂಪದ ಕನ್ನಿಕೆಯಾವಳಾದರೂ ಇದ್ದರೆ ನನಗೆ ಈಗಲೆ ತಿಳಿಸು. ” ಎಂದು ಕೇಳಿದಳು ಇದಕ್ಕೂ ಶ್ರೀನಿವಾಸನು ಮೌನತೆಯನ್ನು ತೊರೆಯಲಿಲ್ಲ ಮುಸುಕು ತೆರೆದು ಮಾತಾಡಲಿಲ್ಲ

ಇದುವರೆಗೆ ಬಕುಲಾವತಿಯು ಆತನ ಸನಿಹದಲ್ಲಿ ನಿಂತು ಮಾತನಾಡಿದಳು. ಹಲವು ಪ್ರಶ್ನೆ ಕೇಳಿದಳು ಅವನಿಂದ ಪ್ರತಿಯಾಗಿ ಮಾತು ಹೊರಡಲಿಲ್ಲ. ಉತ್ತರ ದೊರೆಯಲಿಲ್ಲ. ನಿಜವಾಗಿ ಶ್ರೀನಿವಾಸನಿಗೆ ದೇಹದಲ್ಲಿ ಸಹಿಸಲಾರದ ಜ್ವರವು ನೆತ್ತಿಗೆ ಏರಿರಲಿಕ್ಕೆಬೇಕು. ಎಂಬದಾಗಿ ತಿಳಿದು ಆಕೆಯು ಆತನ ಮುಸುಕನ್ನು ಓರೆಮಾಡಿ ಮೈಮೇಲೆ ಕೈಯಾಡಿಸಿದಳು. ಮೈಯೆಲ್ಲ ಜೋರನೆ ಬೆವತಿತ್ತು. ಆತನ ಕಣ್ಣೀರು ಧಾರೆಗಟ್ಟಿ ಹರಿಯುತ್ತಿತ್ತು ಆಕೆಯು ತನ್ನ ಕೈಯಿಂದ ಬೆವರನ್ನೂ ಕಣ್ಣೀರನ್ನೂ ಒರೆಸಿದಳು ಮಾರ್ಗಾಯಾಸದಿಂದ ದಣಿದ ಆತನ ಪಾದಗಳನ್ನು ಒತ್ತಿದಳು ಮತ್ತು ಆಕೆಯು ಆತನನ್ನು ಕುರಿತು ಮೊದಲಿನಂತೆ ಅವನ ಶೋಕಕಾರಣವನ್ನು ಕೇಳುತ್ತ ತಾನೂ ಕಣ್ಣೀರಿಡಹತ್ತಿದಳು ಆಗ ಶ್ರೀನಿವಾಸನು ತನ್ನ ಅರಗಣ್ಣಿನಿಂದ ದುಃಖಪೂರಿತೆಯಾದ ಬಕುಲಾವತಿಯನ್ನು ನೋಡಿದನು. ಮನಸ್ಸಿನಿಂದ ಕರಗಿದವನಾದನು. ಅಗ ಆತನು ಮಾತೃವಾತ್ಸಲ್ಯವನ್ನು ತಂದುಕೊಂಡು ಬಕುಲಾವತಿಗೆ—‘ ತಾಯಿ, ನಾನು ಇಂದು ವನದಲ್ಲಿ ಯಾವ ಋಷಿಕನ್ಯೆಯನ್ನು ಕಾಣಲಿಲ್ಲ. ರಾಕ್ಷಸಿಯನ್ನೂ ನೋಡಲಿಲ್ಲ ಗಂಧರ್ವನಾರಿಯೂ ತೋರಲಿಲ್ಲ ನೀನಾಡಿದಂತೆ ಭೂತ–ವೇತಾಳ–ಪಿಶಾಚ್ಯಾದಿಗಳು ನನ್ನಿಂದಲೇ ದೂರಾಗಿ ಹೋಗುತ್ತವೆಂದಮೇಲೆ ಅವುಗಳ ಬಾಧೆಯೂ ನನಗಾಗಲಿಲ್ಲ. ಇನ್ನು ಉಳಿದ ಉಪದ್ರವಗಳೆಲ್ಲ ನನ್ನ ಸ್ಮರಣೆಯಿಂದ ದಿಕ್ಕೆಟ್ಟು ಓಡಿಹೋಗುವವೆಂದಮೇಲೆ ಅವುಗಳ ಅಂಜಿಕ ನನಗಾಗಲಿಲ್ಲ ಬಹಳ ಹೇಳುವದೇನು? ತಾಯಿೊ ನನಗೆ ಸಾವಿನ ಅಂಜಿಕೆ ಸ್ವಲ್ಪವೂ ಇರುವದಿಲ್ಲ ಯಾಕಂದರೆ ನಾನು ಕಾಲನಿಗೆ ಕಾಲಸ್ವರೂಪನಾಗಿರುವೆ. ನೀನು ಇದನ್ನು ತಿಳಿಯಲಾರೆ. ಇವಾವ ಕಾರಣಗಳಿಂದಲೂ ನನಗೆ ವ್ಯಸನವಾಗಿರಲಿಲ್ಲ. ಆದರೆ–ಇಂದಿನ ನನ್ನ ಮನಸಿನ ತಳಮಳಕ್ಕೆ ಉಂಟಾದ ಕಾರಣವನ್ನು ಕೇಳು. ನೀನು ತಾಯಿಯ ಸ್ವರೂಪಳೆಂದೇ ತಿಳಿದು ಹೇಳುವೆನು. ಅದನ್ನು ಕೇಳಿ

ನೀನು ನನ್ನನ್ನು ಮೂರ್ಖನೆಂದು ಹಳಿಯಲಿಕ್ಕಿಲ್ಲ ಎಂಬ ಭರವಸೆ ನನಗಿದೆ. ಇಷ್ಟೇಅಲ್ಲ. ನನ್ನ ಕಾರ್ಯವೂ ಕೂಡ ನಿನ್ನಿಂದಲೇ ಸಾಧ್ಯವಾಗುವದೆಂಬ ವಿಧಿಯೂ ಇರುವದು. ಅದು ತಪ್ಪಲಾಗದು. ಇನ್ನು ಆ ನನ್ನ ವ್ಯಸನದ ಕಾರಣವೆಂದರೆ—

"ಇಂದು ನಾನು ನಿನ್ನ ನಿರೋಪ ಪಡೆದು ಬೇಟೆಗಾಗಿ ವನಕ್ಕೆ ಹೋದೆ ನಲ್ಲವೇ ? ಅರಣ್ಯದಲ್ಲಿ ನನ್ನ ಮನದಣಿಯುವಂತೆ ಬೇಟೆಯಾಡಿದೆ. ಹಲವು ವನ್ಯ ಮೃಗಗಳನ್ನು ಸಂಹರಿಸಿದೆ. ಮತ್ತಗಜವನ್ನು ಬೆನ್ನಟ್ಟಿ ಓಡಿಸಿದೆ ಒಟ್ಟಿನಲ್ಲಿ ಹೇಳುವದಾದರೆ ಮೃಗಯಾ ವ್ಯಸನವನ್ನು ನಾನು ಕೊನೆಗಾಣಿಸಿಕೊಂಡೆನು. ಆದರೆ ಅದರ ಬದಲು ಇನ್ನೊಂದು ವ್ಯಸನಮಾತ್ರ ನನ್ನಲ್ಲಿ ಮೂರ್ತಿಮತ್ತಾಗಿ ಸೇರಿತು ಅದೇನೆಂದರೆ— 'ತಾಯಿ ! ನಾನು ವನಕ್ಕೆ ಹೋದ ಸಮಯದಲ್ಲಿ ಒಂದು ಮದ್ದಾನೆಯನ್ನು ಬೆನ್ನಟ್ಟಿಹೋದೆ. ಈ ಗಿರಿಯನ್ನಿಳಿದು ತಟದಲ್ಲಿಯ ವನವೊಂದರಲ್ಲಿ "ಪದ್ಮಾವತಿ" ಎಂಬ ರಾಜ ಕನ್ನಿಕೆಯೊಬ್ಬಳನ್ನು ಕಣ್ತುಂಬ ನೋಡಿದೆನು ಅದರಿಂದ ನನಗೆ ಹುಚ್ಚು ಹಿಡಿದಂತಾಯಿತು. ತಾಯಿ ! ಆಕೆಯ ಚೆಲುವಿಕೆಯನ್ನು ಒಂದೇನುಡಿಯಲ್ಲಿ ಹೇಳುವದಾದರೆ 'ಲಕ್ಷ್ಮೀದೇವಿ'ಯ ಚೆಲುವಿಕೆಯನ್ನೇ ಆಕನ್ನಿಕೆಯು ಎಲ್ಲ ರೀತಿಯಿಂದಲೂ ಹೊಂದಿಕೊಂಡಿರುವಳು." ಎಂದು ಹೇಳಿದನಲ್ಲದೆ 'ತಾಯಿ ಆ ಕನ್ನಿಕೆಯ ಸಲುವಾಗಿಯೇ ನನ್ನನ್ನು ಈ ಅವಸ್ಥೆಯು ಅಂಟಿಕೊಂಡಿದೆ. ಜನ್ಮಾಂತರದಲ್ಲಿ ಸುಕೃತವನ್ನು ಮಾಡಿದವನಿಗೇ ಆ ಕನ್ನಿಕೆಯು ದೊರಕುವಳು. ಇಂದು ಆ ಪದ್ಮಾವತಿಯನ್ನು ನೋಡಿ ನಾನು ಧನ್ಯನಾದೆ, ನಾನೇ ಪುಣ್ಯವಂತನೆಂದು ಅರಿತೆ. ಬಲವತ್ತರವಾದ ನನ್ನ ಆಶೆಯಂತೆ ಆ ಕನ್ಯೆಯು ನನ್ನನ್ನು ವರಿಸಿದರೆ ನನ್ನ ಭಾಗ್ಯವು ಅಮೂಲ್ಯವಾಗುವದು ತಾಯಿ ! ಬಕುಲಾವತಿ; ಆ ಕನ್ಯೆಯನ್ನು ಅನ್ನಪಾನಾದಿಗಳನ್ನು ತೊರೆದ ಜಡಮತಿಯು ಮಾತ್ರ ನಿರಪೇಕ್ಷನಾಗಿ ನೋಡುವನೇ ಹೊರತು ಉಳಿದ ಯಾವ ಮನುಷ್ಯನೂ ಆಕೆಯನ್ನು ಅಪೇಕ್ಷಿಸದೆ ಇರಲಾರನು. ಅವಳೊಡನೆ ನನ್ನ ವಿವಾಹವಾದರೇನೇ ಮಾತ್ರ ನನಗೆ ಸೌಖ್ಯವು. ಇಲ್ಲದೆ ಹೋದರೆ ಈ ಅಶಾಶ್ವತ ಶರೀರದಿಂದ ಉಪಯೋಗವೇನು ? ಆದುದರಿಂದ ನೀನು ನಿನ್ನ ಬುದ್ಧಿಬಲವನ್ನು ಉಪಯೋಗಿಸಿ ನನಗೆ ಆ ಪದ್ಮಾವತಿಯ ಘಟನೆಯು ಒದಗುವಂತೆಮಾಡು. ಇದು

ನಿನ್ನಿಂದಾಗದಿದ್ದರೆ ನಾನು ಜೀವದಿಂದ ಇರುವದು ಶಕ್ಯವಿಲ್ಲೆಂದು ತಿಳಿ ಆಕೆಯು ತನ್ನ ಗೆಳತಿಯರಿಂದ ಕೂಡಿಕೊಂಡು ನನ್ನ ಹಾಗು ನಾನು ಏರಿದ ಕುದುರೆಯ ಮೇಲೆ ಕಲ್ಲುಗಳನ್ನು ತೂರಿದಳು. ದುರ್ದೈವದಿಂದ ಅವರ ಕಲ್ಲು ತಾಕಿ ನನ್ನ ಕುದುರೆಯು ಅಲ್ಲಿಯೇ ಪ್ರಾಣನೀಗಿತು ತಾಯಿ! ಆ ಕುದುರೆಯ ಗತಿಯು ನನಗೇ ಪ್ರಾಪ್ತವಾಗಿದ್ದರೆ ನಿನ್ನ ಮುಂದೆ ನನ್ನ ಈಗಿನ ಪ್ರಶ್ನ ಬೀಳುತ್ತಿರಲಿಲ್ಲ." ಇಷ್ಟು ಶ್ರೀನಿವಾಸನು ನುಡಿಯುವಷ್ಟರಲ್ಲೇ ಬಕುಲಾವತಿಯು— 'ಒಳಿತು' ಶ್ರೀನಿವಾಸಾ 'ಒಳಿತು' ಅನ್ನು. ಹೀಗೆ ಅಭದ್ರನುಡಿಯನ್ನು ನುಡಿಯಬಾರದಪ್ಪಾ, ನನ್ನ ಬುದ್ಧಿ ಶಕ್ತಿಯನ್ನೆಲ್ಲ ಪ್ರಯೋಗಿಸಿ ಆ ಕನ್ಯೆಯನ್ನು ನಿನಗಾಗಿ ದೊರಕಿಸುವೆನು ನೀನು ಏನೂ ಚಿಂತಿಸುವ ಕಾರವಿಲ್ಲ. ನಿನ್ನ ಕಲ್ಯಾಣದ ಬಯಕೆಯೇ ನನ್ನದಾಗಿರುವದು " ಎಂದು ಹೇಳಿ ಶ್ರೀನಿವಾಸನನ್ನು ಭೋಜನಕ್ಕಾಗಿ ಆಗ್ರಹ ಪಡಿಸಹತ್ತಿದಳು ಆಗ ಬಕುಲಾವತಿಯ ಆಶ್ವಾಸನ ಯುಕ್ತವಾದ ಮಾತುಗಳನ್ನು ಕೇಳಿ ಶ್ರೀನಿವಾಸನು ಹರುಷಿತನಾಗಿ ಆಕೆಗೆ ಮತ್ತೂ ಕೆಲವು ಮಾತುಗಳನ್ನು ಹೇಳಹತ್ತಿದನು

" ತಾಯಿ ನನಗಾಗಿ ನೀನು ಪ್ರಯತ್ನಬಟ್ಟು ಆ ಕನ್ಯೆಯನ್ನು ದೊರಕಿಸಿದೆಯಾದರೆ ನೀನು ನಿಶ್ಚಯವಾಗಿ ಸ್ವರ್ಗವನ್ನು ಹೊಂದುವಿ; ಆ ಪದ್ಮಾವತಿಯ ಸಲುವಾಗಿಯೇ ನಾನು ಈ ವೇಂಕಟಾಚಲದಲ್ಲಿ ಅವತರಿಸಿರುವೆನೆಂದು ತಿಳಿ ನಾನು ನಿನ್ನನ್ನು ಅನ್ಯಳೆಂದು ಭಾವಿಸಿಲ್ಲ, ನನ್ನ ತಾಯ್ತಂದೆ, ಬಂಧು-ಬಳಗ ನೀನೆ ಎಂದು ನಂಬಿರುವೆನು ಪ್ರಹ್ಲಾದ, ಅಕ್ರೂರ ಮೊದಲಾದ ಭಕ್ತ ಶಿರೋಮಣಿಗಳು ನೀನೇ ನನ್ನ ಪ್ರಾಣಕ್ಕೆ ಸಮಾನವಾದ ಭಕ್ತಾಭಕ್ತರೆಲ್ಲರು ನೀನೆ ಬಹಳವೇಕೆ? ನನ್ನ ಸರ್ವಸ್ವವೆಂದರ ನೀನೇ ಆಗಿರುವಿ ನನ್ನ ಕಲ್ಯಾಣಕ್ಕಾಗಿಯೇ ನಿನ್ನ ಜನನವಾಗಿದೆ ಎಂದು ನನ್ನ ದೃಢಭಾವನೆಯಾಗಿದೆ. ನಾನು ಬಯಸಿದ ಪದ್ಮಾವತಿಯೊಡನೆ ನೀನು ನನ್ನ ಲಗ್ನಮಾಡಿದ್ದಾದರೆ ನೀನು ಹೆಚ್ಚಿನ ಪುಣ್ಯಪಡೆಯುವಿ ಶಾಸ್ತ್ರಗಳಲ್ಲಿ ಲಗ್ನಮಾಡಿದವರಿಗೆ ಪ್ರಾಪ್ತವಾಗುವ ಪುಣ್ಯವನ್ನು ಒಂದು ಅಳತೆಯಿಂದ ಹೇಳಿದೆ ಸಾವಿರ ಕೋಟಿ ಸಂಖ್ಯೆಯಷ್ಟು ಆಕಳುಗಳನ್ನು ದಾನಮಾಡಲು ಬರುವ ಪುಣ್ಯದಷ್ಟೇ ಪುಣ್ಯವು ಒಂದೇ ಒಂದು ಲಗ್ನಮಾಡುವದರಿಂದ ಬರುವದು ಅದರಂತೆ ಹತ್ತುಸಾವಿರ ಕುದುರೆಗಳನ್ನೂ ಬಂಗಾರದ ಎಳ್ಳನ್ನೂ ದಾನಕೊಡುವದರಿಂದ

ಬರುವ ಫಲದಷ್ಟೇ ಫಲ ದೊರೆಯುವದೆಂದು ಹೇಳಿದೆ. ಇದೆಲ್ಲವನ್ನು ನೀನು ತಿಳಿದುಕೊಂಡು ನೀನು ಇನ್ನುಮೇಲೆ ಅವಕಾಶವನ್ನು ಮಾಡದೆ ನನ್ನ ಕಲ್ಯಾಣಕ್ಕಾಗಿ ಪದ್ಮಾವತಿಯನ್ನು ದೊರಕಿಸಿ ನನ್ನ ವಿವಾಹವನ್ನುಮಾಡು" ಎಂದನು. ಇದನ್ನೆಲ್ಲ ಬಕುಲಾವತಿಯು ಕೇಳಕೇಳುತ್ತಲೆ ತನ್ನ ಒಪ್ಪಿಗೆಯನ್ನು ಸೂಚಿಸುತ್ತ ಕುಳಿತಿರುವಳು ಶ್ರೀನಿವಾಸನು ಮತ್ತೂ ಬಿಡದೆ ತಾಯಿ! ನೀನು ಆ ಪದ್ಮಾವತಿಯನ್ನು ಕಣ್ಮುಟ್ಟ ನೋಡಿದರೆ ನನಗಾಗಿ ನೀನು ಅವಳನ್ನು ದೊರಕಿಸದೆ ಎಂದೂ ಬಿಡುತ್ತಿರಲಿಲ್ಲ ನಾನು ಹೇಳುವ ಆ ಪದ್ಮಾವತಿಯ ಚೆಲುವಿಕೆಯ ಸತ್ಯಾಸತ್ಯತೆಯನ್ನು ನೀನು ಒರೆಗೆ ಹಚ್ಚು" ಈ ಪ್ರಕಾರವಾಗಿ ಶ್ರೀನಿವಾಸನು ಬಕುಲಾವತಿಗೆ ಪದ್ಮಾವತಿಯ ರೂಪು-ಲಾವಣ್ಯಾದಿಗಳನ್ನು ಬಣ್ಣಿಬಣ್ಣಿಸಿ ಹೇಳಹತ್ತಿದನು. ಬಕುಲಾವತಿಯು ಲಕ್ಷ್ಯಪೂರ್ವಕವಾಗಿ ಕೇಳಿದಳು ಹಾಗು 'ನಾನು ಇನ್ನು ಮೇಲೆ ತಡಮಾಡುವದು ಯೋಗ್ಯವಾಗಲಾರದು' ಎಂದು ವಿಚಾರಿಸಿ ಪದ್ಮಾವತಿಯ ಪ್ರಾಪ್ತಿಗಾಗಿ ಶುಭದಿನ ನೋಡಿಕೊಂಡು ಹೊರಡುವ ನಿರ್ಧಾರಕ್ಕೆ ಬಂದಳು.

ಬಕುಲಾವತಿಯು ತಾನು ಹೊರಡುವ ಮೊದಲು ಶ್ರೀನಿವಾಸನಿಗೆ— 'ಪದ್ಮಾವತಿಯು ಎಲ್ಲಿರುವಳು? ಅವಳಿದ್ದಲ್ಲಿ ನಾನು ಹೋಗುವ ಮಾರ್ಗ ಯಾವುದು? ಎಂದು ಕೇಳಿದಳು ಅಲ್ಲದೆ ಅವಳು 'ಶ್ರೀನಿವಾಸ! ಆ ಪದ್ಮಾವತಿಯೂ ಪೂರ್ವಜನ್ಮದಲ್ಲಿ ಯಾವಳಾಗಿದ್ದಳು? ಈ ಜನ್ಮದಲ್ಲಿ ಈ ಲೋಕದಲ್ಲೇ ಯಾಕೆ ಹುಟ್ಟಿದಳು? ಇವೆಲ್ಲ ಸಂಗತಿಗಳನ್ನು ನನಗೆ ತಿಳಿಸು" ಎಂದು ಕೇಳಿದಳು. ಆಕೆ ಉತ್ಸುಕತೆನೋಡಿ ಶ್ರೀನಿವಾಸನು ತನ್ನ ಕಾರ್ಯವು ಇನ್ನು ಬೇಗನೆ ಜರುಗಲು ಬಕುಲಾವತಿಯ ಪ್ರಯಾಣದಿಂದ ಆರಂಭವಾಗುವದೆಂದು ಬಗೆದನು. ಹಾಗು ಬಕುಲಾವತಿಯು ಕೇಳಿದಂತೆ ಅವಳಿಗೆ ಎಲ್ಲ ಸಂಗತಿಯನ್ನು ತಿಳಿಯುವಂತೆ ಹೇಳಿದನು. ಅವನು ಪದ್ಮಾವತಿಯ ಪೂರ್ವಜನ್ಮದ ಮೊದಲುಮಾಡಿ ಇದುವರೆಗಿನ ಆಕೆಯ ಚರಿತ್ರೆಯನ್ನು ಹೇಳಿದನು. ಅದು ಎಂತೆಂದರೆ—

# ಶ್ರೀನಿವಾಸನ ಪೂರ್ವಾವತಾರ

ನಾನು ನನ್ನ ಅವತಾರಗಳಲ್ಲಿ ಒಂದಾದ ರಾಮಾವತಾರವನ್ನು ಹೊಂದಿ ತ್ರೇತಾಯುಗದಲ್ಲಿ ಪ್ರಸಿದ್ಧನಾದೆನು ಆಗ ನಾನು ಅಯೋಧ್ಯಾ ನಗರದ ದಶರಥ ರಾಜನ ಜ್ಯೇಷ್ಠಪುತ್ರನಾಗಿ ಜನಿಸಿದೆನು ರಾಮನೆಂಬ ಹೆಸರಿನಿಂದ ಖ್ಯಾತಿಪಡೆದನು ನನ್ನ ಧರ್ಮಪತ್ನಿ ಸೀತೆ ಹಾಗು ಪ್ರೇಮದ ಸಹೋದರ ಲಕ್ಷ್ಮಣ ಇವರನ್ನು ಸಂಗಡ ಕರೆದುಕೊಂಡು ದಂಡಕಾರಣ್ಯಕ್ಕೆ ಹೊರಟೆನು ಹಿರಿಯರ ಆಜ್ಞೆಯನ್ನೂ ಅವರ ವಚನವನ್ನೂ ಪೂರ್ಣ ಮಾಡುವದೇ ನನ್ನ ವನವಾಸದ ಉದ್ದೇಶವಾಗಿತ್ತು ನಾವು ವನದಲ್ಲಿ ಇರುವಾಗ ದೇವ–ಮಾನವರನ್ನು ಪೀಡಿಸಿಂತ ರಾವಣನೆಂಬ ದುಷ್ಟರಾಕ್ಷಸನು ನನ್ನ ಪ್ರಿಯಸತಿಯನ್ನು ಹರಣಮಾಡಿದನು ಆತನು ಈ ಕ್ರಿಯೆಯಲ್ಲಿ ಕೇವಲ ಮೋಸಗಾರಿಕೆಯನ್ನು ಬಳಸಿದನು ನನ್ನನ್ನೂ ಲಕ್ಷ್ಮಣನನ್ನೂ ಸೀತೆಯಿಂದ ದೂರವಾಗಿ ಅಂತರಿಸಿದನು ಅವಳನ್ನು ಆಕಾಶಮಾರ್ಗವಾಗಿ ಕರೆದುಕೊಂಡು ಲಂಕೆಗೆ ಒಯ್ದನು. ನಾನು ಆಶ್ರಮಕ್ಕೆ ಬಂದು ನೋಡಲು ಅಲ್ಲಿ ಸೀತೆಯಿರಲಿಲ್ಲ ಆಕೆಯನ್ನು ರಾವಣನು ಒಯ್ದ ಸಂಗತಿಯು ಜಟಾಯುವಿನಿಂದ ನಾನು ಅರಿತೆನು

ಸೀತೆಯನ್ನು ರಾವಣನು ಒಯ್ಯುತ್ತಿರುವಾಗ ಆಕೆಯು ಶೋಕಪೂರಿತ ಸ್ವರದಿಂದ ' ಹಾ ! ರಾಮಾ ಹಾ ! ಲಕ್ಷ್ಮಣಾ , ಎಂದು ಜೋರಾಗಿ ಅಳುತ್ತಿದ್ದಳು ಆಕೆಯ ಆ ಆರ್ತಸ್ವರವು ಪಾತಾಳಲೋಕದಲ್ಲಿರುವ ಅಗ್ನಿಯ ಕಿವಿಗ ಬಿದ್ದಿತು ಆ ಕೂಡಲೆ ಅಲ್ಲಿಂದ ಹೊರಬಿದ್ದನು ಭೂಲೋಕಕ್ಕೆ ಬಂದನು ಸೀತೆಯು ಅಳುತ್ತಿರುವಲ್ಲಿಗೆ ಹೋದನು. ರಾವಣನು ಆಕೆಯನ್ನು ತನ್ನ ಬಲವಂತಿಕೆಯಿಂದ ವಿಮಾನದಲ್ಲಿ ಕುಳ್ಳಿರಿಸಲು ಹವಣಿಸ ಹತ್ತಿರುವನು ಸೀತೆಯು ಅವನನ್ನು ಧಿಕ್ಕರಿಸುತ್ತಿರುವಳು ಈ ಸ್ಥಿತಿಯನ್ನು ಕಂಡು ಅಗ್ನಿಯು ಮನಸಿನಲ್ಲಿ 'ನಾನು ಇಲ್ಲಿ ರಾವಣನಿಗೆ ವಂಚನೆಯನ್ನು ಮಾಡದೆ ಇದ್ದರೆ ಈ ಸಾಧ್ವೀಮಣಿಯ ಬಿಡುಗಡೆಯಾಗುವದಿಲ್ಲ. ' ಎಂದು ವಿಚಾರಿಸಿ ರಾವಣನ ಸನಿಹಕ್ಕೆ ಬಂದನು ಹಾಗು ಅವನನ್ನು ಕುರಿತು— ' ಲಂಕಾಧಿಪ ! ಇದೇನು ನಿನ್ನ ತಿಳಿಗೇಡಿತನದ ಸಾಹಸವು ? ನೀನು ಈ ಬ್ರಾಹ್ಮಣ ಸ್ತ್ರೀಯಳನ್ನು ಬಲಾತ್ಕರಿಸುವದು ಪಾಪವಲ್ಲವೇ ? ಎಂದನು ಆಗ ರಾವಣನು– ' ಅಗ್ನಿದೇವ!

ಇವಳು ಬ್ರಾಹ್ಮಣಿತಿಯಲ್ಲ. ನನ್ನ ಸಹೋದರಿಯ ಕಿವಿ–ಮೂಗುಗಳನ್ನು ಕೊಯ್ದ ಲಕ್ಷ್ಮಣನಅಣ್ಣ ರಾಮನ ಹೆಂಡತಿ ಸೀತೆ. ಕ್ಷತ್ರಿಯ ಕುಲಜಳೆಂಬ ದನ್ನು ನೀನು ತಿಳಿಯಲಾರೆಯಾ! ನಮ್ಮ ಶೂರ್ಪನಖಿಯನ್ನು ಅಪಮಾನ ಕ್ಕೀಡುಮಾಡಿದ ಸೇಡನ್ನು ನಾನು ಈ ಸೀತೆಯನ್ನು ಅಪಹರಿಸಿಕೊಂಡು ಒಯ್ದೀತೀರಿಸಿಕೊಳ್ಳುವೆನು' ಎಂದನು. ಆಗ ಅಗ್ನಿಯು– ರಾವಣ! ಇಲ್ಲಿಯೇ ನೀನು ವಿಚಾರ ತಪ್ಪಿದೆ. ನಿಜವಾಗಿ ಇವಳು ಸೀತೆಯಲ್ಲ, ಶೂರ್ಪನಖಿಯ ಪ್ರಸಂಗದಿಂದ ರಾಮನೂ ಕೂಡ ನಿನ್ನಿಂದ ಭಯಭೀತನಾದನು. ತನ್ನ ಸ್ತ್ರೀಯಳಿಗೂ ಆಕೆಯಂತೆ ಅವಮಾನ ಹೊಂದುವ ಪ್ರಸಂಗವು ಬರಬಾರದೆಂಬ ಭಯದಿಂದ ಗುಪ್ತವಾಗಿ ತಂದು ನನ್ನಲ್ಲಿ ಇರಿಸಿರುವನು. ಹಾಗು ನಿನ್ನನ್ನು ಮೋಸಗೊಳ್ಳಿಸುವ ಕುರಿತು ಸೀತಾವೇಷದ ಈ ಬ್ರಾಹ್ಮಣ ಸ್ತ್ರೀಯಳನ್ನು ತನ್ನ ಕುಟೀರದಲ್ಲಿ ಇಟ್ಟುಕೊಂಡು ಪಂಚವಟಿಯಲ್ಲಿ ಸಂಚರಿಸುವನು. ಅವನ ಈ ಕೃತಿಯಿಂದ ನೀನು ಮೋಸಹೊಂದಿದಿ. ನೀನು ನನ್ನ ಶಿಷ್ಯತ್ವವನ್ನು ಒಪ್ಪುವಿ. ಆದುದರಿಂದ ನಿನಗೆ ಅನುಕೂಲವಾಗಿ ವರ್ತಿಸುವ ಆಶೆ ನನಗಿರು ವದು. ನೀನು ನನ್ನ ಸಂಗಡ ಬಂದು ನನ್ನಲ್ಲಿರುವ ನಿಜವಾದ ಸೀತೆಯನ್ನು ತೆಗೆದುಕೊಂಡು ಹೋಗು' ಎಂದು ಹೇಳಿದನು. ರಾವಣನು ಅಗ್ನಿದೇವನ ಮಾತಿನ ಮೇಲೆ ವಿಶ್ವಾಸವಿಟ್ಟನು. ಅಪಹರಿಸಿ ತಂದ ಸೀತೆಯನ್ನು ಬ್ರಾಹ್ಮಣ ಸ್ತ್ರೀಯಳೇ ಎಂದು ನಿಶ್ಚಯಿಸಿ ಆಕೆಯನ್ನು ಬಿಟ್ಟುಬಿಟ್ಟನು. ರಾವಣನಿಂದ ಬಿಡಲ್ಪಟ್ಟ ನಿಜವಾದ ಸೀತಾದೇವಿಯು ಆ ಕೂಡಲೆ ಕೈಲಾಸಕ್ಕೆ ಹೋಗಿ ಬಿಟ್ಟಳು.

ರಾವಣನು ಅಗ್ನಿಯ ಮಾತನ್ನುನಂಬಿ ಸೀತೆಯನ್ನು ತಕ್ಕೊಂಡು ಹೋಗುವ ಕುರಿತು ಅವನೊಡನೆ ಪಾತಾಳಲೋಕಕ್ಕೆ ಬಂದನು. ಅವಕ್ಕೂ ಮೊದಲೇ ಅಗ್ನಿಯು ತನ್ನ ಮಾಯಾಶಕ್ತಿಯನ್ನು ಉಪಯೋಗಿಸಿದನು. ಕೃತ ಯುಗದಲ್ಲಿ ಅವತರಿಸಿದ 'ವೇದವತಿ' ಎಂಬವಳನ್ನು ಸೀತೆಯ ಸ್ವರೂಪಕ್ಕೆ ಸಮನಾಗಿ ಮಾಡಿದನು. ಹಾಗು ಅವಳನ್ನು ತನ್ನ ಹೆಂಡತಿ ಸ್ವಾಹಾದೇವಿಯ ಬಳಿಯಲ್ಲಿ ಕುಳ್ಳಿರಿಸಿದ್ದನು

ರಾವಣನು ಅಗ್ನಿಯ ಮಂದಿರವನ್ನು ಸೇರಿದನು. ತನ್ನಲ್ಲಿ ಬಂದ ರಾವ-ಣನಿಗೆ ಅಗ್ನಿಯು ಆದರೋಪಚಾರದ ಸಿದ್ಧತೆ ನಡೆಯಿಸಿದನು. ಆದರೆ

ಸೀತಾಹರಣದ ಕ್ರಿಯೆಯಲ್ಲಿ ಆತುರವುಳ್ಳ ರಾವಣನು ಆ ಮರ್ಯಾದೆಗಳನ್ನು ಸ್ವೀಕರಿಸಲಿಲ್ಲ. ಕೂಡಲೆ ಸ್ವಾಹಾದೇವಿಯು ಹತ್ತಿರದಲ್ಲಿ ಮರ್ಯಾದೆಯಿಂದ ಕುಳಿತಿರುವ ಸೀತಾಸ್ವರೂಪದ 'ವೇದವತಿಯನ್ನು ಅಹಮತ್ತಾಗಿ ಎತ್ತಿಕೊಂಡು ನಡೆದನು. ಆಗ ರಾವಣನು ಅಗ್ನಿಯಿಂದ ನಿರೋಪವನ್ನು ಸಹ ಪಡೆಯಲಿಲ್ಲ. ಹಾಗೇ ಗಗನಮಾರ್ಗದಿಂದ ವಿಮಾನದಲ್ಲಿ ವೇದವತಿಯನ್ನು ಕುಳ್ಳಿರಿಸಿ ಕೊಂಡು ನಡೆದನು.

ರಾವಣನು ಮಾಯಾ ಸೀತೆ ಸಹಿತವಾಗಿ ಲಂಕೆಗೆ ಬಂದನು. ಆಕೆ ಯನ್ನು ತನ್ನ ಅಶೋಕವನದಲ್ಲಿ ಒಯ್ದು ಇಟ್ಟನು. ಕಾವಲಿಗಾಗಿ ರಾಕ್ಷಸಿ ಯರನ್ನು ಅಲ್ಲಿ ಇರಿಸಿದನು ಸೀತೆಯನ್ನು ಅಪಹರಿಸಿ ತಂದು ತಾನು ಕೃತ ಕೃತ್ಯನಾದೆನೆಂದು ಹಿಗ್ಗಿದನು ಮನುಷ್ಯನು ಎಷ್ಟೇ ಬುದ್ಧಿವಂತನಿದ್ದರೂ ಮೋಸದಿಂದ ಅವನ ತಲೆಯನ್ನು ಕೆಡಿಸಬಹುದು ಬಲವಂತನಾಗಿದ್ದರೂ ವಂಚನೆಯಿಂದ ಅವನ ಸಾಮರ್ಥ್ಯವನ್ನು ಕುಂದಿಸಬಹುದು. ರಾವಣನ ಸ್ಥಿತಿಯಾದರೂ ಈಗ ಹೀಗೆಯೇ ಆಯಿತು. ಕೈಲಾಸಪತಿ ಶಂಕರನ ಮೇಲೆ ಆತನ ವಿಶ್ವಾಸವಿದ್ದಂತೆ ಅಗ್ನಿದೇವನ ಮೇಲೂ ಇದ್ದಿತು. ಆದಕ್ಕಾಗಿಯೇ ಅವನು ಅಗ್ನಿಯು ಹೇಳಿದ್ದನ್ನೆಲ್ಲ ನಂಬಿ ವಂಚನೆಗೊಳಗಾದನು '

ತಾಯಿ ! ಬಕುಲಾವತಿ ! ಸೀತಾಪಹರಣದ ವಾರ್ತೆ ನನಗೆ ತಿಳಿದ ಕೂಡಲೆ ನಾನು ಲಂಕೆಯ ಮೇಲೆ ಏರಿ ಹೋದೆನು ರಾವಣ, ಕುಂಭಕರ್ಣ ಮೊದಲಾದ ರಾಕ್ಷಸರನ್ನೆಲ್ಲ ಸಂಹರಿಸಿದೆನು. ಬಂಧನದಲ್ಲಿದ್ದ ಸೀತೆಯನ್ನು ಮುಕ್ತಳನ್ನಾಗಿಮಾಡಿ ತಂದೆನು. ಲೌಕಿಕವು ಒಪ್ಪುವಂತೆ ಆಕೆಯನ್ನು ಅಗ್ನಿ ಮುಖದಿಂದ ಪರೀಕ್ಷಿಸಿದೆನು. ಆ ಕಾಲಕ್ಕೆ ಧಗಧಗಿಸುತ್ತಿದ್ದ ಅಗ್ನಿಯಿಂದ ಒಂದೇ ರೂಪಿನ ಇಬ್ಬರು ಸೀತೆಯರು ಹೊರಕ್ಕೆ ಬಂದರು. ನಿಜವಾದ ಸೀತೆಯಾವಳೆಂಬದು ನನಗೆ ತಿಳಿಯದಾಯಿತು ನಾನು ಅದರಂತೆ ನುಡಿ ಯಲು ನನ್ನ ಸೀತೆಯು—" ಪ್ರಭು ನಾನು ಅನುಭವಿಸುವ ಕಷ್ಟಗಳನ್ನು ನನ್ನ ರೂಪಿನ ಈ ದಯಾವಂತೆ ವೇದವತಿಯು ತಾನು ಅನುಭವಿಸಿದಳು ಈಕೆಯ ಮಹದುಪಕಾರವನ್ನು ನಾವು ಮರೆಯಬಾರದಾಗಿದೆ. ಅರ್ಧರಾಮಾಯಣಕ್ಕೆ ಈಕೆಯೇ ಮುಖ್ಯನಾಯಿಕೆಯಾದಳು. ನೀವು ಈಕೆಯನ್ನು ಸಂತೋಷ ಗೊಳಿಸುವದು ಯುಕ್ತವೆಂದು ನನ್ನ ಮತವು. ಆದಕ್ಕಾಗಿ ಇವಳನ್ನು ನೀವು

ವಿಧಿಪೂರ್ವಕವಾಗಿ ವಿವಾಹದಿಂದ ಸ್ವೀಕರಿಸಬೇಕು" ಎಂದು ನುಡಿದಳು. ಆಗ ನಾನು ಇವಳು ನನ್ನ ಸೀತೆಯು ಅವಳು ವೇದವತಿಯು ಎಂಬುದನ್ನು ಅರಿತೆನು. ಹಾಗು ನನ್ನ ಸೀತೆಯಾಡಿದ ವಿನಯ ವಾಕ್ಯಗಳಿಗೆ ಉತ್ತರವಾಗಿ ನಾನು— "ಸೀತೆ ! ನೀನು ಹೇಳಿದುದೆಲ್ಲ ಸರಿಯಾದದ್ದು. ಆದರೆ ಈ ನನ್ನ ರಾಮಾವತಾರವು ಏಕಪತ್ನೀವ್ರತಕ್ಕೆ ಮುಖ್ಯತ್ವವನ್ನು ಎಣಿಸಿದೆ. ಮುಂದಿನ ಯುಗದಲ್ಲಿ ನಾನು ಕೃಷ್ಣಾವತಾರ ಧರಿಸುವೆನು. ಆಗ ನಾನು ಈ ಮೊದಲು ಹಲವು ಸ್ತ್ರೀಯರಿಗೆ ಅವರನ್ನು ವರಿಸುವಂತೆ ವಚನವನ್ನು ಕೊಟ್ಟಿರುವೆನು. ಅದರಂತೆಯೇ ಈ 'ವೇದವತಿ'ಯನ್ನಾದರೂ ಆ ಅವತಾರದಲ್ಲಿಯೇ ಲಗ್ನ ಮಾಡಿಕೊಳ್ಳುವೆನು ಅದುವರೆಗೆ ಈಕೆಯು ಸತ್ಯಲೋಕದಲ್ಲಿರಲಿ; ಬ್ರಹ್ಮನಿಂದ ಪೂಜೆ ಪಡೆಯಲಿ ಎಂದು ಹೇಳಿದನು

ತಾಯಿ ! ಬಕುಲಾವತಿ ! ಅದೇ ವೇದವತಿಯು ಈ ದ್ವಾಪರಯುಗದಲ್ಲಿ ಆಕಾಶರಾಜನ ಮಗಳಾಗಿ ಅವತರಿಸಿರುವಳು. ಇದೇ ಆಕೆಯ ಪೂರ್ವಜನ್ಮದ ವೃತ್ತವು

ತಾಯಿ ! ಆ ಪದ್ಮಾವತಿಯೇ ನನ್ನ ಮನಸ್ಸನ್ನು ಸೆಳೆದವಳು ನೀನೇ ಆಕೆಯನ್ನು ನನಗಾಗಿ ದೊರಕಿಸುವವಳು

ಈ ಪ್ರಕಾರ ಶ್ರೀನಿವಾಸನು ಪದ್ಮಾವತಿಯ ಮೊದಲಿನ ಜನ್ಮ ವೃತಾಂತವನ್ನು ಬಕುಲಾವತಿಗೆ ವಿಸ್ತರಿಸಿ ಹೇಳಿದನು.

ಬಳಿಕ ಬಕುಲಾವತಿಯು — ಶ್ರೀನಿವಾಸಾ ! ಈಗ ನೀನು ಹೇಳಿದ ಎಲ್ಲ ಸಂಗತಿಗಳಿಂದ ನಾನು ಸಂತೋಷ ಹೊಂದಿದೆ ಇನ್ನು ನೀನು 'ಪದ್ಮಾವತಿ'ಗಾಗಿ ಏನೂ ಚಿಂತೆಮಾಡಬೇಡ. ಆಕೆಯು ನಿನ್ನ ವದರಿಗ ಬೀಳುವದರಲ್ಲಿ ಸಂಶಯವಿಲ್ಲ. ನಾನು ಆ ದಿನಯಲ್ಲಿಯೇ ಈ ಕಾರ್ಯ ಕೈಕೊಳ್ಳುವೆನು. ಹಾಗು ಆಕೆಯ ಘಟನೆಗಾಗಿ ಶುಭದಿನದಲ್ಲಿ ನಾನು ಆಕಾಶರಾಜನ ನಗರಕ್ಕೆ ಹೋಗಿ ಆತನನ್ನು ಕಾಣುವೆನು. ನನ್ನ ವಿಚಾರಗಳನ್ನೆಲ್ಲ ಆತನ ಮುಂದೆ ಇಡುವೆನು. ಅವನ ಒಪ್ಪಿಗೆಯನ್ನು ಪಡಕೊಂಡು ಬರುವೆನು." ಎಂದು ಒಳ್ಳೆ ಉತ್ಸಾಹ ಭರಿತಳಾಗಿ ಹೇಳಿದಳು,

ಕೆಲನಿಮಿಷಗಳ ಹಿಂದೆ ಮುಸುಕು ಹಾಕಿಕೊಂಡು ಮಲಗಿದ ಆತನಲ್ಲಿ ಈಗ ಉತ್ಸಾಹವು ಉಕ್ಕೇರಹತ್ತಿತು ಹಾಸುಗೆಯಿಂದ ಎದ್ದನು. ಕೈಕಾಲು ಮೋರೆ ತೊಳೆದುಕೊಂಡು ಬಕುಲಾವತಿ ನೀಡಿದ ಊಟವನ್ನು ಉಂಡನು. ಹಸಿವೆಯನ್ನು ಹಿಂಗಿಸಿದನು ಬಕುಲಾವತಿಯು ತಾನೂ ಉಂಡಳು. ಮುಂದೆ ತುಸುದಿನಗಳಲ್ಲೇ ಒಂದು ಶುಭದಿನದ ಉದಯದಲ್ಲಿ ಬಕುಲಾವತಿಯು ಶ್ರೀನಿವಾಸನ ಅಪ್ಪಣೆಪಡೆದು ಆಕಾಶರಾಜನಲ್ಲಿಗೆ ಹೊರಡಲು ಸಿದ್ಧಳಾದಳು ಆಗ ಜಗತ್ಪತಿಯಾದ ಶ್ರೀನಿವಾಸನು ತನ್ನ ಮಾಯೆಯಿಂದ ಬಕುಲಾವತಿಗೆ ಹತ್ತುವದಕ್ಕೆ ಯೋಗ್ಯವಾದ ಕುದುರೆಯನ್ನು ನಿರ್ಮಿಸಿ ಆಕೆಯ ಸಮ್ಮುಖದಲ್ಲಿ ತಂದು ನಿಲ್ಲಿಸಿದನು.

ತನಗಾಗಿ ಶ್ರೀನಿವಾಸನು ತರಿಸಿದ ಕುದುರೆಯನ್ನೇರಿ ಬಕುಲಾವತಿಯು ' ಶ್ರೀನಿವಾಸಾ ! ನಾನು ಪ್ರಯಾಣ ಬೆಳಿಸುವೆ, ಜೋಕೆ ! ಎಂದು ಹೊರಟಳು.

ಬಕುಲಾವತಿಯನ್ನು ಕೆಲವೊಂದು ಅಂತರದ ವರೆಗೆ ಕಳಿಸಲು ಶ್ರೀನಿವಾಸನು ಹೋದನು.

## ಬಕುಲಾವತಿಯು ನಾರಾಯಣಪುರಕ್ಕೆ ತೆರಳಿದ್ದು

ಬಕುಲಾವತಿಯು ಶ್ರೀನಿವಾಸನಿಂದ ಅಪ್ಪಣೆಯನ್ನು ಹೊಂದಿ ಹೊರಡಲು ಅನುವಾದಳು. ಆಗ ಆತನು ಆಕೆಗೆ ' ತಾಯಿ ! ನೀನು ಆಕಾಶರಾಜನ ಪಟ್ಟಣಕ್ಕೆ ಹೋಗುವ ಮಾರ್ಗದಲ್ಲಿ ಈ ಪರ್ವತದಕೆಳಗೆ ಕಪಿಲೇಶ್ವರ ದೇವನೂ, ಕಪಿಲತೀರ್ಥವೂ ಇರುವವು ನೀನು ಆ ತೀರ್ಥದಲ್ಲಿ ಸ್ನಾನಮಾಡಿ ಕಪಿಲನೆಂಬ ಋಷಿಯಿಂದ ಅರ್ಚಿಸಲ್ಪಡುವ ಆ ಕಪಿಲೇಶ್ವರನನ್ನು ನೀನು ಕಂಡು 'ನಮ್ಮ ಶ್ರೀನಿವಾಸನು ನಿನಗೆ ಅನಂತವಂದನೆಗಳನ್ನು ತಿಳಿಸಿರುವನು. ನೀನು ಆತನ ವಿವಾಹವು ಶೀಘ್ರವಾಗಿ ನೆರವೇರುವಂತೆಮಾಡು' ಎಂದು ಪ್ರಾರ್ಥನೆಮಾಡು ಅಲ್ಲಿಂದ ಮುಂದೆ ನಾಗು ಆ ಒಳಿಕ ಅಲ್ಲಿಂದ ಶುಕಮುನಿಗಳ ಆಶ್ರಮವು ಹತ್ತುವದು ಅಲ್ಲಿಯೂ ನೀನು ಸೇರು ' ಬಾಲಕ ಶ್ರೀನಿವಾಸನು ತಮಗೆ ನಮಸ್ಕಾರ ತಿಳಿಸಿರುವನು' ಎಂದು ಬಿನ್ನಯಿಸು. ಇನ್ನು ಅಲ್ಲಿಂದ

ಮುಂದೆ ನಡೆದರೆ ಪದ್ಮಸರೋವರವು; ಆ ಸರಸ್ಸಿನ ಸನ್ನಿಧಿಯಲ್ಲಿದ್ದ ರಾಮ-ಕೃಷ್ಣರನ್ನು ನಮಿಸು ಹಾಗು ಪದ್ಮಸರೋವರದಲ್ಲಿಯ ಕಮಲ ಕುಸುಮಗಳಿಂದ ಅವರನ್ನು ಪೂಜಿಸು. ಅವರಿಗೂ ನನ್ನ ನಮಸ್ಕಾರಗಳನ್ನೂ ನಿನ್ನ ಬಯಕೆಯನ್ನೂ ವಿದಿತಪಡಿಸು ಮುಂದೆ ತುಸು ಅಂತರದಲ್ಲಿ ಹರಿಯುತ್ತಿರುವ ಪ್ರಸಿದ್ಧ ಸುವರ್ಣಮುಖರೀ ನದಿಯನ್ನು ದಾಟಿ ಆಕಾಶರಾಜನ ಪಟ್ಟಣಕ್ಕೆ ಗಮಿಸಿಸು" ಎಂದು ಹೇಳಿದನು. ಮತ್ತೂ ಆಕೆಯನ್ನು ಕುರಿತು ತಾಯಿ ! ನಿನಗೆ ತಿಳಿಸುವ ಕೊನೆಯ ಮಾತು ಯಾವುದೆಂದರೆ— ಆ ರಾಜನಲ್ಲಿ ನೀನು ಪ್ರಸಂಗಕ್ಕೆ ಉಚಿತವಾದ ಮಾತುಗಳನ್ನು ಬಳಸು, ಹಾಗು 'ಪದ್ಮಾ-ವತಿ'ಯನ್ನು ನನಗಾಗಿ ಕೊಡಲು ನಿನ್ನ ಇಚ್ಛೆಯನ್ನು ಆತನಲ್ಲಿ ಪ್ರಕಟಿಸು ಯಾವದೇ ರೀತಿಯಿಂದಾದರೂ ನೀನು ಹೋದ ಕಾರ್ಯವನ್ನು ಸಿದ್ಧಿಸಿಕೊಂಡು ಬಾ" ಎಂದು ಹೇಳಿ ಆಕೆಯನ್ನು ಬೀಳ್ಕೊಟ್ಟು ಮರಳಿದನು.

ಬಕುಲಾವತಿಯು ಕುದುರೆಯನ್ನು ಮಾರ್ಗದಿಂದ ವೇಗವಾಗಿ ನಡೆಸಹತ್ತಿದಳು ಕೆಲಸದ ಹವಣಿಕೆಯು ಆಕೆಯನ್ನು ಒಳ್ಳೆ ಆತುರತೆಯ ಹಾದಿಯಲ್ಲಿ ನೂಕಿತು ಕುದುರೆಯನ್ನು ತ್ವರೆಯಿಂದೋಡಿಸುತ್ತ ಸುವರ್ಣಮುಖರೀನದಿಯನ್ನು ದಾಟಿದಳು. ಮುಂದೆ ಅಗಸ್ತ್ಯೇಶ್ವರನ ಸ್ಥಾನವು ಆಕೆಯ ದೃಷ್ಟಿಯನ್ನು ಸೆಳೆಯಿತು. ಕೂಡಲೆ ಅವಳು ಕುದುರೆಯಿಂದಿಳಿದು ಅಗಸ್ತ್ಯೇಶ್ವರನಿಗೆ ವಂದಿಸಿದಳು. ಆ ಆಶ್ರಮದ ಸೊಬಗನ್ನು ಚನ್ನಾಗಿ ನಿರೀಕ್ಷಿಸಿದಳು. ಅತ್ತಿತ್ತ ಆಕೆಯು ಸ್ವಲ್ಪ ಅಡ್ಡಾಡಿದಳು ಮುಂದೆ ಪ್ರಯಾಣ ಬಳೆಸಲು ಕುದುರೆಯನ್ನೇರುವಷ್ಟರಲ್ಲಿ ಒಂದೆಡೆಗೆ ನಿರಂಕುಶ ವೃತ್ತಿಯಿಂದ ಸಂಚರಿಸುವ ಕೆಲ ಕನ್ನಿಕೆಯರ ಒಂದು ಗುಂಪನ್ನು ನಿರೀಕ್ಷಿಸಿದಳು. ಆಗ ಬಕುಲಾವತಿಯು ಅವರ ಸನಿಪಕ್ಕೆ ಹೋದಳು ಆಕಾಶರಾಜನ ಪಟ್ಟಣವಿನ್ನೂ ಎಷ್ಟು ದೂರವಿರುವದೆಂಬದನ್ನು ತಿಳಿಯುವ ಕುತೂಹಲದಿಂದ ಅವರನ್ನು ಕುರಿತು—"ತಂಗಿಗಳೇ ನೀವ್ಯಾರು ? ನೀವೆಲ್ಲರು ಇಲ್ಲಿಗೇಕೆ ಬಂದಿರುವಿರಿ ? ಇನ್ನು ಆಕಾಶರಾಜನ ನಗರವು ಇಲ್ಲಿಂದ ಎಷ್ಟು ದೂರಿರುವದು ? ಇತ್ಯಾದಿಯಾಗಿ ಹಲವು ಪ್ರಶ್ನೆಗಳ ಮಾಲಿಕೆಯನ್ನು ಅವರೆದುರು ಪೋಣಿಸಿಟ್ಟಳು ಅದಕ್ಕೆ ಆ ಕನ್ನಿಕೆಯರೆಲ್ಲ ಈ ಬಕುಲಾವತಿಯ ಗೌರವಯುಕ್ತ ಮುದ್ರೆಯನ್ನು ಕಂಡು ಇವ-ಳೇನೋ ಮಹತ್ಕಾರ್ಯಾರ್ಥವಾಗಿ ಕುದುರೆಯನ್ನೇರಿ ನಗರಕ್ಕೆ ಹೋಗುತ್ತಿರು

ವಂತೆ ತೋರುತ್ತಿದೆ. ಅದೇನೇ ಇರಲಿ. ಈ ದೊಡ್ಡ ಮನುಷ್ಯಳು ಕೇಳುವ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಟ್ಟು ನಮ್ಮ ನಮ್ರತೆಯನ್ನು ತೋರಿಸ ಬೇಕು ಎಂಬ ವಿಚಾರವುಳ್ಳವರಾದರು. ಅವರು ಆಕೆಯ ಮುಂದೆ ಬಂದು "ಅಮ್ಮಾ ! ನಾವು ಇಲ್ಲಿಯೇ ಸಮೀಪದಲ್ಲಿಯ ಆಕಾಶರಾಜನ ನಗರದವರು. ನಾವೆಲ್ಲರೂ ಆಕಾಶರಾಜನ ಪ್ರೇಮದ ಪುತ್ರಿಯಾದ ಪದ್ಮಾವತಿಯ ಗೆಳತಿ ಯರು ನಾವೂ ಪದ್ಮಾವತಿಯೂ ಕೂಡಿಕೊಂಡು ಮೊನ್ನಿನ ದಿನದಲ್ಲಿ ವನ ದಲ್ಲಿ ಸಂತೋಷದಿಂದ ವಿಹರಿಸುತ್ತಿದ್ದೆವು ಅಷ್ಟರಲ್ಲಿ ಒಂದು ಮದಗಜವನ್ನು ಬೆನ್ನಟ್ಟಿ ಮದನಸ್ವರೂಪದ ಯುವಕನೊಬ್ಬನು ಕುದುರೆಯನ್ನೇರಿ ನಾವಿದ್ದ ಲ್ಲಿಗೇ ಬಂದನು. ಆ ಆನೆಯು ಆತನಿಂದ ಮರೆಯಾಯಿತು. ಆನೆಯ ಮೇಲಿದ್ದ ಆತನ ದೃಷ್ಟಿಯು ನಮ್ಮ ಕೆಳದಿಯರ ಗುಂಪಿನಲ್ಲಿ ಕಳೆಯುಳ್ಳ ಚಂದ್ರದಂತೆ ಮುಖವುಳ್ಳ ನಮ್ಮ ಸಖಿ 'ಪದ್ಮಾವತಿ'ಯನ್ನು ನಿರೀಕ್ಷಿಸಹತ್ತಿತು. ತನ್ನನ್ನು ಒಂದೆಸವನೆ ನೋಡುತ್ತಿರುವ ಕಿರಾತ ಸ್ವರೂಪದ ಆ ನರವೀರನನ್ನು ನಮ್ಮ ಸಖಿ ಪದ್ಮಾವತಿಯು ಕಂಡಳು ಆ ಕೂಡಲೆ ಅಂಜಿ ನಡುಗಿದಳು. ಸ್ವಲ್ಪ ಹೊತ್ತಿನಲ್ಲಿಯೇ ಅವಳ ಮೈಯಲ್ಲಿ ಜ್ವರತುಂಬಿದವು. ಈಗ ಅವಳು ಅರಮನೆಯಲ್ಲಿ ಹಾಸಿಗೆ ಹಿಡಿದು ಮಲಗಿರುವಳು. ಆಕೆಯ ಜ್ವರವು ನಿವಾ ರಣೆಯಾಗುವ ಕುರಿತು ರಾಜನ ಆಜ್ಞೆಯನ್ನು ಪಡೆದು ನಾವು ಇಲ್ಲಿಯ ಅಗ ಸ್ತ್ಯೇಶ್ವರನನ್ನು ಪ್ರಾರ್ಥಿಸಲು ಬಂದಿರುವೆವು ಆ ದೇವನಿಗೆ ಸರ್ವೋಪಚಾರ ಯುಕ್ತವಾಗಿ ಪೂಜೆಯನ್ನು ಸಲ್ಲಿಸಿದೆವು" ಎಂದು ಹೇಳಿದರು.

'ರೋಗಿಬಯಸಿದ್ದೂ ಆಕಳಹಾಲು; ದೊರೆತದ್ದೂ ಅದೇ.' ಎಂಬಂತೆ ಬಕುಲಾವತಿಯ ಸ್ಥಿತಿಯಾಯಿತು ಅವಳು ತನ್ನ ಮುಂದಿನ ಕಾರ್ಯದ ಶುಭ ಸೂಚನೆಯು ಮಾರ್ಗದಲ್ಲಿಯೇ ಆದಂತಾಯಿತೆಂದು ಬಗೆದಳು ವನದಲ್ಲಿ ಅಂದು ನಡೆದ ಎಲ್ಲ ಸಂಗತಿಯನ್ನು ಇನ್ನೂ ಮುಂದೆ ತಿಳಿಯುವ ಅವಳ ಜಿಜ್ಞಾ ಸೆಯುಂಟಾಯಿತು ಅದಕ್ಕಾಗಿ ಪುನಃ ಆ ಕನ್ನಿಕೆಯರನ್ನು ಕುರಿತು—

'ಕನ್ಯೆಯರೆ ! ನೀವು ಹೇಳಿದ ಹಾಗು ನಿಮ್ಮ ಪದ್ಮಾವತಿಯನ್ನು ತನ್ನ ಸ್ವರೂ ಪದಿಂದ ಅಂಜಿಸಿದ ಆ ಕಿರಾತರೂಪನು ನೀವಿದ್ದಲ್ಲಿಗೆ ಹೇಗೆಬಂದನು ? ಆತನು ಅಲ್ಲಿ ಬಂದನಂತರ ವರ್ತಿಸಿದ ಮುಂದಿನ ಸಂಗತಿಗಳೇನು ? ಅವನ್ನೆಲ್ಲ ನನಗೆ ತಿಳಿಸುವಿರಾ ! ಎಂದು ಕೇಳಿದಳು.

ಬಕುಲಾವತಿಯು ತಮ್ಮೊಡನೆ ಆತ್ಮೀಯ ಭಾವನೆಯಿಂದ ಬೆರೆತು ಕೇಳಿದ ಪ್ರಶ್ನೆಗಳಿಂದ ಆ ಕನ್ನಿಕೆಯರೆಲ್ಲ ಆಕೆಯಲ್ಲಿ ಪೂಜ್ಯತೆಯನ್ನು ಎಣಿಸ ಹತ್ತಿದರು. ಹಾಗು ಆ ಹೊತ್ತಿನದಿನ ವನದಲ್ಲಿ ವರ್ತಿಸಿದ ಎಲ್ಲ ಸಂಗತಿ ಯನ್ನು ಮನಬಿಚ್ಚಿ ಹೇಳಹತ್ತಿದರು.

"ತಾಯಿ! ನಾವು ನಮ್ಮ ಸಖಿ ಪದ್ಮಾವತಿಯರಿಂದ ಸಹಿತರಾಗಿ ವನಕ್ಕೆ ಬಂದೆವು. ಅಲ್ಲಿಯ ವಿಹಾರದಿಂದ ಒಳ್ಳೆ ಸೊಗಸನ್ನು ಹೊಂದುತ್ತಲಿದ್ದೆವು. ನಮ್ಮ ಪದ್ಮಾವತಿಯು ವನಾಂತರದಲ್ಲಿ ನೀರಿ ಪ್ರಫುಲ್ಲಿತ ಹಾಗು ಸುಗಂಧ ಯುಕ್ತ ಕುಸುಮಗಳನ್ನು ಆಯ್ದುಕೊಂಡು ಮಾಲೆಯನ್ನು ಕಟ್ಟುವದರಲ್ಲಿ ತೊಡಗಿದ್ದಳು. ಅಷ್ಟರಲ್ಲಿ ಒಂದು ಮದ್ದಾನೆಯು ಘೀಳಿಡುತ್ತ ನಮ್ಮ ಕಡೆಗೇ ಬರುತ್ತಿರುವದನ್ನು ದೂರನಿಂದಲೇ ಕಂಡೆವು. ಆ ಕ್ಷಣವೇ ಕುದುರೆಯನ್ನೇರಿದ ಕಿರಾತರೂಪನು ಅದನ್ನು ಬೆಂಬಳಿಸಿ ಬಂದು ಆ ಮದಗಜವನ್ನು ನಿರ್ಬಲವನ್ನಾ ಗಿಸಿದನು. ಆ ಕೂಡಲೇ ಅದು ಆತನಿಗೆ ತನ್ನ ಸೊಂಡಿಲನ್ನೆತ್ತಿ ನಮಸ್ಕರಿಸಿ ದಾರಿ ಸಿಕ್ಕತ್ತ ಓಡಿ ಹೋಯಿತು. ಆ ಆನೆಯನ್ನು ಅತ್ತ ಹೋಗಬಿಟ್ಟು ಆ ಕಿರಾತರೂಪನು ನೇರವಾಗಿ ನಮ್ಮನ್ನು ಕಂಡು ನಾವಿದ್ದಲ್ಲಿಗೇ ಬಂದನು. ನಮ್ಮ ಹಾಗೂ ನಮ್ಮ ಸಖಿಯೊಡತಿಯೊಡನೆ ಆತನು ಮಾತುಗಳಿಗೆ ಆರಂಭಿಸಿದನು. ನಮ್ಮ ಪದ್ಮಾವತಿಗೂ ಆತನಿಗೂ ಮಾತಿಗೆ ಮಾತು ಅವರವರ ಮುಖಗಳಿಂದ ಹೊರಬಿದ್ದವು. ಹವೆಯಲ್ಲಿ ಹರಿಬಿದ್ದವು, ಕೊನೆಗೆ ಅವು ಕಲಹವೆಂಬ ಬಿರು ಗಾಳಿಯ ರೂಪ ಹೊಂದಿದವು. ಅದರಿಂದ ಆ ಕಿರಾತರೂಪನ ಮೇಲೆ ಆಣೆ ಕಲ್ಲಿನ ಮಳೆಯಂತೆ ಕಲ್ಲಿನ ಸುರಿಮಳೆಯೇ ಸುರಿಯಿತು. ಅದರ ಪರಿಣಾಮ ವಾಗಿ ಆತನು ಅಪಮಾನ ಜೀವನದಲ್ಲಿ ಮುಳುಗಿದನು ತಾಯಿ ಅಂದು ಒದ ಗಿದ ಸನ್ನಿವೇಶವನ್ನು ಇನ್ನೇನು ಹೇಳುವದು? ನಾವು ಎಷ್ಟು ಕಲ್ಲು ತೂರಿದರೂ ಆತನಿಗೆ ತಾಕಲಿಲ್ಲ. ಆ ಪದ್ಮಾವತಿಯು ಹಾರಿಸಿದವು ಮಾತ್ರ ಅವನ ಪಾದ ಗಳನ್ನು ಬಳಿಸಿ ಬೀಳಹತ್ತಿದವು. ಕೊನೆಗೆ ಅವಳ ಒಂದು ಕಲ್ಲಿನ ಹೊಡೆತವು ಆತನೇರಿದ ಕುದುರೆಗೆ ಮಾತ್ರ ತಗುಲಿತು. ಆ ಏಟನ್ನು ಕುದುರೆಯು ಸಹಿಸ ದಾಯಿತು ಅದನ್ನು ಕಂಡು ಕಿರಾತರೂಪನು ಕುದುರೆಯಿಂದಿಳಿದನು ಕೂಡಲೆ ಆ ಕುದುರೆಯು ನೆಲಕ್ಕೆ ಬಿದ್ದು ಚಟಪಟನೆ ಒದ್ದಾಡಿ ತನ್ನ ಬಲಗಿವಿಯನ್ನು ಮೇಲೆ ಮಾಡಿ ಪ್ರಾಣ ಬಿಟ್ಟಿತು! ಆಗ ಕಿರಾತರೂಪನು ತಳಮಳಗೊಂಡು

ನಮ್ಮ ಪದ್ಮಾವತಿಯ ಕಡೆಗೆ ದುರಮುರನೆ ನೋಡಿದನು. ಆತನು ತಾನೊಬ್ಬ ಯುವತಿಯಿಂದ ಅವಮಾನಿತನಾದೆನಲ್ಲ!' ಎಂದು ಆತ್ಮಗತ ಉದ್ಗಾರ ತೆಗೆದನು. ಹಾಗೂ ಆ ಕೂಡಲೇ ಅಸ್ತವ್ಯಸ್ತವಾದ ತನ್ನ ಉಡುಗೆ–ತೊಡುಗೆಗಳನ್ನು ಸಾವರಿಸಿಕೊಂಡನು. ಕೊನೆಗೆ ತನ್ನ ಕಟಾಕ್ಷದ್ದೊಂದು ಕಿರಣವನ್ನು ನಮ್ಮ ಪದ್ಮಾವತಿಯ ಮೇಲೆ ಚೆಲ್ಲಿದನು ಆ ಸತ್ತ ಕುದುರೆಯನ್ನು ಅಲ್ಲಿಯೇ ಬಿಟ್ಟು ಆ ಪರ್ವತದ ಸೋಪಾನಗಳನ್ನೇರಿ ನೆಟ್ಟಗೆ ಉತ್ತರನಿಟ್ಟಿಗೆ ನಡೆದನು''

"ತಾಯಿ! ನಮ್ಮ ಪದ್ಮಾವತಿಯು ಕುದುರೆಯು ತನ್ನಿಂದ ಪಂಚತ್ವ ಹೊಂದತಲ್ಲ! ಎಂದು ಮರುಗಿದಳು. ಆತನ ಕಟಾಕ್ಷ ಕಿರಣದಿಂದ ಆಕೆಯು ಲೋಹದಂತೆ ಬಿರುಸಾಗಿರುವ ತನ್ನ ಹೃದಯವನ್ನು ಹಿಡಿದುಕೊಂಡಳು. ಹಾಗೂ ಆ ಕೂಡಲೆ ಮೂರ್ಛೆಹೊಂದಿ ಭೂಮಿಗುರುಳಿದಳು ಆಗ ನಾವೆಲ್ಲರೂ ದಿಕ್ಕುಗಾಣದಾದೆವು. ಆಕೆಗೆ ಮಾಡತಕ್ಕ ಶೈತ್ಯೋಪಚಾರಗಳನ್ನೆಲ್ಲ ಮಾಡಿದೆವು. ಆ ನಮ್ಮ ಕ್ರಿಯೆಗಳೆಲ್ಲ ತಾತ್ಕಾಲಿಕವಾಗಿ ಉಪಯೋಗ ಬೀಳಲಿಲ್ಲ. ಕಡೆಗೆ ನಾವೆಲ್ಲರು ಆಕೆಯನ್ನು ಒಂದುಯಾನದಲ್ಲಿಮಲಗಿಸಿಕೊಂಡು ಅರಮನೆಗೆ ಕರೆದೊಯ್ದೆವು

ಪದ್ಮಾವತಿಯ ಈ ಸ್ಥಿತಿಯು ಹಾ ಹಾ! ಎನ್ನುವಷ್ಟರಲ್ಲಿ ಅರಮನೆಯ ತುಂಬೆಲ್ಲ ವ್ಯಾಪಿಸಿತು. ಆಕಾಶರಾಜನ ಕಿವಿವರೆಗೆ ತಲುಪಿತು. ಆಗ ಆತನು ತನ್ನ ದರಬಾರವನ್ನು ಮುಂದುವರಿಸಿ ಆ ಕೂಡಲೆ ಪ್ರೇಮದ ಮಗಳು ಪದ್ಮಾವತಿಯ ಹತ್ತಿರ ಬಂದನು. ಆಕೆಯನ್ನು ತನ್ನ ತೊಡೆಯ ಮೇಲೆ ತೆಗೆದುಕೊಂಡು ಮಮತೆಯ ಮಾತುಗಳನ್ನಾಡಿದನು. ಆಕೆಯಿಂದ ಪ್ರತಿಯಾಗಿ ಮಾತುಗಳಿಲ್ಲ ಗಟ್ಟಿಯಾಗಿ ಕೂಗಿ ಕರದನು, ಓ ಕೊಡಲಿಲ್ಲ. ಗಾಬರಿಯಾದನು, ಬೆದರಿ ಕಕ್ಕಾವಿಕ್ಕಿಯಾದನು. ಆತನಿಗೆ ಶೋಕವು ಪೊತ್ತರಿಸಿ ಬರಹತ್ತಿತು ಅದನ್ನು ಹತ್ತಿಕ್ಕಿಕೊಂಡು— 'ನನ್ನ ಈ ಮಗಳಿಗೆ ಏನಾಗಿರಬಹುದು?' ಎಂದು ಚಿಂತಾಮಗ್ನನಾದನು

ಮಗಳ ರೋಗ ವಾಸಿಯಾಗುವ ಬಗೆ ಹೇಗೆಂದು ಆಕಾಶರಾಜನು ಹಗಲು–ರಾತ್ರಿಯನ್ನರಿಯದೆ ವಿಚಾರದಲ್ಲಿ ಬಿದ್ದನು ಕೊನೆಗೆ ಆತನು ಸುರಗುರು ಬೃಹಸ್ಪತಿಯವರಿಂದ ಇದಕ್ಕೆ ತಕ್ಕ ನಿವಾರಣೋಪಾಯವಲ್ಲದಿದ್ದರೂ

ಮಗಳ ರೋಗದ ನಿಮಿತ್ತವನ್ನಾದರೂ ತಿಳಿದುಕೊಳ್ಳಬೇಕು ಎಂದು ನಿಶ್ಚಯಿಸಿದನು. ಹಾಗು ಆ ಪ್ರಕಾರ ತನ್ನ ಮಗ ವಸುದಾನನ್ನು ಕಳಿಸಿ ಬೃಹಸ್ಪತಿಯನ್ನು ಕರೆಯಿಸಿಕೊಂಡನು.

ಸುರ ಗುರು ಬ್ರಹಸ್ಪತಿಯು ಆಕಾಶರಾಜನ ನಾರಾಯಣಪುರಕ್ಕೆ ಬಂದನು. ಆ ರಾಜನ ಅರಮನೆಯನ್ನು ತಡೆಯಿಲ್ಲದೆ ಒಳಸೇರಿದನು. ತನ್ನ ಆಮಂತ್ರಣವನ್ನು ಮರ್ಯಾದಿಸಿ ತನ್ನ ಅರಮನೆಗೆ ಬಂದ ಗುರುವನ್ನು ರಾಜನು ಯಥೋಚಿತವಾಗಿ ಸತ್ಕರಿಸಿದನು. ಬಳಿಕ— 'ನನ್ನ ಮಗಳು ಪದ್ಮಾವತಿಯು ಅಸ್ವಸ್ಥತೆಯುಳ್ಳವಳಾಗಿ ಪ್ರಜ್ಞೆಯಿಲ್ಲದೆ ಮಲಗಿರುವಳು. ಇದರ ಕಾರಣವನ್ನೂ ಮತ್ತು ಪರಿಹಾರಕ್ಕಾಗಿ ಕೈಕೊಳ್ಳುವ ಉಪಾಯವನ್ನೂ ತಿಳಿಸುವದಾಗಬೇಕು '' ಎಂದು ರಾಜನು ಮೊರೆಯಿಟ್ಟನು. ಆಗ ಗುರು ಬೃಹಸ್ಪತಿಯು ಪದ್ಮಾವತಿಯ ಪ್ರಕೃತಿಯನ್ನು ನಿರೀಕ್ಷಿಸಿದನು. ರಾಜನನ್ನು ಕುರಿತು— "ರಾಜ! ಈಕೆಯ ದೇಹಾಲಸ್ಯಕ್ಕೆ ಬೇರೆ ಕಾರಣಗಳೇನೂ ಇಲ್ಲ. ಈ ನಿನ್ನ ಮಗಳು ವನವಿಹಾರಕ್ಕೆ ಹೋದ ದಿನದಲ್ಲಿ ಒಂದು ಪುರುಷಾಕೃತಿಯನ್ನು ಕಂಡು ಅಂಜಿರುವಳು. ಅವಳ ಭೀತಿಯನ್ನು ಶಾಂತಿಯೊಂದರಿಂದ ನಿವಾರಿಸಲು ಬರುವದು. ಅಗಸ್ತ್ಯೇಶ್ವರನನ್ನು ವೇದವಿದ್ ಬ್ರಾಹ್ಮಣರಿಂದ ಲಘು ರುದ್ರಾಭಿಷೇಕ ಪೂಜೆಯನ್ನು ಮಾಡಿಸು. ಅದರಿಂದ ನಿನ್ನ ಮಗಳ ಬಾಧೆಯು ದೂರಾಗಿ ಅವಳು ಪ್ರಜ್ಞೆಯನ್ನು ಪಡೆಯುವಳು. ಮತ್ತು ಸಮಾಧಾನ ಹೊಂದುವಳು.'' ಎಂದು ಹೇಳಿದನು.

ಗುರುವಾಕ್ಯ ಶ್ರವಣದಿಂದ ರಾಜನ ಮನಸ್ಸಿನ ತಳಮಳವು ಎಷ್ಟೋ ಕಡಿಮೆಯಾಯಿತು. ಆ ಕೂಡಲೆ ಯೋಗ್ಯರಾದ ವಿಪ್ರರನ್ನು ಬರಮಾಡಿಕೊಂಡು ಅವರಿಗೆ ವಿಧಿವತ್ತಾಗಿ ಅಗಸ್ತ್ಯೇಶ್ವರನ ಅಭಿಷೇಕ ಪೂರ್ಣಗೊಳಿಸುವ ಕುರಿತು ಬಿನ್ನವಿಸಿದನು ಹಾಗು ಆ ಬ್ರಾಹ್ಮಣರು ಮಾಡುವ ಅಭಿಷೇಕ ಕ್ರಿಯೆಗೆ ಬೇಕಾಗುವ ಪೂಜಾಸಾಹಿತ್ಯಗಳನ್ನು ಮುಂದಾಗಿ ಸಿದ್ಧಪಡಿಸಿಕೊಂಡು ಹೋಗಲು ನಮಗೆ ರಾಜಾಜ್ಞೆಯಾಯಿತು ಆ ಪ್ರಕಾರ ನಾವು ಈ ಹೊತ್ತು ಇಲ್ಲಿ ಬಂದು ಅಭಿಷೇಕಕ್ಕೆ ಬೇಕಾಗುವ ಎಲ್ಲ ಸಿದ್ಧತೆಯನ್ನು ಮಾಡಿದೆವು. ಇನ್ನು ನಾವು ಇಲ್ಲಿ ಪೂಜಾ ಸಮಾಪ್ತಿಯ ವರೆಗೆ ಇದ್ದು ತೀರ್ಥೋದಕವನ್ನು

ತೆಗೆದುಕೊಂಡು ಹೋಗಿ ಪದ್ಮಾವತಿ ಸಖಿಯಳಿಗೆ ನೀಡುವೆವು” ಎಂದು ಎಲ್ಲ ಸಂಗತಿಯನ್ನು ಆ ಕನ್ನಿಕೆಯರು ಬಕುಲಾವತಿಗೆ ತಿಳಿಸಿದರು.

ಕನ್ನಿಕೆಯರಾಡಿದ ಮಾತುಗಳನ್ನು ಕೇಳಿ ಬಕುಲಾವತಿಯು ಅವಕ್ಕೂ ಶ್ರೀನಿವಾಸನು ಹೇಳಿದ ಸಂಗತಿಗೂ ತಾಳಮೇಳು ಕೂಡುವದೆಂದು ಕಂಡು ಮನಸ್ಸಿನಲ್ಲಿ ಹಿಗ್ಗಿದಳು. ಆವರೆ ಪುರಾಣ ಪುರುಷೋತ್ತಮನಾದ ಶ್ರೀನಿವಾಸನನ್ನು ನಾನು ಸಂಪೂರ್ಣವಾಗಿ ದೇವನೆಂದು ಇದುವರೆಗೆ ಅರಿಯ ಲಿಲ್ಲ ಕೇವಲ ಮೋಹದ ಮಗನೆಂದು ಅರಿತು ಭ್ರಾಂತೆಯಾಗಿ ಜನನ-ಮರಣ ಚಕ್ರದಲ್ಲಿ ಬಿದ್ದೆನಲ್ಲ! ಈ ನನ್ನ ಅಜ್ಞಾನಕ್ಕೆ ಏನೆನ್ನಬೇಕು? ನನ್ನ ಜನ್ಮಕ್ಕೂ ನನ್ನನ್ನು ಆವರಿಸಿದ್ದ ಅಜ್ಞಾನಕ್ಕೂ ಧಿಕ್ಕಾರವಿರಲಿ! ಎಂದು ತನ್ನನ್ನು ತಾನೇ ಹಳಿದುಕೊಂಡಳು. ದೇವಾ ಶ್ರೀನಿವಾಸಾ! ಬೇಗನೆ ನನ್ನನ್ನು ಜನನ ಚಕ್ರ ದಿಂದ ದೂರಮಾಡಪ್ಪಾ! ಎಂದು ಬೇಡಿ ಹಲುಬಹತ್ತಿದಳು ಆ ಕೂಡಲೆ ಅವಳ ಆ ಭಾವನೆಯು ಮತ್ತೆ ಮರಯಾದಂತಾಗಿ ತನ್ನ ಎದುರಿರುವ ಆ ಕನ್ನಿಕೆಯರನ್ನು ಕಂಡಳು. ಆ ಕನ್ನಿಕೆಯರು ಆಕೆಗೆ ‘ತಾಯಿ! ನೀನು ಯಾರು? ನಿನ್ನ ಸಮಾಚಾರವೇನು? ನಿನಗೆ ನಮ್ಮೆದುರು ಹೇಳುವ ಮನಸ್ಸಿದ್ದರೆ ಆಸ್ಥೆಯಿಂದ ಕೇಳುವ ಬಯಕೆ ನಮಗಾಗಿದೆ” ಎಂದರು. , ಆಗ ಬಕು ಲಾವತಿಯು— ‘ಕನ್ನಿಕೆಯರಿರಾ! ಈ ವೇಂಕಟಾಚಲದಲ್ಲಿ ಇರುವ ಶ್ರೀನಿ- ವಾಸನ ಸೇವಿಕೆ ನಾನು. ನನ್ನ ಹೆಸರು ಬಕುಲೆ, ನಾರಾಯಣಪುರದ ರಾಜನ ಪತ್ನಿ ಧರಣೀದೇವಿಯವರನ್ನು ಕಂಡು ಅವರಲ್ಲಿ ನನ್ನ ಕಾರ್ಯವನ್ನು ತೀರಿಸಿ ಕೊಳ್ಳಬೇಕಾಗಿದೆ. ಇದುವರೆಗೆ ನಾನು ಇತ್ತಕಡೆಗೆ ಬಂದಿರಲಿಲ್ಲ. ಆದ್ದರಿಂದ ನಿಮಗೆಲ್ಲರಿಗೂ ಧರಣೀದೇವಿಯವರಿಗೂ ಅಪರಿಚಿತಳು. ಅನಾಯಾಸವಾಗಿ ಅರಮನೆಯ ಪ್ರವೇಶಕ್ಕೆ ಮುಕ್ತದ್ವಾರವಿದ್ದ ನಿಮ್ಮ ಪರಿಚಯ ನನಗಾಯಿತು. ನಾನೂ ನನ್ನ ಕಾರ್ಯನಿಮಿತ್ತವಾಗಿ ನಿಮ್ಮೊಡನೆ ಅರಮನೆಗೆ ಬರಲೇ? ನಾನೂ ನೀವೂಕೂಡಿ ಹೋಗುವದರಿಂದ ದಾರಿತಪ್ಪುವ ಭಯವಿಲ್ಲ. ಅರಮನೆ ಪ್ರವೇ ಶಕ್ಕೆ ಬಹಳ ಹೊತ್ತು ಕಾದುಕೊಂಡು ಅಲ್ಲಿ ಬಾಗಿಲಲ್ಲಿ ಕೂಡ್ರಬೇಕಾಗುವದಿಲ್ಲ. ಇನ್ನು ನನ್ನನ್ನು ಸಂಗಡ ಕರದೊಯ್ಯುವದು ನಿಮ್ಮ ಇಚ್ಛೆ” ಎಂದು ಬಕು ಲಾವತಿಯು ನುಡಿದಳು.

ಕನ್ನಿಕೆಯರು 'ಅವಶ್ಯಬರುವದು' ಎಂದು ಹೇಳಿ ಅವಳನ್ನು ತಮ್ಮ ಸಂಗಡ ಕರೆದೊಯ್ದರು. ಅರಮನೆಯಲ್ಲಿ ಧರಣೀದೇವಿಗೆ ಆಕೆಯನ್ನು ಭೆಟ್ಟೀಮಾಡಿಸಿದರು.

## ಕೊರವಂಜಿವೇಷದಲ್ಲಿ ಶ್ರೀನಿವಾಸನು

ಹಿಂದೆ ಹೇಳಿದಂತೆ ಬಕುಲಾವತಿಯು ಆ ಕನ್ನಿಕೆಯರೊಡನೆ ಆಕಾಶರಾಜನ ನಗರವನ್ನು ಸೇರಿದಳು ತನ್ನ ಮುಂದಿನ ಕಾರ್ಯ ಕೈಗೂಡಲು ಬೇಕಾಗುವ ವಿಚಾರವನ್ನು ಮನಸಿನಲ್ಲಿ ಗೊತ್ತುಮಾಡಿಕೊಳ್ಳಹತ್ತಿದಳು.

ಇತ್ತ ಹುತ್ತಿನಲ್ಲಿ ವಾಸವಾಗಿದ್ದ ಶ್ರೀನಿವಾಸನು ತನ್ನ ಕೆಲಸಕ್ಕಾಗಿ ಬಕುಲಾವತಿಯನ್ನು ಆಕಾಶರಾಜನ ಪಟ್ಟಣಕ್ಕೆ ಕಳಿಸಿದ್ದಾಯಿತು. ಆಕೆಯು ಕಾರ್ಯಸಾಧಿಸಿಕೊಂಡು ಬರುವಳೋ ಇಲ್ಲೋ ಎಂಬ ಸಂಶಯವು ಆಗ ಆತನಲ್ಲಿ ಹುಟ್ಟಿತು ಆಕೆಯು ಆಕಾಶರಾಜನಿಗೆ ಭೆಟ್ಟಿಯಾಗಿ ತಾನು ಬಂದ ಉದ್ದೇಶವನ್ನು ಆತನಿಗೆ ತಿಳಿಸಿಯೇ ತಿಳಿಸುವಳು ಇದರಲ್ಲೇನೂ ಸಂಶಯವಿಲ್ಲ. ಆದರೆ— ರಾಜಮಂದಿರದ ಪ್ರಮುಖರಾದ ಆಕಾಶರಾಜ–ಧರಣೀದೇವಿಯರು ಮೊದಲಾಗಿ ನಮ್ಮ ಬಕುಲಾವತಿಯ ಮಾತುಗಳಿಗೆ ಮಹತ್ವ ಕೊಡದಿದ್ದರೆ ಮುಂದಿನ ವಿಚಾರವು ಅಷ್ಟಕ್ಕೇ ಕುಂಠಿತವಾಗಬಹುದು. ಯಾಕಂದರೆ ಜಗತ್ತಿನಲ್ಲಿ " ಒಬ್ಬನೇ ಮಗನಿರುವವನಿಗೆ ಆತನ ವಂಶ ವಿಚ್ಛೇದದ ಅಂಜಿಕೆಯಿರುವದು ಒಂದೇ ಕಣ್ಣು ಇದ್ದ ಮನುಷ್ಯನ ಚೆಲುವಿಕೆಯು ನಿರರ್ಥಕವೆನಿಸುವದು ಅದರಂತೆ ಸ್ತ್ರೀಯರು ದಕ್ಷತೆಯಿಂದ ಯಾವದೊಂದು ಕಾರ್ಯ ಕೈಕೊಳ್ಳಲು ಅದು ಫಲಪ್ರದವಾಗಲಾರದು " ಎಂದು ಜನರಲ್ಲಿ ತಿಳುವಳಿಕೆ ರೂಢವಾಗಿದೆ ಈ ಸಾಮತಿಯಂತೆ ನಮ್ಮ ಬಕುಲಾವತಿಯು ವಹಿಸಿದ ಕಾರ್ಯವು ಸಫಲವಾಗಲಿಕ್ಕಿಲ್ಲ. ಎಂದು ಶ್ರೀನಿವಾಸನು ತನ್ನಲ್ಲಿ ತಿಳಿದುಕೊಂಡು ಕೇವಲ ಸ್ವಾವಲಂಬನದಿಂದಲೇ ತನ್ನ ಕಾರ್ಯವನ್ನು ಸಿದ್ಧಿಸಿಕೊಳ್ಳುವ ನಿರ್ಣಯಕ್ಕೆ ಬಂದನು. ಹಾಗು ಅದಕ್ಕಾಗಿ ಆತನು ತನ್ನ ಅಘಟಿತವಾದ ಮಾಯೆಯಿಂದ ತನ್ನ ಪುರುಷಾಕೃತಿಯನ್ನು ಮರೆಮಾಡಿ ಪುಳಿಂದಿನಿ ಸ್ತ್ರೀಯ ಅರ್ಥಾತ್ ಕೊರಮಂಜಿಯ ವೇಷವನ್ನು ಧರಿಸಿದನು.

ಶ್ರೀನಿವಾಸನು ಕೊರವಂಜಿ ವೇಷಧರಿಸಿ ಮುಂದೆ ಏನು ಕ್ರಿಯೆಯನ್ನು ಕೈಕೊಳ್ಳುವನೆಂಬದನ್ನು ತಿಳಿಯುವ ಮೊದಲು ಆತನು ಧರಿಸಿರುವ ವೇಷದ ಸೊಬಗನ್ನು ನೋಡೋಣ.

ಶ್ರೀನಿವಾಸನು ಕೊರವಂಜಿಯ ವೇಷಕ್ಕೆ ತಕ್ಕಂತೆ ತಾನು ಸ್ತ್ರೀಯಳಾಗಿ ನಾರಿನ ಸೀರೆಯನ್ನೂ ಶತಛಿದ್ರ ಕುಪ್ಪುಸವನ್ನೂ ಧರಿಸಿದಳು ಅರ್ಧಸಹಸ್ರ ವರ್ಷ ಪ್ರಾಯದ ಮುದಿಕಿಯಾದಳು. ಕೊರಳಲ್ಲಿ ಗುಲಗಂಜಿಯ ಹಾಗು ಶಂಖ–ಚಿಂಬವಳಗಳಹಾರಗಳನ್ನು ಜೋತಾಡುವಂತೆ ಹಾಕಿಕೊಂಡಳು. ತನ್ನ ದೇಹವನ್ನು ಮಾರ್ಪಟಿಸಿ ಇಳಿಬಿದ್ದ ದೀರ್ಘವಾದ ಉದರದವಳಾದಳು. ದೊಡ್ಡ ಕಿವಿಗಳೂ ನೇತಾಡುವ ವೋಲೆಗಳೂ, ಹಲ್ಲುದಿರಿದ ಬಾಯಿಯೂ, ನಿರಿಗೆ ಬಿದ್ದ ಗಲ್ಲಗಳುಳ್ಳಮುಖವೂ ಅಸ್ತವ್ಯಸ್ತವಾಗಿ ಹರಡಿದ ತಲೆಯಲ್ಲಿಯ ನರೆ ಗೂದಲುಗಳೂ ಇವುಗಳಿಂದ ಅವಳು ನೋಡುವವರಿಗೆ ಮುಪ್ಪಿನ ಮುದಿಕೆ ಯೆಂದು ಸಹಜವಾಗಿ ಗೊತ್ತಾಗುತ್ತಿತ್ತು ಇಂಥ ಆ ಕೊರವಂಜಿಯ ವೇಷದ ಶ್ರೀನಿವಾಸನು ತನ್ನ ಸುಳಿನಾಭಿಯಿಂದ ಹೊರಟ ಕಮಲದಲ್ಲಿ ಜನಿಸಿದ ಬ್ರಹ್ಮ ನನ್ನು ತನ್ನ ವೇಷಕ್ಕೆ ಬೇಕಾದ ಏಳು ತಿಂಗಳದ್ದೊಂದು ಕೂಸನ್ನಾಗಿಮಾಡಿ ಮಡಿಲಲ್ಲಿ ಕಟ್ಟಿಕೊಂಡನು ಆ ಕೂಸು ಆಜಾನುಬಾಹುವಾಗಿ ಸೊರಗಿ ಸಾಯಲಾಗಿತ್ತು. ಸದಾವಕಾಲವೂ ರೋದಿಸುತ್ತಿತ್ತು. ಇಂಥ ಕೂಸಿ ನೊಂದಿಗೆ ಕೊರವಂಜಿಯು ಬ್ರಹ್ಮಾಂಡವನ್ನೇ ಒಂದು ಬುಟ್ಟಿಯನ್ನು ಮಾಡಿ ಕೊಂಡು ಅದರಲ್ಲಿ ನವರತ್ನಗಳೆಂಬ ನವಧಾನ್ಯಗಳನ್ನು ತುಂಬಿ ತಲೆಯ ಮೇಲಿಟ್ಟುಕೊಂಡಳು ತಾನು 'ಧರ್ಮದೇವತೆ' ಎಂದು ಹೆಸರನ್ನು ಕೇಳಿದವ ರಿಗೆಲ್ಲ ಹೇಳುತ್ತ ಕೈಯಲ್ಲಿ ಬೆತ್ತವನ್ನು ಹಿಡಿದು ಕುಣಿಯುತ್ತ ಹಾಡುತ್ತ ತಾನಿರುವ ಶೇಷಾಚಲವನ್ನಿಳಿದು ಆಕಾಶರಾಜನ ಪಟ್ಟಣದ ಕಡೆಗೆ ನಡೆದಳು. ಅರ್ಥಾತ್ ಶ್ರೀನಿವಾಸನೇ ಅಲ್ಲಿಗೆ ಹೋದನು

ನಾರಾಯಣಪುರವು ಆಕಾಶರಾಜನ ರಾಜಧಾನಿ. ನಗರದ ಮಾರ್ಗ ಗಳೆಲ್ಲ ಹೆರವಾಗಿ ಯಾವಾಗಲೂ ಜನರಿಂದ ಕಿಕ್ಕಿರಿದು ತುಂಬಿರುತ್ತಿದ್ದವು. ನಮ್ಮ ಕೊರವಂಜಿಯು ಜನಮೋಹಕವಾದ ಪದಗಳನ್ನು ಹಾಡುತ್ತ ಹಾಡಿಗೆ ಸರಿಯಾದ ಹೆಜ್ಜೆಗಳನ್ನಿಕ್ಕುತ್ತ ರಾಜಮಾರ್ಗದಲ್ಲಿ ನಡೆದಿರುವಳು. ಜನ-

ಜಂಗುಳಿಯು ಆಕೆಯ ವೇಷ ಭೂಷಗಳಿಗೂ, ಗೀತ–ನೃತ್ಯಗಳಿಗೂ ಮೋಹಿಸಿ ಆಕೆಯನ್ನು ಹಿಂಬಾಲಿಸುತ್ತಿರುವದು ಆ ಕೊರವಂಜಿಯು ಹಾದೀ ಹಿಡಿದು ಹೋಗುವಾಗ—" ಪಟ್ಟಣಿಗರಾದ ನರ-ನಾರಿಯರೆ ನಾನು ಭೂತ ಪಿಶಾಚಿಗಳನ್ನು ಬಿಡಿಸಲು ಬಲ್ಲೆ, ಬೇತಾಳ ತೊಲಗಿಸಲುಬಲ್ಲೆ, ಅಪುತ್ರವತಿಯರಿಗೆ ಪುತ್ರರಾಗುವ ಬಗೆ ಹೇಳಬಲ್ಲೆ, ವಧುಗಳಿಗೆ ವರಗಳನ್ನೂ ಶೋಧಿಸಿ ಕೂಡಿಸಲು ಬಲ್ಲೆ. ಸರ್ವರ ಮನಸಿನಲ್ಲಿಯ ಕಾರ್ಯಗಳು ಫಲಕಾರಿಯಾಗುವದನ್ನು ತಿಳಿಸಬಲ್ಲೆ. ಎಲ್ಲವನ್ನೂ ಬಲ್ಲೆ" ಎಂದು ರಾಗಸ್ವರದೊಡನೆ ಬೆರೆಸಿದ ಪದಗಳನ್ನು ನುಡಿಯುತ್ತ ಓಣಿ–ಬೀದಿ ಸಂದಿ–ಗೊಂದಿಗಳನ್ನೆಲ್ಲ ಬಿಡದೆ ಚಲಿಸಹತ್ತಿದಳು. ತಾನು ನುಡಿದಂತೆ ಅವಳನ್ನು ಕಂಡ ಕೆಲವು ರೋಗಪೀಡಿತರು ತತ್ಕಾಲದಲ್ಲಿಯೇ ಗುಣವಡೆದರು. ಊನರು ನಿರ್ವ್ಯಂಗರಾದರು, ಹಲವು ಬಯಕೆಗಳುಳ್ಳವರು ತಮ್ಮ ಇಷ್ಟಗಳನ್ನು ಹೊಂದಿಕೊಂಡರು. ಹೀಗಾಗಿ ಆ ಪುರದ ಬೀದಿಯಲ್ಲಿ ತಿರುಗುವ ಕೊರವಿಯು ಕೇವಲ ಕೊರವಿಯಾಗಿರದೆ ಸಾಕ್ಷಾತ್ ಇಷ್ಟಾರ್ಥವನ್ನು ಪೂರ್ಣಮಾಡುವ ಶ್ರೇಷ್ಠ ದೇವತೆಯೆಂದು ಪುರದ ನರ–ನಾರಿಯರು ಕೊಂಡಾಡಹತ್ತಿದರು. ಹಾ ಹಾ ಅನ್ನುವಷ್ಟರಲ್ಲೇ ಕೊರವಂಜಿಯ ಈ ಮಹತ್ಕರಣಿಯು ಆ ನಗರದ ತುಂಬೆಲ್ಲ ಪಸರಿಸಿತು.

ರಾಜಮಂದಿರದ ಓಲಗದವಳೊಬ್ಬ ಸ್ತ್ರೀಯಳು ಕೊರವಂಜಿಯ ಸಂಗತಿಯನ್ನೆಲ್ಲ ಅರಿತಳು. ಆಕೆಯಲ್ಲಿ ಅಘಟಿತ ಘಟನಾಸಾಮರ್ಥ್ಯವು ಪ್ರಭಲವಾಗಿದ್ದಿರುವದೆಂದು ನಂಬಿದಳು. ಹಾಗೂ ಆ ಸ್ತ್ರೀಯಳು—"ರಾಜಮಂದಿರದಲ್ಲಿ ಪದ್ಮಾವತಿಯು ಅಸ್ವಸ್ಥಳಾಗಿ ಇರುವದರಿಂದ ಅವಳ ರೋಗ ನಿದಾನ–ನಿವಾರಣೆಗಳನ್ನು ಈ ಕೊರವಂಜಿಯಿಂದ ಮಾಡಿಸಲು ರಾಜಪತ್ನಿ 'ಧರಣೀದೇವಿ'ಯವರಿಗೆ ನಾನು ವಿದಿತಪಡಿಸುವೆನು" ಎಂಬ ಹಂಬಲದಿಂದ ತೀವ್ರವಾಗಿ ಅರಮನೆಗೆ ಬಂದಳು. ರಾಜಪತ್ನಿ ಧರಣೀದೇವಿಯು ಮಗಳ ಕಾಹಿಲೆಗಾಗಿ ಚಿಂತಾಯುಕ್ತಳಾಗಿ ಕುಳಿತಿರುವಾಗ ಆ ಸ್ತ್ರೀಯಳು ಕೊರವಂಜಿಯ ಸಾದ್ಯಂತ ಸಂಗತಿಯನ್ನು ಅರುಹಿದಳು. ಆ ಕೂಡಲೇ ಧರಣೀದೇವಿಯು ತನ್ನ ಅರಮನೆಯ ದಾಸಿಯರನ್ನು ಕರೆದು ಕೊರವಂಜಿಯನ್ನು ಕರೆತರಲು ಕಳುಹಿದಳು. ಅವರು ರಾಜಬೀದಿಯಲ್ಲಿ ನಡೆದಿರುವ ಕೊರವಂಜಿಯನ್ನು ಹುಡುಕಿ ಕಂಡು—"ಕೊರವಂಜಿ! ರಾಜಪತ್ನಿ ಧರಣೀದೇವಿಯವರು ನಿನ್ನನ್ನು ಕರೆತರಲು

ನಮ್ಮನ್ನು ಇಲ್ಲಿಗೆ ಕಳಿಸಿರುವಳು. ನೀನು ತಡಮಾಡದೆ ಅಲ್ಲಿಗೆ ಬರಬೇಕು." ಎಂದು ಹೇಳಿದರು. ಆಗ ಆ ಧರ್ಮದೇವಿ ಕೊರವಂಜಿಯು— "ಅಮ್ಮಾ! ನೀವು ರಾಜಪತ್ನಿ ಧರಣೀದೇವಿಯ ಆಜ್ಞೆಯನ್ನು ನನಗೆ ತಿಳಿಸಿದಿರಿ ಇದು ಒಳಿತಾಯಿತು ಅವರ ಅಪ್ಪಣೆಯಂತೆ ಅವಶ್ಯವಾಗಿ ನಾನು ಅವರಿದ್ದಲ್ಲಿಗೆ ಹೋಗತಕ್ಕದ್ದೂ ಯುಕ್ತವಾದದ್ದು. ಆದರೆ ನಾನು ಹೀನ ಜಾತಿಯಲ್ಲಿ ಜನಿಸಿದ ಕೊರವಿ, ಅಷ್ಟದರಿದ್ರಳು; ಮೇಲಾಗಿ ರೂಪದಿಂದ ನಿಂದ್ಯಳು. ನಿಮ್ಮ ರಾಜಪತ್ನಿಯು ಅಷ್ಟೈಶ್ವರ್ಯನಿರತಳು, ಸರ್ವ ಸೌಭಾಗ್ಯ ಸಂಪನ್ನಳು ಅಂದಮೇಲೆ ನಮ್ಮಂಥ ದೀನ ದರಿದ್ರರನ್ನು ತನ್ನ ಮಂದಿರಕ್ಕೆ ಕರೆಯಿಸಿಕೊಳ್ಳುವಳೆನ್ನುವ ಮಾತು ಸರಿಯಾಗಲಾರದು ಒಂದು ವೇಳೆ ನನ್ನನ್ನು ಕರೆಯಿಸಿಕೊಂಡು ನನ್ನಿಂದ ಆವಳು ಹೊಂದುವ ಭಾಗ್ಯವೇನು? ಮುದುಕೆಯಾದ ನನ್ನನ್ನು ಕಂಡು ತನ್ನ ಸಖಿಯರಿಂದ ಕೂಡಿ ನನಗೆ ಹುಡುಗಾಟಿಕೆ ಮಾಡಬಹುದು ಇಲ್ಲವೆ ಆಕೆಯೂ ತಿರಿದುಂಬುವ ತಿರಿಕೆಯಾದ ನನ್ನನ್ನು ತನ್ನ ಈ ಊರು ಬಿಡಿಸಿ ಹೊರಗೆ ಹಾಕಲು ಕರೆಯಿಸಿರಬಹುದು ಇದೇ ನಿಮಿತ್ತವಿರಬಹುದು ಇನ್ನು ನಾನು ಈ ನಗರದಲ್ಲಿ ನಿಲ್ಲಲಾರೆ. ಈ ನನ್ನ ಕೂಸಿಗೊಂದಿಷ್ಟು ಕೂಳು ಬಿಕ್ಕೆ ಬೇಡಿಕೊಂಡು ಹೋಗುವೆನು. ಹೋಗಿರೆಮ್ಮ ಹೋಗಿರಿ. ನಾನು ನಿಮ್ಮ ಊರಿನಲ್ಲಿ ಇರಲು ಬಂದಿರಲಿಲ್ಲ ಇದನ್ನು ರಾಜಪತ್ನಿಗೆ ತಿಳಿಸಿಬಿಡಿರಮ್ಮಾ" ಎಂದು ಆ ಕೊರವಂಜಿಯು ಆ ಕರೆಯಲು ಬಂದ ರಾಜಮಂದಿರದ ಸೇವಿಕೆಯರನ್ನು ಅಂತರಿಸಿ ಮುಂದೆ ಸಾಗಿದಳು ಆಗ ಸೇವಿಕೆಯರು ಆಕೆಯನ್ನು ಕರೆದೊಯ್ಯಲು ನಿರುಪಾಯರಾಗಿ ಕೂಡಲೇ ರಾಜಪತ್ನಿಯ ಬಳಿಗೆ ಹೋದರು ಹಾಗು ಆ ಧರಣಿದೇವಿಯ ಮುಂದೆ ತಾವು ಕಂಡಂತೆ ಆ ಕೊರವಂಜಿಯು ಓಣಿಯಲ್ಲಿ ಮಾತಾಡಿದ ಅಘಟಿತಘಟನೆಯ ಒಂದೆರಡು ಸಂಗತಿ ತಿಳಿಸಿದರು ಹಾಗು ಆ ಕೊರವಂಜಿಯು ನಿಮ್ಮ ಭಯದಿಂದ ಇಲ್ಲಿಗೆ ಬಾರದೆ ಈ ನಗರವನ್ನು ಬಿಟ್ಟು ಹೋಗಲು ಸಿದ್ಧಳಾಗಿರುವಳು ಇಷ್ಟರಲ್ಲೇ ಆಕೆ ಹೊರಟಿರಬಹುದು. ಎಂದು ತಿಳಿಸಿದಳು. ಆಗ ಧರಣೀದೇವಿಯು—"ನಾನೇ ಆ ಕೊರವಂಜಿಯ ಬಳಿಗೆ ಬರುವೆನು ಆಕೆಯನ್ನು ಇಲ್ಲಿಗೆ ಕರೆತಂದು ನಮ್ಮ ಪದ್ಮಾವತಿಯನ್ನು ಆಕೆಯ ಕಣ್ಣಿಗೆ ಹಾಕೋಣ. ತೀವ್ರನೇ ನಡೆಯಿರಿ. ಆಕೆಯ ಹತ್ತಿರ" ಎಂದು ಸೇವಿಕೆಯರಿಂದ ಕೂಡಿಕೊಂಡು ಕೊರವಂಜಿಯ

ದನಿ ಬಂದತ್ತ ಸಾಗಿದಳು. ಒಂದು ಬೀದಿಯಲ್ಲಿ ತನ್ನ ಮಗುವನ್ನೆತ್ತಿಕೊಂಡು ಅಲೆಯುತ್ತಿದ್ದ ಕೊರವಂಜಿಯನ್ನು ಕಂಡಳು. ತಾನು ರಾಜನ ಹೆಂಡತಿ. ಇವಳು ಬೀದಿಯ ಭಿಕ್ಷುಕಿ. ಇವಳಿಗೇಕೆ ನಾನು ಸತ್ಕಾರ–ನಮಸ್ಕಾರಗಳನ್ನು ಮಾಡಬೇಕು ? ಎಂಬದನ್ನು ಮನಸ್ಸಿನಲ್ಲಿ ತಾರದೆ ಆಕೆಯನ್ನು ಕಂಡಕೂಡಲೇ ಆಕೆಯ ಪಾದಗಳಿಗೆ ನಮಸ್ಕಾರ ಮಾಡಿದಳು. ರಾಜಪತ್ನಿಯ ತರುವಾಯ ಆಕೆಯ ಸಂಗಡಿಗ ಸ್ತ್ರೀಯರೆಲ್ಲರೂ ಧಡಧಡ ಬಂದು ವಂದಿಸಿದರು. ಕೊರ ವಂಜಿಯು ಎಲ್ಲರಿಗೂ 'ಸ್ವಸ್ತಿ' ವಾಚಕ ಶಬ್ದದಿಂದ ಪ್ರತ್ಯುತ್ಥಾನ ಮಾಡಿದಳು ಬಳಿಕ ಧರಣೀದೇವಿಯು ಆಗ್ರಹಪೂರ್ವಕವಾಗಿ ಕೊರವಂಜಿಯನ್ನು ಕುರಿತು " ತಾಯಿ, ಕಲ್ಯಾಣದಾಯಿನಿ, ಧರ್ಮದೇವಿ. ನಿನ್ನನ್ನು ಕಂಡೊಡನೆ ನೀನು ಸಾಕ್ಷಾತ್ ಧರ್ಮೋದ್ಧಾರಕಳೆಂದೇ ನನಗೆ ನಿಶ್ಚಿತವಾಯಿತು ನೀನು— 'ನಾನು ಹೀನ ಕುಲೋತ್ಪನ್ನೆ ಪುಳಿಂದಿನಿ' ಎಂದು ಭಾವಿಸಬೇಡಮ್ಮಾ. ನಮ್ಮ ಸುದೈವದಿಂದ ನಿನ್ನ ದರ್ಶನವು ನಮಗಾಯಿತು ಧರ್ಮದೇವಿ! ಇನ್ನು ನೀನ್ನ ನಮ್ಮ ಮನೆಗೆ ಬಂದು ನಿನ್ನ ಕಲ್ಯಾಣಕರ ನುಡಿಗಳಿಂದ ನಮ್ಮೆಲ್ಲರನ್ನು ಕರು ಣಿಸಮ್ಮಾ " ಎಂದು ಬೇಡಿಕೊಂಡಳು ಆಗ ಧರ್ಮದೇವಿಯು—" ಧರಣೀ ದೇವಿ! ನಿಮ್ಮ ಆಗ್ರಹದಿಂದ ನಾನು ನಿಮ್ಮ ರಾಜಗೃಹಕ್ಕೆ ಬರುವೆ. ನಿಮ್ಮ ಮನೋಬಯಕೆಗಳು ಈಡೇರುವಂತೆ ಮಾಡುವೆ. ನಾನಾಡುವ ನುಡಿಗಳು ತ್ರಿಕಾಲದಲ್ಲಿಯೂ ಅಸತ್ಯವಾಗಲಾರವು. ಇಷ್ಟೇ ಅಲ್ಲ ನನ್ನ ವಾಕ್ಯಗಳನ್ನು ನೀವು ತಿರಸ್ಕರಿಸಿದ್ದಾದರೆ ಪರಿಣಾಮವು ಕಠಿಣತರಕ್ಕೆ ಇಳಿಯಬಹುದು. ಮೊದಲೇ ನಾನು ಸ್ಪಷ್ಟವಾಗಿ ಹೇಳುವೆ. ಹಾಗೆ ನಿನ್ನ ಇಷ್ಟವಿದ್ದುದಾದರೆ ನಾನು ನಿನ್ನ ರಾಜಮಂದಿರಕ್ಕೆ ಬರುವೆ. ಇಲ್ಲವಾದರೆ ನನಗೆ ನಗರದ ಓಣಿ ಬೀದಿಗಳೇ ನನ್ನನ್ನು ಮನ್ನಿಸುವವು. ಈ ನನ್ನ ಸ್ಪಷ್ಟ ನುಡಿಗಳಿಗೆ ನೀನು ದುಷ್ಟ ಕೊರವಿಯೆಂದು ಅಂದುಕೊಳ್ಳಬಹುದು, ನೊಂದುಕೊಳ್ಳಬಹುದು. ಇದ್ದುದನ್ನು ಇದ್ದಂತೆ ನುಡಿಯಲು ನನಗೆ ಯಾವ ಭೀತಿಯೂ ಇಲ್ಲ. ಧರಣೀ ದೇವಿ! ಇನ್ನೂ ನಿನಗೆ ನಾನು ಹೇಳುವದೇನಂದರೆ— 'ನಾನು ಕೊರವಂಜಿಯು ಆದರೆ ಅಂಥಿಂಥ ಸಾಮಾನ್ಯ ಕೊರವಿಯಲ್ಲ. ಸರ್ವ ಭಾಗ್ಯಸಂಪನ್ನ ನರ ನಾರಾಯಣನು ನನ್ನ ಪತಿರಾಜನು. ಈ ಮಮತೆಯ ಮಗುವು ಆತನ ಪ್ರತಿ ರೂಪವು. ಆ ನನ್ನ ಒಡೆಯನ ಅನುಜ್ಞೆಯಿಂದಲೇ ನಾನು ಇಲ್ಲಿಗೆ ಬಂದಿರುವೆ.

ನಾನು ತಿರುಗದ ದೇಶಗಳಿಲ್ಲ, ಕಾಣದ ನೋಟಗಳಿಲ್ಲ, ಅರಿಯದ ವಿದ್ಯೆಗಳಿಲ್ಲ. ಪ್ರತಿಯೊಂದು ಸಂಗತಿಯನ್ನೂ ಬಲ್ಲೆನು ಇವೆಲ್ಲವನ್ನು ನಿನಗೆ ಹೇಳುವ ಉದ್ದೇಶವಿಷ್ಟೇ! ನಿನ್ನ ಮಂದಿರದಲ್ಲಿ ನನ್ನ ಪ್ರವೇಶವೂ ನಿನ್ನ ಮಂದಿರದಿಂದ ನನ್ನ ನಿರ್ಗಮನವೂ ಸುಖಕರವಾಗಬೇಕು ಹಾಗು ಫಲಕಾರಿಯಾಗಬೇಕು. ಇದೇ ನನ್ನ ಇಚ್ಛೆ ಎಂದಳು. ಆಗ ಧರಣೀದೇವಿಯು— 'ಎಲೈ ಧರ್ಮ ದೇವತೆ! ನೀನಂದಂತೆಯೇ ಆಗಲಿ, ಏನೊಂದು ಸಂಶಯ ತಾರದೆ ನಮ್ಮ ರಾಜಗೃಹಕ್ಕೆ ಬರುವದಾಗಬೇಕು," ಎಂದು ಹೇಳಿ ಆ ಕೊರವಂಜಿಯನು ಸಂಗಡ ಕರೆದುಕೊಂಡು ಬಂದಳು. ಆ ಧರ್ಮದೇವತೆ ಕೊರವಂಜಿಯು ತನ್ನ ವೈಯ್ಯಾರವನ್ನು ಬೀರುತ್ತ ಮಂಜುಳ ಪದಗಳನ್ನು ನುಡಿಯುತ್ತ ಧರಣೀ ದೇವಿಯೊಡನೆ ರಾಜಮಂದಿರವನ್ನು ಬಂದು ಸೇರಿದಳು

ಧರಣೀದೇವಿಯು ತನ್ನಲ್ಲಿ ಕರೆದುಕೊಂಡ ಬಂದ ಧರ್ಮ ದೇವತೆ ಕೊರವಂಜಿಯನ್ನು ಮರ್ಯಾದೆ ಪೂರ್ವಕವಾಗಿ ಸ್ವಾಗತಮಾಡಿದಳು. ಪೂಜ್ಯ ಳಿಗೆ ತಕ್ಕ ಉಪಚಾರಗಳು ಆ ಕೊರವಂಜಿಗೆ ನಡೆದವು. ಮಣಿಮಯದ ಆಸನದಮೇಲೆ ಆಕೆಯನ್ನು ಕುಳ್ಳಿರಿಸಿದಳು. ಆಗ ಧರ್ಮದೇವತೆಯು ರಾಜ ಪತ್ನಿಯನ್ನು ಕುರಿತು—' ಧರಣೀದೇವಿ! ನೀನು ಮನೋವಾಕ್ಕಾಯಗಳಿಂದ ಪರಿಶುದ್ಧಳಾಗಿ ಗುರುಸ್ಮರಣೆಯಿಂದ ನನ್ನೆದುರಿಗೆ ಬಂದು ಕುಳಿತುಕೊಳ್ಳು. ಹಾಗು ನಿನ್ನ ಮನಸ್ಸಿನಲ್ಲಿ ನನ್ನನ್ನು ಕೇಳಬೇಕೆನ್ನುವ ಎಲ್ಲ ಪ್ರಶ್ನೆಗಳನ್ನು ನನಗೆ ತಿಳಿಸು. ನಿನ್ನ ಬಯಕೆಗಳನ್ನು ಬಚ್ಚಿಡದೆ ನನ್ನ ಮುಂದೆ ಬಿಚ್ಚಿಇಡು." ಎಂದು ಹೇಳಿದಳು. ಆಗ ಧರಣಿದೇವಿಯು ಕೊರವಂಜಿಯ ಹೇಳಿಕೆಯ ಪ್ರಕಾರ ವರ್ತಿಸಿ ಆಕೆಯ ಎದುರಿನಲ್ಲಿ ಬಂದು ಭಕ್ತಿಯಿಂದ ಕುಳಿತಳು. ಹಾಗು—'ಅಮ್ಮಾ ಧರ್ಮದೇವಿ! ಇನ್ನು ನಾನು ಕೈಕೊಳ್ಳುವ ವಿಧಿ-ವಿಧಾನ ಗಳನ್ನು ತಿಳಿಸು, ಎನ್ನಲು ಕೊರವಂಜಿಯು—' ಭವ್ಯಾನನೇ! ದೇವತಾ ಪ್ರೀತ್ಯರ್ಥವಾಗಿ ಮೊದಲು ಶುಭದಾಯಕವಾದ ಬಾಯಿನವನ್ನು ನೀಡು. ಆನಂತರ ನಿನ್ನ ಮನದಂತರ್ಗತವನ್ನು ಹೇಳು, ಎಂದಳು. ರಾಜಪತ್ನಿಯು ಕೊರವಂಜಿಯು ಹೇಳಿಕೆಯಂತೆ ಪಲೆಯುಳ್ಳ ನವರತ್ನಗಳೊಂದಿಗೆ ಆಕಿಯ ದೇವತೆಗಳ ಸಂತುಷ್ಟತೆಗ ಬಾಗಿಣವನ್ನಿಟ್ಟಳು. ತನ್ನ ಮನಸ್ಸಿನಲ್ಲಿಯ ಬಯಕೆ ಯನ್ನು ತಿಳಿಸಲು ಆಕೆಯನ್ನು ಕೇಳಹತ್ತಿದಳು— 'ತಾಯಿ! ಧರ್ಮದೇವತ!




ಕೊರವಂಜಿ ವೇಷದ ಶ್ರೀನಿವಾಸನು

ನೀನು ನಮ್ಮ ಉದ್ಧಾರಕ್ಕಾಗಿ ಬಂದಿರುವಿ ಎಂದು ನಮ್ಮ ಪೂರ್ಣನಂಬಿಗೆ ಯಿದೆ. ನೀನು ಯಾವದಕ್ಕೂ ಸಂಕೋಚವಡದೆ ನನ್ನ ಮನಸ್ಸಿನಲ್ಲಿಯ ದುಗುಡವನ್ನೂ ಬಯಕೆಯನ್ನೂ ಸತ್ಯವಾಗಿ ನುಡಿಯಬೇಕು. " ಎನ್ನಲು ಆ ಧರ್ಮದೇವತೆಯು—' ರಾಜಪತ್ನಿಯೇ, ಶುಭಾಂಗಿಯೇ ! ನಾನು ಯಾವಾ ಗಲೂ ದಿಟವನ್ನೇ ಬಳಿಸುವನಲ್ಲದೆ ಸಟೆಯನ್ನು ಅರಿಯೆನು. ಈ ನನ್ನ ಕೂಸಿನ ಆಣೆಯನ್ನಿಟ್ಟುಕೊಂಡು ನುಡಿಯುವೆನು 'ಒಳಿತು ಎನ್ನು, ಎಂದಳು. ರಾಜ ಪತ್ನಿಯು ' ಒಳಿತು, ನಿರಂತರವೂ ಒಳಿತು ' ಎಂದು ನುಡಿದಳು. ಆಗ ಕೊರ ವಂಜಿಯು ತನ್ನ ಮಾತನ್ನು ಮುಂದರಿಸಿ—ಧರಣೀದೇವಿ ! ಈ ನನ್ನ ಮಗು ಹಸಿದು ಕೀಸರ ಬಾಸರಿಟ್ಟಿದೆ. ಇದನ್ನು ಮೊದಲು ನಾನು ಶಾಂತಗೊಳಿಸ ಬೇಕಾಗಿದೆ. ನಿನ್ನೆಯಾಗಲಿ, ಇಂದೆಯಾಗಲಿ ಮಾಡಿದ ಅನ್ನವು ತುಸು ಉಳಿ ದಿದ್ದರೆ ನೀಡಮ್ಮಾ, ಎನ್ನಲು ಧರಣೀದೇವಿಯು ಒಂದು ಬಂಗಾರದತಟ್ಟೆಯಲ್ಲಿ ಕ್ಷೀರಾನ್ನವನ್ನು ಬಡಿಸಿತಂದು ಧರ್ಮದೇವತೆಯ ಕೈಗೆ ಕೊಟ್ಟು—' ಧರ್ಮ ದೇವತೆ ! ಮೊದಲು ನಿನ್ನ ಕೂಸಿಗೆ ಇದನ್ನು ಉಣ್ಣಿಸಿ ಶಾಂತಗೊಳಿಸು ' ಎಂದಳು. ಕೊರವಂಜಿಯು ತನ್ನ ಕೂಸನ್ನು ಕುಳ್ಳಿರಿಸಿ ಅದಕ್ಕೆ ತುತ್ತುಮಾಡಿ ಉಣ್ಣಿಸಹೋಗಲು ಆ ಶಿಶುರೂಪನಾದ ಕಮಲಜನು ಒಂದು ಅಗಳು ಸಹ ಸ್ವೀಕರಿಸವಾದನು. ಆ ವೇಷಾಂತರಿತ ದೇವನು ಮನುಷ್ಯರಿಂದ ಸಿದ್ಧವಾದ ಅನ್ನವನ್ನು ಉಣ್ಣದೆ ಲೌಕಿಕರ ಕೂಸಿನಂತೆ ಅಳಹತ್ತಿತು. ಆಗ ಅಳುತ್ತಿರುವ ಆ ಕೂಸನ್ನು ಕೊರವಿಯು ಸಿಟ್ಟಿನಿಂದ ಹೊಡೆದು–'ಛೀ ದುರಾಚಾರಿ, ಪಾಪಿ, ಚಾಂಡಾಲಾ, ಗಡ್ಡೆ–ಗೆಣಸುಗಳನ್ನು ಸವಿಯಾಗಿ ಮಾಡಿ ತಿನ್ನುವ ನಿನಗೆ ರಾಜಮಂದಿರದ ಅಮೃತೋಪಮ ಭೋಜನವು ಹೇಗೆ ರುಚಿಕರವಾದೀತು ? ನಿಜವಾದ ವಿಧಿಯು ನೀನು. ಎಂದು ಹಲವು ರೀತಿಯಿಂದ ಕೂಸನ್ನು ಬೈದಳು. ಮತ್ತು ಧರಣೀದೇವಿಯನ್ನು ಕುರಿತು ಆಕೆಯು—ದೇವಿ ! ಈ ನನ್ನ ಮಗು ಏನನ್ನೂ ತಿನ್ನಲೊಲ್ಲದು, ಉಣ್ಣಲೊಲ್ಲದು, ಅಳುವದನ್ನುಬಿಡಲೊಲ್ಲದು ನಿರಂತ ರವೂ ಹೀಗೆಯೇ ನನ್ನನ್ನು ಕಾಡುತ್ತದೆ ಯಾವಾಗಲೂ ಸ್ತನಪಾನವನ್ನೇ ಬಯಸುತ್ತದೆ ನೀವು ನೀಡಿದ ಅನ್ನವನ್ನು ನಾನೇ ಉಂಡು ಬಿಡುವೆ. ಅದ ರಿಂದ ನನ್ನ ಮೊಲೆಯಲ್ಲಿ ಹಾಲು ತೋರಿ ತೊರೆಯುವವು. ಅವನ್ನು ಕುಡಿ ದಾದರೂ ಈ ನನ್ನ ಮಗು ಸುಮ್ಮನಾಗಲಿ ' ಎಂದು ನುಡಿದು ಕೊರವಂಜಿಯು

ತಾನೇ ಆ ರುಚಿಕರವಾದ ಕ್ಷೀರಾನ್ನವನ್ನು ಭುಂಜಿಸಿಬಿಟ್ಟಳು. ಎಲ್ಲರೂ ನೋಡ ನೋಡುತ್ತಿರಲು ನಿರ್ದಾಕ್ಷಿಣ್ಯವಾಗಿ ಉಂಡು ತೇಗಿದಳು. ಮತ್ತು ಶಾಂತತೆಯನ್ನು ಹೊಂದಿದಳು. ಬಳಿಕ ರಾಜಪತ್ನಿಯನ್ನು ಕುರಿತು–' ದೇವಿ! ಮುಖಶುದ್ಧಿಗಾಗಿ ನನಗೆ ಸ್ವಲ್ಪ ತಾಂಬೂಲನ್ನು ಕೊಡುವಿರಾ? ಎಂದು ಕೇಳಲು ಧರಣೀದೇವಿಯು—' ಈ ಕೊರವಿಯಾಗಲಿ, ಇನ್ನುಳಿದ ಬೇರೆ ಕೊರವಿಯರಾಗಲಿ ಕೊಡುವವರನ್ನು ಕಂಡು ತಿರುತಿರುಗಿ ಕಾಡಿ ಬೇಡುವದೇ ಅವರ ವಾಡಿಕೆಯಿರುವದು' ಎಂದು ನುಡಿದು ಎಲೆ–ಅಡಿಕೆ ಮೊದಲಾಗಿ ತ್ರಯೋದಶ ವಸ್ತುಮಿಶ್ರಿತ ತಾಂಬೂಲನ್ನು ತಂದು ಆ ಧರ್ಮದೇವಿಗೆ ನೀಡಿದಳು.

ರಾಜಪತ್ನಿಯುಕೊಟ್ಟ ತಾಂಬೂಲನ್ನು ಮೆಲ್ಲುತ್ತ ಕೊರವಂಜಿಯು ತನ್ನ ಮಗುವನ್ನು ತೊಡೆಯಮೇಲೆ ಮಲಗಿಸಿಕೊಂಡು ಪೂರ್ವ ದಿಕ್ಕಿಗೆ ಮುಖಮಾಡಿ ಕುಳಿತಳು. ತನ್ನ ಬುಟ್ಟಿಯನ್ನು ಮುಂದೆ ಸರಿಸಿಕೊಂಡು ಕಾಲನ್ನು ಮುಂಚಾಚಿಕೊಂಡು ಕುಳಿತಳು. ಧರ್ಮದೇವಿಯ ಮುಖದಿಂದ ತಮ್ಮ ಅದೃಷ್ಟವನ್ನೂ ಬಯಕೆಗಳನ್ನೂ ಅರಿತುಕೊಳ್ಳುವದಕ್ಕೆ ಧರಣೀದೇವಿ ಮೊದಲಾದ ರಾಜಮಂದಿರದ ನಾರಿಯರು ಕೈಮುಗಿದುಕೊಂಡು ಕೊರವಂಜಿಯ ಸಮ್ಮುಖದಲ್ಲಿ ನೀಲಜವನಿಕೆಯ ಮುಂದೆ ಪರಿಶೋಭಿಸುವ ರನ್ನದೀವಿಗೆಗಳ ಸಾಲಿನಂತೆ ಸಾಲಾಗಿನಿಂತರು. ಸುರಲೋಕದ ಇಂದ್ರಾದಿದೇವತೆಗಳೆಲ್ಲ ತಮ್ಮ ಸ್ತ್ರೀಯರಿಂದಕೂಡಿ ಭೂಲೋಕದ ಚರ್ಮ ಚಕ್ಷುವಿಗಳಿಗೆ ಮರೆಯಾಗಿ ಅಂತರಿಕ್ಷದಲ್ಲಿ ಬಂದುನಿಂತರು. ಹಾಗು ಅವರು ಶ್ರೀನಿವಾಸನು ಭೂಲೋಕದಲ್ಲಿ ಬಹುರೂಪಿಯಾದ ಜಾತಿಗೇರನಂತೆ ಖೇಲನಮಾಡಿ ಜಗತ್ತನ್ನೇ ಬೆರಗುಗೊಳಿಸುವದನ್ನು ಕೌತುಕದಿಂದ ನೋಡಿದರು. ಅಲ್ಲದೆ ಅವರು ತಮ್ಮ ತಮ್ಮೊಳಗೆ—' ನಾರಾಯಣಪುರದ ಆಕಾಶರಾಜನ ಸುಕೃತಕ್ಕೆ ಎಣೆಯಿಲ್ಲ. ಅಂತೆಯೇ ಜಗತ್ಪತಿ ಶ್ರೀಹರಿಯು ಸಾಮಾನ್ಯಮಾನವನಂತೆ ಅವನ ಅಳಿಯತನವನ್ನು ಬಯಿಸಿದನು. ಶ್ರೀನಿವಾಸನು ಬಯಿಸಿದ ಆ ಪದ್ಮಾವತಿಯೇ ಧನ್ಯಳು. ಆತನಿಗೆ ಕನ್ಯೆಯನ್ನು ನೀಡುವ ದಾತಾರನಾದ ಆಕಾಶರಾಜನೇ ಧನ್ಯನು. ಎಂದು ಕೊಂಡಾಡಹತ್ತಿದರು.

---

# ೯ನೆಯ ಅಧ್ಯಾಯ

ರಾಜಪತ್ನಿ ಧರಣೀದೇವಿಯಿಂದ ಸತ್ಕಾರ ಹೊಂದಿದ ಧರ್ಮದೇವತೆಯು ತಾಂಬೂಲನ್ನು ಮೆಲ್ಲುತ್ತ ಸುಖಾಸೀನಳಾಗಿ ಕುಳಿತುಕೊಂಡು ತನ್ನ ಕುಲದೇವತೆಗಳನ್ನು ಸ್ಮರಿಸತೊಡಗಿದಳು ಇಷ್ಟದೇವತೆಯನ್ನು ಭಜಿಸಹತ್ತಿದಳು. ತನ್ನ ವಂಶಪರಂಪರೆಯಾಗಿ ಪೂಜೆಯನ್ನು ಸ್ವೀಕರಿಸುತ್ತ ಬಂದ ದೇವತೆಗಳನ್ನೆಲ್ಲ ಹೃದ್ದೇಶದಲ್ಲಿರಿಸಿಕೊಂಡು ಆ ದೇವತೆಗಳ ತಾರತಮ್ಯವನ್ನರಿತು ಧ್ಯಾನಿಸಹತ್ತಿದಳು. ಮೊದಲು ಲಕ್ಷ್ಮೀಸಹಿತವಾಗಿ ಆದಿನಾರಾಯಣನನ್ನು ತದೇಕ ಚಿತ್ತದಿಂದ ಸ್ಮರಿಸಿದಳು. ತದನಂತರ ಕ್ರಮವಾಗಿ ಶಾರದಾ—ಬ್ರಹ್ಮರನ್ನೂ ಪಾರ್ವತಿ—ಪರಮೇಶ್ವರರನ್ನೂ ಶಚೀ—ಪುರಂದರರನ್ನೂ ಮನೋಭೀಷ್ಟತೆಗಾಗಿ ಸ್ತುತಿಸಿದಳು, ಶ್ರುತಿ—ಸ್ಮೃತಿಯುಕ್ತ ವಿಧಾನಗಳಿಂದ ಕಲ್ಪಿತ ಪೂಜೆಯನ್ನರ್ಪಿಸಿದಳು. ಇಷ್ಟಾದ ಬಳಿಕ ಅಷ್ಟದಿಕ್ಪಾಲಕರಾದ ಅಗ್ನಿ, ಯಮ, ಮೊದಲಾದವರನ್ನು ವಂದನೆಯೊಂದಿಗೆ ಸ್ಮರಿಸಿದಳು. ನವನಾಗರಾದ ಅನಂತ, ವಾಸುಕಿ, ಮೊದಲಾದವರನ್ನು ನೆನೆದಳು ನಾರದಾದಿ ಸುರಮುನಿಗಳನ್ನೂ ಕಶ್ಯಪ, ಅತ್ರಿಮೊದಲಾಗಿ ಅರುಂಧತಿ ಸಹಿತ ಎಂಟುಜನ ಋಷಿವರ್ಗವನ್ನೂ; ಚಂದ್ರಲೋಕಸ್ಥಿತ ಪಿತೃಗಳನ್ನೂ ನಳ—ನಹುಷಾದಿ ಷಟ್ಚಕ್ರವರ್ತಿಗಳನ್ನೂ ಅವರವರ ನಾಮೋಚ್ಚರಣದಿಂದ ಅರ್ಚಿಸಿದಳು ಇವರಲ್ಲದೆ ದ್ವಾದಶ ಜ್ಯೋತಿರ್ಲಿಂಗಗಳ ಮಹತ್ವವನ್ನು ಕೊಂಡಾಡಿದಳು ಗಯೆಯ—ವಿಷ್ಣುಪದ, ತ್ರ್ಯಂಬಕೇಶ, ಪುರಿಯ ಜಗನ್ನಾಥ, ಪಂಢರಿಯ ಪಾಂಡುರಂಗ, ಹಂಪೆಯ ವಿರೂಪಾಕ್ಷ; ಇವರೆಲ್ಲರನ್ನು ಏಕೋಭಾವದಿಂದ ನಮಿಸಿದಳು. ಜಾಹ್ನವೀ, ಜಮುನೆ—ಗೋದೆ ಮೊದಲಾದ ಪುಣ್ಯ ಪವಿತ್ರನದಿಗಳನ್ನೂ ಮಹತ್ತಮ ಮೇರುಗಿರಿಯಾದಿ ಪರ್ವತಗಳನ್ನೂ, ಒಂದೂ ಉಳಿಯಗೊಡದೆ ಉಚ್ಚರಿಸಿದಳು ಒಟ್ಟಿನಲ್ಲಿ ಹೇಳುವದಾದರೆ ಆರ್ಯಾವರ್ತದ ಉತ್ತರದ ಮೊದಲುಮಾಡಿ ದಕ್ಷಿಣದ ಸೇತುಬಂಧದ ವರೆಗಿನ ಪ್ರದೇಶದಲ್ಲಿ ಬರುವ ಎಲ್ಲ ತೀರ್ಥಗಳೂ, ಪುಣ್ಯಕರವಾದ ಕ್ಷೇತ್ರಗಳೂ, ಭೂಜಲಾಂತರ್ಗತ ಅದೃಷ್ಟಶಕ್ತಿ—ಸಮನ್ವಿತವಸ್ತುಗಳೂ ಆ ಧರ್ಮದೇವತೆಯ ಮುಖದಿಂದ ಉದ್ಗಳಿತವಾಗದೆ ಉಳಿಯಲಿಲ್ಲ. ಆಕೆಯ ವಂದನೆಯನ್ನರ್ಪಿಸುವಲ್ಲಿ ಅವಳ ಸ್ಮರಣಗೆ ಬಾರದೆ ಹಿಂದುಳಿದ ದೇವತೆಗಳಿ

ಲಿಲ್ಲ. ಇಷ್ಟೆಲ್ಲ ತನ್ನ ಅಭೀಷ್ಟದಾಯಕ ವಂಸನಾದಿ ಕ್ರಿಯೆಯನ್ನು ಸಾಗಿಸಿ ಕೊನೆಗೆ ಕರವೀರಪುರದ ಮಹಾಲಕ್ಷ್ಮಿಯೊಡನೆ ಬೆಟ್ಟದೊಡೆಯ ಅಪ್ಪ ತಿಮ್ಮಪ್ಪನನ್ನು ನೆನೆಸಿಕೊಂಡು ಧರಣೀದೇವಿಯೊಡನೆ ಮೆಲ್ಲಮೆಲ್ಲನೆ ಮಾತುಗಳಿಗೆ ಆರಂಭಿಸಿದಳು.

'ಧರಣೀದೇವೀ! ನಾನು ನಿನ್ನ ಮನಸ್ಸಿನಲ್ಲಿಯ ಮಾತುಗಳನ್ನು ಹೇಳುವ ಮೊದಲು ಜಗತ್ತಿಗೆ ಆಧಾರವಾಗಿರುವ ಬ್ರಹ್ಮಾಂಡದಂತೆ ನನಗೆ ಆಧಾರವಾಗಿರುವ ಈ ಬುಟ್ಟಿಯ ಹಾಗು, ವಿಧಿಯಾಗಿ ನನ್ನನ್ನು ಕಾಡುತ್ತಿರುವ ಈ ನನ್ನ ಮಗನ ಆಣೆಗಳನ್ನಿಟ್ಟುಕೊಳ್ಳುವೆನು. ಅಲ್ಲದೆ ನನ್ನ ತಾಯಿ, ತಂದೆ, ಗುರು ಹಾಗು ಬದರಿಯಲ್ಲಿರುವ ನನ್ನೊಡೆಯ ಇವರೆಲ್ಲರ ಆಣೆಯನ್ನು ನನ್ನ ಹಾಗು ನಿನ್ನ ನಡುವೆ ಇಟ್ಟು ನಿನ್ನಕೂಡ ಮಾತನ್ನಾಡುವೆನು. ಆ ನನ್ನ ಮಾತುಗಳು ದಿಟವೆಂದುನಂಬು.' ಎಂದು ಕೊರವಂಜಿಯು ರಾಜಪತ್ನಿಗೆ ಹೇಳಿದಳು.

ರಾಜಪತ್ನಿಗೆ ಕೊರವಿಯ ಮುಖದಿಂದ ಮಾತುಗಳನ್ನು ಕೇಳಬೇಕೆಂಬ ಆತುರತೆ. ಅದನ್ನು ಲಕ್ಷಿಸದೆ ಕೊರವಂಜಿಯು ಆಕೆಯ ಮನಸಿನ ಮಾತನ್ನು ಹೇಳದೆ ಹೆಚ್ಚೆಚ್ಚು ಕಾಲಕಳೆಯ ಹತ್ತಿರುವಳು. ನಡನಡುವೆ ವ್ಯರ್ಥ ವೇಳೆಯನ್ನು ನೂಕಲು ರಾಜಪತ್ನಿಯಿಂದ ತಾಂಬೂಲ ಬೇಡಿಕೊಂಡು ಅಗಿಯುವಳು ಕೂಸು ಅಳುವ ನೆವವನ್ನು ಮುಂದೆಮಾಡಿ ಇನ್ನೂ ವೇಳೆಗಳೆಯುವಳು. ಯಾವ ದೇಸಂಗತಿಯಾಗಲಿ ಮಾತಾಗಲಿ ಅತಿಯಾಗಿ ಬಳಕೆಯಾದರೆ ಅವರಲ್ಲಿ ಅನಾದರೆಂಬ ಕೊಳೆ ಹುಟ್ಟುವದು ಸಹಜ. ಕೊರವಂಜಿಯು ಬುದ್ಧಿಪೂರ್ವಕವಾಗಿ ಕಾಲಹರಣಕ್ಕೆ ಆಸ್ಪದಕೊಡುತ್ತಿದ್ದಳೋ ಅಥವಾ ಆಕೆಯು ಸಹಜವಾದ ವೇಳೆ ನೂಕುವ ನಡತೆಯವಳಿದ್ದಳೋ ಇದು ಯಾರಿಗೂ ತಿಳಿಯದಂತಾಯಿತು. ಆದರೂ ರಾಜಪತ್ನಿಯು ಈಕೆ ಅದಾವದೋ ಕಾರಣದಿಂದ ತಿಳಿದೂ ತಿಳಿದೂ ವೇಳೆಗಳೆಯುವಳು ಎಂದು ಮಾತ್ರ ತಿಳಿದುಕೊಂಡಳು. ಕೊರವಂಜಿಯು ಏನನ್ನಾದರೂ ಬೇಡಹತ್ತಲು ರಾಜಪತ್ನಿಯು— 'ಈ ಕೊರವಿಯರು ಕೊಡುವವರನ್ನೇ ಪುನಃ ಪುನಃ ಬೇಡುವ ನಡತೆಯವರಿರುವರು ಎಂದು ನುಡಿದಳು. ಇಷ್ಟೇ ಅಲ್ಲ ಆಕೆಯು ಕೊರವಿಯನ್ನು ಕುರಿತು "ಧರ್ಮದೇವತೆ! ವ್ಯರ್ಥ ಕಾಲ ಹರಣಕ್ಕೆ ಆಸ್ಪದಬೇಡ. ನನ್ನ ಮನೋಗತ ಸಂಗತಿಯನ್ನು ಹೇಳು." ಎಂದು ನುಡಿದಳು.

ರಾಜಪತ್ನಿಯ ಪ್ರಶ್ನೆ ಕೇಳುವ ಲವಲವಿಕೆ ಹೆಚ್ಚಾದುದನ್ನೂ ಆಕೆಯು ತನ್ನ ಮಾತುಗಳ ಮೇಲೆ ಪೂರ್ಣ ನಂಬಿಗೆ ಇಡುವಳೆಂಬುದನ್ನೂ ಕೊರ-ವಂಜಿಯು ತನ್ನ ಕಾಲಹರಣ ಪ್ರಯೋಗದಿಂದ ಅರಿತಳು. ಇನ್ನು ಮೇಲೆ ಇದಕ್ಕೂ ನಿಲ್ಲಿದಲ್ಲಿ ತನ್ನ ಕಾರ್ಯೋದ್ದೇಶವು ಭಂಗವಾದೀತೆಂಬ ವಿಚಾರ ವುಳ್ಳವಳಾಗಿ ರಾಜಪತ್ನಿಯೊಡನೆ ತನ್ನ ಮಾತು ಮುಂದುವರಿಸಿದಳು. ತನ್ನ ಕೈಗೋಲವನ್ನು ಹಣೆಗ ಹಚ್ಚಿಕೊಂಡು "ತಾಯಿ! ನಿನಗೆ ಅಪರೂಪಳಾದ ಒಬ್ಬ ಮಗಳು ಇರುವಳಲ್ಲವೇ? ಅವಳು ಪದ್ಮಾವತಿಯೆಂಬ ಹೆಸರಿನಿಂದ ಸಂಬೋಧಿಸಲ್ಪಡುವಳಲ್ಲವೇ? ಅವಳಿಗೆ ದೇಹದಲ್ಲಿ ಜ್ವರತುಂಬಿ ಮಾತನಾಡದೆ ಮಲಗಿದಂತೆ ಕಾಣುವದಲ್ಲ! ಹೌದೇ? ಎಂದು ಹೇಳ ಆ ಎಲ್ಲ ಪ್ರಶ್ನೆಗಳಿಗೆ ರಾಜಪತ್ನಿಯಿಂದ 'ಹೌದು' ಎಂದು ಉತ್ತರವನ್ನು ಪಡೆದಳು ಆ ಬಳಿಕ 'ಧರಣೀದೇವಿ! ಆಕೆಯ ರೋಗ ನಿವಾರಣೆಗಾಗಿ ನಿನಗೆ ಬಹಳ ಕಳವಳಿಕೆ ಯಾಗಿದೆ. ನಡೆದುದೇನೆಂದರೆ ಆ ನಿನ್ನ ಮಗಳು ಪ್ರಾಪ್ತ ವಯಸ್ಕಳಾಗಿ ಅದಕ್ಕ ನುಸರಿಸಿ ಮೊನ್ನಿನ ದಿವಸ ಚಲುವನಾದ ಯುವಕನೊಬ್ಬನನ್ನು ಸಹಜವಾಗಿ ಕಂಡಳು ಅವನೊಡನೆ ನಿರ್ವ್ಯಾಜವಾಗಿ ಕಲಹವಾಡಿದಳು ಹಾಗು ಮೋಹ ವುಂಟಾಗಿ ಆತನನ್ನು ಕಟಾಕ್ಷಬೀರಿ ನಿರೀಕ್ಷಿಸಿದಳು ಎಂದು ಹೇಳಿದಳು. ಅದನ್ನು ಕೇಳಿ ರಾಜಪತ್ನಿಯು 'ಅಮ್ಮಾ ಮುಂದೇನು?' ಎಂದಿಷ್ಟೇ ನುಡಿ ದಳು ಕೊರವಿಯು ತನ್ನ ಕಣ್ಣನ್ನು ಹಿಗ್ಗಿಸಿ "ಮುಂದೇನೆಂದು ಏಕೆ ಕೇಳುವಿ? ತತ್ಪರಿಣಾಮವಾಗಿಯೇ ನಿನ್ನ ಮಗಳ ಮೈಯಲ್ಲಿ ಜ್ವರತುಂಬಿವೆ. ಅವು ದೂಷಿತ ಜ್ವರಗಳಾಗದಿದ್ದರೂ ವಿರಹತಾಪ್ರೇರಿತ ಜ್ವರವಾಗಿದೆ. ಧರಣೀ-ದೇವಿ, ಅದನ್ನೂ ಹೇಳುವೆ ಕೇಳು ಉಳಿದ ದೂಷಿತ ಜ್ವರಗಳಂತೆ ಈ ಜ್ವರವು ಔಷಧ, ಯಂತ್ರ, ಮಂತ್ರ, ತಂತ್ರತಾಯಿತಗಳಿಂದ ಹಿಮ್ಮೆಟ್ಟುವದಲ್ಲ, ಬೇರು ಬಂಡಾರಗಳಿಂದ ಕಡಿಮೆಯಾಗುವದಿಲ್ಲ ಅದಕ್ಕಿರುವದು ಒಂದೇ ಉಪಾಯ. ಎಂದು ನುಡಿದು ಸುಮ್ಮನಾದಳು. ರಾಜಪತ್ನಿಯು ಹೆಚ್ಚು ಕುತೂಹಲ ವುಳ್ಳವಳಾಗಿ 'ತಾಯಿ! 'ಅದಾವುದು?' ಎಂದೆನ್ನಲು ಕೊರವಿಯು 'ಆಯುವ ಕನಲ್ಲಿಯೇ ಆಕೆಯನ್ನು ನೂಕುವದು' ಎಂದು ಹೇಳಿದಳು. ಮತ್ತು 'ಅದ ರಿಂದಲೇ ನಿನ್ನ ಮಗಳಿಗೆ ಗುಣಮುಖವು ಹಡೆದವರಾದ ನಿಮಗೆ ಅದರಿಂದ ಸುಖವು' ಇಷ್ಟಿದೆ ನಾನು ನನ್ನ ದೇವತೆಗಳನ್ನು ಸ್ಮರಿಸಿ ನುಡಿಯುವದು.

ಇದರ ಮೇಲೆ ನಿಮ್ಮ ಇಷ್ಟ ಎಂದು ಹೇಳಿ ಮುಂದೆ ತನ್ನ ಗಮನದ ಉತ್ಸುಕತೆಯನ್ನು ತೋರಿದಳು. ಆಗ ಧರಣೀದೇವಿಯು ಮನಸ್ಸಿನಲ್ಲಿ ' ಈ ಧರ್ಮದೇವಿಯು ಕೊರವಿಯಲ್ಲ ಸಾಕ್ಷಾತ್ ದೈವೀ ಸ್ವರೂಪಳು ಇರಬಹುದು. ನಮ್ಮ ಪದ್ಮಾವತಿಯ ಸ್ಥಿತಿಯನ್ನೆಲ್ಲ ನೈಜವಾಗಿ ಹೇಳಿಬಿಟ್ಟಳು ವ್ಯರ್ಥವಾಗಿ ನಾವು ಇದುವರೆಗೆ ಹಲವು ತಂತ್ರೋಪಚಾರ ನಡಿಸಿದೆವು ಅವೆಲ್ಲವು ನಿರರ್ಥವಾದವು. ಇನ್ನು ಇವಳು ಹೇಳಿದ ಉಪಚಾರವೊಂದನ್ನು ಆಕೆಗೆ ಗುಣವಾದರೆ ಮಾಡಲು ಅಡ್ಡಿಯಿಲ್ಲ. ಈ ಬಗ್ಗೆ ರಾಜನನ್ನೂ ಒಡಂಬಡಿಸುವೆನು " ಇತ್ಯಾದಿಯಾಗಿ ತನ್ನ ಮನಸ್ಸಿನಲ್ಲಿ ಯೋಚಿಸಿ ಒಂದು ನಿರ್ಧಾರಕ್ಕೆ ಬಂದಳು. ರಾಜಪತ್ನಿಯ ದೀರ್ಘವಿಚಾರದ ಅವಧಿಯಲ್ಲಿಯೇ ಕೊರವಿಯು ತನ್ನ ಬುಟ್ಟಿ ಸಾವರಿಸಿಕೊಂಡು ಮಗುವನ್ನು ಮಡಿಲಲ್ಲಿ ಕಟ್ಟಿಕೊಂಡು ಹೊರಡುವ ಸಿದ್ಧತೆ ನಡಿಸಿದಳು ಅಷ್ಟರಲ್ಲಿ ಧರಣೀದೇವಿಯು ' ಅಮ್ಮಾ ಧರ್ಮದೇವತೆ ! ನೀನು ನನಗೆ ಹೇಳಿದ ನುಡಿಗಳನ್ನು ಸತ್ಯ ಸತ್ಯವೆಂದು ನಂಬಿರುವೆ. ನೀನು ತಿಳಿಸಿದಂತೆ ಆಯುವಕನಿಗೆ ನಮ್ಮ ಪದ್ಮೆಯನ್ನು ಧಾರೆಯೆರೆದು ಕೊಡಲು ಏನೂ ಯಾರದೂ ಆತಂಕವಿಲ್ಲ ಆದರೆ ಆ ಯುವಕನ ದೇಶ–ಕೋಶ, ಕುಲ–ಶೀಲ, ವಿದ್ಯೆ–ಬುದ್ಧಿ ಗುಣ–ದೋಷ ಇವಾವವೂ ನಮಗೆ ತಿಳಿಯುವದು ಅಸಾಧ್ಯ ನೀನು ನಿನ್ನ ದೇವತಾಸ್ಮರಣೆಯಿಂದ ಅದನ್ನಷ್ಟು ತಿಳಿಸಿದ್ದಾದರೆ ನಮ್ಮ ಮೇಲೆ ಮಹದುಪಕಾರವಾಗುವದು ನೀನು ಹೊರಡಲು ತವಕ ಮಾಡಬೇಡ. " ಎಂದು ಆಕೆಗೆ ಕೈಮುಗಿದು ವಿನಂತಿಯನ್ನು ಮಾಡಿಕೊಂಡಳು.

ಧರಣೀದೇವಿಯ ಆಗ್ರಹದಿಂದ ಕೊರವಿಯು ನಿರ್ವಾಹವಿಲ್ಲದೆ ಆಗಲೇ ತಾನು ಹೊರಡುವದನ್ನು ಬಿಟ್ಟು ಮೊದಲಿನಂತೆ ಸಜ್ಜಾಗಿ ಕುಳಿತಳು ಈ ಸಾರೆ ಅವಳು ಪೀಡದೆ ಮುಂದೆ ಬಂಗಾರದ ತಬಕದಲ್ಲಿ ತಂದಿಟ್ಟ ತಾಂಬೂಲವನ್ನು ಸೇವಿಸಿದಳು. ರಾಜಭಾರ್ಯೆಯನ್ನು ಮುಂದೆ ಕರೆದು— " ಧರಣೀದೇವಿ ! ಆ ಯುವಕನು ಯಾವನು ? ಎಲ್ಲಿರುವನು ? ಇತ್ಯಾದಿ ವಿಚಾರಗಳ ಚಿಂತೆ ಬೇಡ. ಅವನು ಸಾಕ್ಷಾತ್ ವೈಕುಂಠಪತಿ ಶ್ರೀಮನ್ನಾರಾಯಣನೇ ಆಗಿರುವನು. ಆ ಅಸಾಮಾನ್ಯ ಪುರುಷನ ವಾಸವು ವೇಂಕಟಾಚಲದಲ್ಲಿದೆ. ಆತನು ಸಕಲ ವಿದ್ಯೆಗಳ ತವರ್ಮನೆಯೂ ಜ್ಞಾನ–ಬುದ್ಧಿಗಳ ಖಣಿಯೂ

ಅತುಲ ಬಲವಾನನೂ ಆಗಿರುವನು. ಇಂಥವನಿಗೆ ಹೊಟ್ಟೆಯ ಕರುಳನ್ನು ಕೊಟ್ಟು ಅದು ಸುಖಪಡುವುದನ್ನು ಕಾಣುವ ತಾಯಿ–ತಂದೆಗಳೇ ಧನ್ಯರೆಂದು ನನ್ನ ಮತ. ತಾಯಿ! ಧರಣೀದೇವಿ! ನಾನು ಇದುವರೆಗೆ ಹೇಳಿದ ಸಂಗತಿಗಳ ನಿಜತ್ವವು ನಿನಗೆ ಇನ್ನೂ ಸಂದೇಹದಿಂದ ಸ್ಪಷ್ಟವಾಗಿರಲಿಕ್ಕಿಲ್ಲ. ಆದರೆ ನಾನೇ ಇನ್ನೊಂದು ಹೇಳಿಕೆಯಿಂದ ನಿನ್ನಲ್ಲಿ ಸಂಶಯವುಂಟಾಗಿದ್ದರೆ ಅದನ್ನು ದೂರ ಮಾಡುವೆ. ಕೇಳು, ರಾಜಭಾರ್ಯೆ! ನಿನ್ನ ಮಗಳು ಪದ್ಮಾವತಿಯು ಮೊನ್ನಿನ ದಿನ ಉಪವನದಲ್ಲಿ ನಾನು ಹಿಂದೆ ಹೇಳಿದ ಯುವಕನ ಕುದುರೆಯನ್ನು ಕಲ್ಲೆಸೆದು ಕೊಂದುಬಿಟ್ಟಿರುವಳು. ಇದು ಅವಳೊಡನೆ ಆ ಹೊತ್ತು ಹೋಗಿದ್ದ ಆಕೆಯ ಗೆಳತಿಯರಿಗೆ ಗೊತ್ತಿರಬಹುದು. ಅವರನ್ನು ಕೇಳಿ ಸತ್ಯಾಸತ್ಯತೆಯನ್ನು ಗೊತ್ತು ಮಾಡಿಕೊಳ್ಳು." ಎಂದು ನುಡಿದು ಕೊರವಿಯು ಮತ್ತೆ ಹೊರಡಲನುವಾದಳು. ರಾಜಭಾರ್ಯೆಯು ಇನ್ನೂ ಕುಳಿತುಕೊಳ್ಳಲು ಆಗ್ರಹ ಮಾಡಿ ಕುಳ್ಳಿರಿಸಿಕೊಂಡಳು. ಮತ್ತೆ ಆಕೆಗೆ ತಾಂಬೂಲಾದಿ ಸತ್ಕಾರಗಳು ನಡೆದೇಬಿಟ್ಟವು.

ಬಳಿಕ ಕೊರವಿಯು ಸಂತೋಷಚಿತ್ತವುಳ್ಳಳಾಗಿಕುಳಿತುಕೊಂಡು ಧರಣೀದೇವಿಯನ್ನು ಮುಂದೆ ಕರೆದು— 'ಧರಣೀದೇವಿ, ನಾನು ಇನ್ನು ಹೊರಡುವೆ. ಆ ಮೊದಲೇ ನಾನು ನಿನಗೆ ಇನ್ನೊಂದು ಸಂಗತಿಯನ್ನು ತಿಳಿಸಲು ನನ್ನ ದೇವತೆಯ ಆಜ್ಞೆಯಾಗಿದೆ. ತಿಳಿಸಲೇ?" ಎಂದು ಕೇಳಲು ರಾಜಪತ್ನಿಯು— 'ಅವಶ್ಯ' ಎಂದು ನುಡಿದಳು. ಆಗ ಕೊರವಿಯು— 'ಅಮ್ಮಾ ನನ್ನ ಮಾತು ನಿಜವೆಂದು ತಿಳಿ. ಹಾಗು ತ್ರಿಕಾಲಾಬಾಧಿತವೆಂದೂ ಅರಿತುಕೊಳ್ಳು. ನಾನು ನಿನಗೆ ಹೇಳಿದ ಯುವಕನೆಂದರೆ ವೇಂಕಟಾಚಲವಾಸಿಯಾದ ಶ್ರೀನಿವಾಸನು. ಆತನಿಗೆ ನಿನ್ನ ಮಗಳನ್ನು ಕೊಟ್ಟು ಲಗ್ನ ಮಾಡುವದನ್ನು ನಿನ್ನ ಪತಿಯಿಂದ ಕೂಡಿ ನಿರ್ಧಾರ ಮಾಡು. ನಿಮ್ಮ ನಿರ್ಧಾರದ ನಂತರ ಪದ್ಮಾವತಿಯು ರೋಗವಿಮುಕ್ತಳಾಗುವಳು. ಹಾಗು ಶುದ್ಧಿಯ ಮೇಲೆ ಬಂದು ಮಾತನಾಡುವಳು. ಇದನ್ನು ನೀವು ಅಲಕ್ಷ್ಯಮಾಡಿದರೆ ನಿಮ್ಮ ಪದ್ಮಾವತಿಯು ಇಂದೇ...." ಎಂದು ನುಡಿಯರ್ಧಕ್ಕೆ ಸುಮ್ಮನಾದಳು. ಕೊರವಿಯಿಂದ ಅರ್ಧ ಉಚ್ಚರಿತವಾದ ಅಭದ್ರ ನುಡಿಯು ಧರಣೀದೇವಿಗೆ ವಾಗ್ವ್ಯತ್ಯಯವೆನ್ನಿಸಿ ಅವಳ ಮುಖದಿಂದ 'ಒಳ್ಳಿತು' ಎಂದು ಹೊರಬಿದ್ದಿತು. ಅವಳೊಡನೆ ಕೊರವಿಯೂ

'ಒಳ್ಳಿತೊಳ್ಳಿತು', 'ಸಾವಿರ ಸಾರೆ ಒಳ್ಳಿತು' ಎಂದು ಅಂದಳು. ಹಾಗು ಆಕೆ ರಾಜಪತ್ನಿಗೆ— 'ಕೊರವಿಯು ಮರ್ಮವಾಕ್ಯವನ್ನಾಡಿದಳೆಂದು ನೀನು ನನ್ನನ್ನು ಶಪಿಸಿದರೂ ಅಡ್ಡಿಯಿಲ್ಲ. ನಿಜ ಸಂಗತಿಯನ್ನಾಡಲು ಯಾರ ಭಯವೇನು?' ಎಂದು ಹೇಳಿದಳು. ಆಗ ಧರಣೀದೇವಿಯು ಮನಸ್ಸಿನಲ್ಲಿ ದುಃಖಪಟ್ಟು— 'ಮೊದಲೇ ನಾನು ಈ ಕೊರವಿಯನ್ನು ಕೇಳಬಾರದಿತ್ತು. ಕೇಳಿ ಸಂತಾಪಕ್ಕೆ ಗುರಿಯಾಗಬೇಕಾಯಿತಲ್ಲ!' ಎಂದೆಂದುಕೊಂಡಳು. ಅವಳು ಆಗ ಕೊರವಿಗೆ— 'ಧರ್ಮದೇವಿ! ಹೃದಯಭೇದಕವಾದ ಇದೆಂಥ ಮಾತನಾಡಿದೆ?'' ಎನ್ನಲು ಕೊರವಿಯು— 'ನಾನು ನಿನಗೆ ಮೊದಲೇ ತಿಳಿಸಲಿಲ್ಲವೇ? ನಾನು ಎಂದಿಗೂ ಸತ್ಯವನ್ನು ಬಚ್ಚಿಟ್ಟು ಮಾತಾಡುವವಳಲ್ಲ. ಇನ್ನೊಬ್ಬರ ಭಿಡೆ-ಮುರವತ್ತುಗಳು ನನಗವಶ್ಯವಿಲ್ಲ. ಈ ಮೂಲಕವಾಗಿಯೇ ಸೌಭಾಗ್ಯಶಾಲಿನಿ! ನನ್ನ ನುಡಿಗಳು ಕಠಿಣತರವಾಗಿ ಪರಿಣಮಿಸುವವು. ನಾನೂ ನನ್ನ ಮಾತುಗಳಿಂದ ಕಠೋರಳಾಗಿಯೇ ತೋರುವೆನು. ಮಾಡುವದೇನು? ಆದಿಯಿಂದಲೂ ನನ್ನ ಸ್ವಭಾವವೇ ಹಾಗಿದೆ. ಸ್ಪಷ್ಟ ನುಡಿಯುವದೂ, ಸ್ಪಷ್ಟ ತಿಳಿಸುವದೂ ನನಗೆ ಹೆಚ್ಚಿಗೆ ಸೇರುತ್ತದ. ಇನ್ನೂ ನಿನಗೆ ಹೇಳುವದೆಂದರೆ— ಅದೇ ಮಾತು. ಅದೇ ಕತೆ. ಅದಾವುದೆಂದರೆ ಶ್ರೀನಿವಾಸನಿಗೆ ಪದ್ಮಾವತಿಯನ್ನು ಕೊಡುವದು.' ಎಂದು ಕೊರವಿಯು ನುಡಿದು ಮಡಿಲಲ್ಲಿ ಮಗುವನ್ನು ಕಟ್ಟಿಕೊಂಡು ತಲೆಯ ಮೇಲೆ ಬುಟ್ಟಿಯನ್ನಿಟ್ಟುಕೊಂಡು ತಲೆಬಾಗಿಲಗೆ ಬಂದಳು. ಧರಣೀದೇವಿಯು ಆಕೆಯನ್ನು ಹಿಂಬಾಲಿಸಿ ಅಲ್ಲಿಯ ವರೆಗೆ ಬಂದು— 'ಅಮ್ಮಾ, ಧರ್ಮದೇವತೆ, ಕೊರವಂಜಿ! ನನಗೆ ಇನ್ನೇನು ಹೇಳುವಿ? ಎಂದು ಕೇಳಿದಳು. ಆಗ ಕೊರವಿಯು ತಿರುಗಿ ನಿಂತು— 'ರಾಜಪತ್ನಿ! ಇನ್ನೊಂದರೆಗಳಿಗೆಯಲ್ಲಿ ನಿನ್ನನ್ನು ಕಾಣುವ ತವಕದಿಂದ ಒಬ್ಬ ಮುದಿಕಯು ಇಲ್ಲಿಗೆ ಬರುವಳು. ಆಕೆಯು ಬಲು ಧರ್ಮಾತ್ಮೆ. ಹಾಗು ಬುದ್ಧಿವಂತೆ. ಆಕೆಯು ಶ್ರೀನಿವಾಸನಿಗಾಗಿ ಕನ್ಯೆಯನ್ನು ಯಾಚಿಸಲು ಬರುವಳು. ಆಕೆ ಬರುವ ಈ ಸಮಾಚಾರವನ್ನು ನಿನ್ನ ಗಂಡನಿಗೂ ಪ್ರಿಯಮಗನಿಗೂ ತಿಳಿಸು. ಬಂಧು-ಬಳಗದವರನ್ನು ಕೂಡಿಕೊಂಡು ಕನ್ಯಾರ್ಥಿಯಾಗಿ ಬಂದ ಆ ಮುದಿಕೆಗೆ 'ನಮ್ಮ ಪದ್ಮಾವತಿಯನ್ನು ನಿಮ್ಮ ಶ್ರೀನಿವಾಸನಿಗೆ ಕೊಡುವ ಸಂಕಲ್ಪ ಮಾಡಿರುವೆವು.' ಎಂಬದಾಗಿ ತಿಳಿಸಿಬಿಡಿರಿ. ಹುಟ್ಟಿದ ಹೆಣ್ಣುಮಕ್ಕಳನ್ನು ಲಗ್ನ ಮಾಡಿ ಕೊಡದೆ

ಮನೆಯಲ್ಲಿಟ್ಟುಕೊಂಡು ಕೂಡ್ರುವದು ಒಳಿತಲ್ಲ. ಹೆಚ್ಚಿಗಿನ್ನೇನು ಹೇಳಲಿ? ನಾನು ಇನ್ನು ಹೋಗುವೆ. ನೀನು ನಿಲ್ಲು. ನಮ್ಮಂಥ ದೀನ–ದರಿದ್ರರ ಮೇಲೆ ಲೋಭ–ವಿಶ್ವಾಸಗಳಿರಲಿ. ತಾಯೀ, ಬರುವೆ. ನಮಸ್ಕಾರಗಳು." ಎಂದು ಭರಭರನೆ ನಡೆದು ಕೊರವಂಜಿಯು ಉತ್ತರ ದಿಕ್ಕಿನ ಮಾರ್ಗದಿಂದ ತೆರಳಿದಳು. ಧರಣೀದೇವಿಯು ದೃಷ್ಟಿ ಹರಿಯುವ ವರೆಗೂ ಕೊರವಂಜಿಯು ಹೋಗುವದನ್ನು ನೋಡಿದಳು. ಆಕೆಯು ಮರೆಯಾದ ನಂತರವೇ ತನ್ನ ಮಂದಿರದೊಳಕ್ಕೆ ಬಂದು ಸೇರಿದಳು.

ರಾಜಮಂದಿರಕ್ಕೆ ಕೊರವಂಜಿಯ ಬರಹೋಗುವಿಕೆಗಳು ವಿದ್ಯುತ್ಸಂಚಾರದಂತಾಗಿ ಹೋದವು. ಧರಣೀದೇವಿಯ ಹೃದಯದಲ್ಲೂ ಮಗಳ ವಿಷಯಕ್ಕೆ ಉಂಟಾದ ಕಳವಳವು ಸ್ವಲ್ಪ ಮಟ್ಟಿಗೆ ಶಾಂತವೆನ್ನಿಸಹತ್ತಿತು. ಕೊರವಂಜಿಯ ಪರಾಮರಿಕೆಯಲ್ಲಿಯೂ ಆಕೆಯಿಂದ ಪ್ರಶ್ನೆ ಕೇಳುವದರಲ್ಲಿಯೂ ಕಾಲ ಕಳೆಯುತ್ತ ಕುಳಿತ ರಾಜಪತ್ನಿಯು ಬೇನೆಯಿಂದ ಸ್ಮೃತಿ ತಪ್ಪಿ ಬಿದ್ದ ಪದ್ಮಾವತಿಯನ್ನು ಕೆಲಹೊತ್ತು ಲಕ್ಷಿಸಿರಲಿಲ್ಲ. ಕೊರವಿಯು ಹೋದ ಕೂಡಲೆ ಆವಳು ನೆಟ್ಟಗೆ ಪದ್ಮಾವತಿಯು ಮಲಗಿರುವಲ್ಲಿಗೆ ಬಂದಳು. ಆಕೆಯ ಮೈ ಮೇಲೆ ಕೈ ಇಟ್ಟು ನೋಡಿದಳು. ಜ್ವರ ತೆಗೆದಿದ್ದವು. ಸ್ಮೃತಿಗೆಟ್ಟು ಬಿದ್ದ ಅವಳನ್ನು ಕರೆದಳು. ಆ ಕೂಡಲೆ ಆವಳು ಓ ಗೊಟ್ಟಳು. ಅದನ್ನು ಕಂಡು ಧರಣೀದೇವಿಗೆ ಹಿಗ್ಗು. ಬಲು ಹರುಷ. ಕೆಲ ನಿಮಿಷಗಳ ಹಿಂದೆ ನಿಶ್ಚೇಷ್ಟಿತಳಾಗಿ ಬಿದ್ದ ಮಗಳು– 'ಅಪ್ಪಾ', 'ತಾಯಿ', 'ಹಸಿವೆ', 'ನೀರಡಿಕೆ' ಇತ್ಯಾದಿ ಶಬ್ದಗಳನ್ನು ನುಡಿಯುವದನ್ನು ಕಂಡು ಅವಳ ಚಿಂತೆಯೆಲ್ಲ ಮಾಯವಾಯಿತು. ಆದರ ಬದಲು ಅವಳ ಚಿತ್ತದಲ್ಲಿ ಸಂತಸವು ಸ್ಥಿರವಾಯಿತು. ಒಮ್ಮೆಲೆ ತನ್ನ ಮಗಳ ದೇಹಸ್ಥಿತಿಯಲ್ಲಿಯೂ ತನ್ನ ಚಿತ್ತದಲ್ಲಿಯೂ ವಿಲಕ್ಷಣ ಪಲ್ಲಟವಾಯಿತು. ಇದೆಲ್ಲವೂ ಆ ಧರ್ಮದೇವತೆ ಕೊರವಂಜಿಯ ಕೃಪಾಪ್ರಸಾದವೇ ಎಂದು ಅರಿತಳು. ಆಕೆಯನ್ನು ಹೊಗಳಿದಳು. ಆಕೆಯು ಅಲ್ಲಿಂದ ಹೋಗಿದ್ದರೂ ಅಲ್ಲಿಂದಲೇ ಆಕೆಗೆ ಹಲವು ವಂದನೆಗಳನ್ನು ಅರ್ಪಿಸಿದಳು.

ರೋಗದಿಂದ ವಿಮುಖಳಾಗಹತ್ತಿರುವ ಪದ್ಮಾವತಿಯನ್ನು ನಿರೀಕ್ಷಿಸಿ ಧರಣೀದೇವಿಯು—'ಮಗಳೇ! ನೀನೀಗ ಎಚ್ಚರಾಗಿರುವಿಯಲ್ಲವೇ? ಸಮಾ

ಧಾನ ವೆನ್ನಿಸಹತ್ತಿದೆಯಲ್ಲವೇ ? ಈಗ ನಿನ್ನ ಮನಸ್ಸಿನಲ್ಲಿ ತಳಮಳವೇನಿರು ವದು ಹೇಳು. ಮನಕ್ಕಾದ ತಾಪಗಳ ಪರಿಣಾಮವು ದೇಹದ ಮೇಲಾಗದೆ ಬಿಡುವದಿಲ್ಲ. ಅಂತೆಯೇ ಸ್ವಸ್ಥವಾಗಿದ್ದ ನೀನು ಏನೋ ವಿಚಾರದಿಂದ ಮನಸ್ಸನ್ನು ನೋಯಿಸಿಕೊಂಡು ಹಾಸಿಗೆ ಹಿಡಿದು ಮಲಗಿಕೊಂಡೆ. ಧರ್ಮ ದೇವತೆ ಕೊರವಿಯಹೇಳಿಕೆಯನ್ನು ನೀನು ಕೇಳಲಿಲ್ಲ. ಆಕೆಯ ವಿಚಾರ ದಂತೆ ಇನ್ನು ಮುಂದೆ ನಿನಗೆ ಮಂಗಲಕಾರಕದಿನವು ತೀವ್ರವೇ ಲಭಿಸುವದು. ಸಂಶಯವಿಲ್ಲ. ಆದ್ದರಿಂದ ನಿನ್ನ ಮನಸ್ಸಿನ ದುಗುಡುವನ್ನೆಲ್ಲ ನನ್ನ ಮುಂದೆ ಹೇಳಿಬಿಡು. ಜಗತ್ತಿನಲ್ಲಿ ತಾಯಿಗಿಂತ ಹೆಚ್ಚಿನ ಹಿತಬಂಧುವಿಲ್ಲ' ಎಂಬ ದನ್ನು ನೀನು ಓದಿಅರಿತಿರಲಿಲ್ಲವೇ ? ಇದನ್ನರಿತು ನೀನು ಎಂಥ ಕಾರ್ಯವನ್ನು ಬಯಿಸಿಕೊಂಡಿದ್ದರೂ ಅದನ್ನು ಸ್ಪಷ್ಟವಾಗಿ ನನ್ನೆದುರು ಆಡಿಬಿಡು. ವ್ಯರ್ಥ ಮನಸ್ಸನ್ನು ವ್ಯಥೆಪಡಿಸುತ್ತ ಕೊರಗಿದರೆ ಆಗುವದೇನು ? 'ಮನಸ್ಸಿನಲ್ಲಿ ಏನೊಂದನ್ನು ಮಂಡನೆಯನ್ನು ಮಾಡಿಕೊಂಡರೆ ಅದಕ್ಕೆ ಲಕ್ಷ್ಯವನ್ನು ಕೊಡು ವವರಾರು ? ಇದನ್ನು ನಿನಗೆ ಹೇಳಬೇಕಾಗಿಲ್ಲ ನೀನು ಶಿಶುವಿನಂತೆ ಅಜ್ಞಾನಿ ಯಲ್ಲ. ಹರೆಯದ ಹೊಸ್ತಿಲವನ್ನು ಮೆಟ್ಟಿನಿಂತಿರುವಿ, ಹಾಗು ನೀನು ಉಳಿದ ನಿನ್ನ ಕೆಳದಿಯರಂತೆ ದರಿದ್ರೆಯಲ್ಲ. ಈ ನಾಡಿನ ಅಧಿಪತಿ ಆಕಾಶರಾಜನ ಮಗಳಾಗಿರುವಿ. ಯಾವದೊಂದಕ್ಕೂ ಕೊರತೆಯಿಲ್ಲ, ಇಂಥ ಪರಿಸ್ಥಿತಿ ಯನ್ನು ಕಾಣದಂತಾಗಿ ವ್ಯರ್ಥವಾಗಿ ತಾಪಬಡುತ್ತಿರುವಿ." ಎಂದು ಮಗ ಳನ್ನು ಮುದ್ದಿಸಿ ಕೇಳಿದಳು. ನಡನಡುವೆ ಆ ಮಗಳ ಮುಖ ನಿರೀಕ್ಷಿಸಿ ಆಕೆಯ ಭಾವವನ್ನು ಊಹಿಸಲು ಪ್ರಯತ್ನಿಸಿದಳು.

ತಾಯಿಯಾಡಿದ ಪ್ರೇಮದ ನುಡಿಗಳು ಪದ್ಮಾವತಿಯನ್ನು ಪೂರ್ಣ ಪ್ರಜ್ಞೆಯಮೇಲೆ ತಂದವು. ತನ್ನ ಆಶೆಯು ಕೈಗೂಡುವ ಮಾರ್ಗವನ್ನು ಕಾಣುವದೆಂಬದು ಆಕೆಗೆ ತಿಳಿಯ ಹತ್ತಿತು. ತಾನು ಮಲಗಿದಲ್ಲಿಯೇ ಮಲ ಗಿದ್ದರೂ ಕೊರವಂಜಿಯ ನುಡಿಗಳು ಅಸ್ಪಷ್ಟವಾಗಿ ಬಂದು ಆಕೆಯ ಕಿವಿ ಗಳನ್ನು ಸೇರಿ ಅಷ್ಟರಿಂದಲೇ ಆಕೆಯು ತನ್ನ ಅಭೀಷ್ಟತೆಯು ತಾಯಿ—ತಂದೆ ಗಳಿಗೆ ಗೊತ್ತಾಗದೆ ಉಳಿಯಲಿಕ್ಕಿಲ್ಲ ಎಂದು ಅರಿತಿದ್ದಳು. ಆದರೆ ತನ್ನ ಸಂಬಂಧವಾಗಿ ತಾಯಿಯ ಹಾಗು ಧರ್ಮದೇವತೆಯ ನಡುವೆ ಭಾಷಣನಡೆ ದಿರಲು ಹಾಸುಗೆಯಿಂದೆದ್ದು ಅಲ್ಲಿಹೋಗಲು ಆಕೆಯ ಮನಸ್ಸು ಒಡಂಬಡ

ಲಿಲ್ಲ ಇಷ್ಟೇ ಅಲ್ಲ. ಆಗ ತನ್ನ ಅಸ್ವಾಸ್ಥ್ಯವು ಕಡಿಮೆಯೆನ್ನಿಸಿದರೂ ಅದನ್ನು ಹೊರಗೆ ತೋರಲು ಸಿದ್ಧಳಾಗಲಿಲ್ಲ. ಈಗ ತಾಯಿಯು ತಾನೇ ಆ ಮಾತಿನ ಪ್ರಸ್ತಾಪವನ್ನೆತ್ತಲು ಆಕೆಗೆ ಮನಸ್ಸಿನಲ್ಲಿಯ ಹರ್ಷವು ಕುತೂಹಲಗೊಂಡಿತು. ಆದರೆ ಸ್ತ್ರೀ ಸ್ವಭಾವಸಹಜವಾದ ಸಹಜ ಲಜ್ಜೆಯು ಆಕೆಗೆ ತನ್ನ ಅಭಿಪ್ರಾಯವನ್ನು ಪ್ರಕಟಪಡಿಸಲು ಮುಂದೂಡಲಿಲ್ಲ ಇಷ್ಟೇ ಅಲ್ಲ. ಆಕೆಯಲ್ಲಿಯ ಆ ಲಜ್ಜೆಯು ಕೃತಕವಾದ ಸಿಡುಕಿನ ಭಾವನೆಯ ರೂಪವನ್ನು ತಾಳಿತು. ಆ ಕೂಡಲೆ ಪದ್ಮಾವತಿಯು ತನ್ನ ತಾಯಿ ಧರಣೀದೇವಿಯ ಮೇಲೆ 'ಅವ್ವಾ ಏನಿದು ನಿನ್ನ ಚೇಷ್ಟೆ ?' ಎಂದು ಹರಿಹಾಯ್ದಳು. ಮತ್ತೆ ಮುಸುಕು ಹಾಕಿಕೊಂಡು ಮಲಗಿದಳು.

ಆಗ ಧರಣೀದೇವಿಯು ಮಗಳು ತನ್ನ ಮೇಲೆ ಸಿಟ್ಟಾದಳು ಎಂಬ ತಿಳುವಳಿಕೆಯಿಂದ—'ಈಕೆಯ ಸಿಟ್ಟನ್ನು ನಾನು ನನ್ನ ಸಿಟ್ಟಿನಿಂದಲೇ ದೂರ ಮಾಡಿ ಈಕೆಯ ಅಭಿಪ್ರಾಯವನ್ನು ತಿಳಿದುಕೊಳ್ಳಬೇಕು' ಎಂದು ನಿರ್ಧಾರ ಮಾಡಿದಳು. ಮತ್ತು ಆಗಲೇ ಆಕೆಯು 'ಪದ್ಮಾವತಿ ಇದೇನೆ ನಿನ್ನ ನಡತೆ ? ನೀನು ನಿನ್ನ ಮನೋಗತವನ್ನು ನನಗ ತಿಳಿಸದಿದ್ದರೆ ನಾನು ನಿನ್ನ ಎದುರಿನಲ್ಲಿಯೇ ಈ ವಜ್ರವನ್ನು ಅರೆದು ಕುಡಿದು ಪ್ರಾಣಬಿಡುವೆ" ಎಂದು ತನ್ನ ಸ್ಪಷ್ಟಮಾತನ್ನಾಡಿದಳು

ಹೇಗಿದ್ದರೂ ತನ್ನ ತಾಯಿಯ ಕರುಳು ಹೆಚ್ಚಿನದಲ್ಲವೆ. ? ತಾಯಿಯು ನೊಂದುಕೊಂಡು ಆಡಿದ ಮಾತಿನಿಂದ ಪದ್ಮಾವತಿಯಲ್ಲಿ ಕೂಡಲೆ ದುಃಖ ಪೊತ್ತರಿಸಿ ಅದು ಆಕೆಗೆ ಅಳುವನ್ನುಂಟುಮಾಡಿತು. ಇನ್ನು ತಾನು ಹೆಚ್ಚು ಬಿಗಿಹಿಡಿದಲ್ಲಿ ನಾನು ತಾಯಿಯ ಪ್ರೇಮದಿಂದ ದೂರಾಗಬೇಕಾಗುವದು. ಎಂದು ಮನಸಿನಲ್ಲಿ ಅರಿತು, ಮಲಗಿದಾಕೆ ಮುಸುಕನ್ನು ತೆಗೆದೊಗೆದು ಎದ್ದು ಕುಳಿತಳು. ತನ್ನ ಎದುರಿನಲ್ಲಿ ಖಿನ್ನವದನಳಾಗಿ ಕುಳಿತ ತಾಯಿಯನ್ನು ಅಪ್ಪಿಕೊಂಡಳು. ಹಾಗು ಸ್ವಲ್ಪ ಹೊತ್ತಿನಮೇಲೆ ಮೆಲ್ಲನೆ ನುಡಿಯುತ್ತ ತನ್ನ ಮನಸ್ಸಿನ ಅಭಿಪ್ರಾಯವನ್ನು ಹೇಳಹತ್ತಿದಳು.

"ತಾಯಿ ! ಇನ್ನು ನಾನು ನಾಚಿಕೆಯನ್ನು ಬದಿಗಿಟ್ಟು ನನ್ನ ಮನಸ್ಸಿನಲ್ಲಿ ಉಂಟಾದ ಕಳವಳದ ಕಾರಣವನ್ನು ಹೇಳಲೇ ! ನಾನು ಮೊನ್ನೆ ನಿನ್ನ ಅನುಜ್ಞೆಯಿಂದ ನನ್ನ ಗೆಳತಿಯರೊಡನೆ ವನವಿಹಾರಕ್ಕೆ ಹೋಗಿದ್ದೆನಲ್ಲ ?

ಆಗ ನಾನು ಅಲ್ಲಿ ದೈವೀ ಸ್ವರೂಪದ ಪುರುಷನೊಬ್ಬನನ್ನು ಕಂಡೆನು. ಅವನ ಚೆಲುವಿಕೆಯು ನನ್ನನ್ನು ಮೋಹಗೊಳ್ಳಿಸಿತು ಕೇವಲ ಮದನನನ್ನು ಜಯಿಸಿದ ಆತನ ಕಿಂಚಿತ್ ಕಾಲದ ದರ್ಶನವು ಮಿಂಚಿದಂತಾಯಿತು. ಅಷ್ಟರಿಂದಲೆ ನನ್ನ ಹೃದಯದಲ್ಲಿ ಆತನ ಸುಸ್ವರೂಪವಾದ ಪ್ರತಿಮೆಯ ಚಿತ್ರವು ಮೂಡಿಬಿಟ್ಟಿತು. ಆತನು ತನ್ನ ಕರಗಳಲ್ಲಿ ಶಂಖ, ಚಕ್ರಗಳನ್ನು ಧರಿಸಿದ್ದನು. ಕಂಠದಲ್ಲಿ ಕೌಸ್ತುಭಹಾರವೂ ಕರ್ಣಗಳಲ್ಲಿ ಮಕರ ಕುಂಡಲಗಳೂ ಹೃದಯದಲ್ಲಿ ಶ್ರೀವತ್ಸಲಾಂಛನವೂ ಒಳ್ಳೆಮನೋಹರವಾಗಿ ಶೋಭಿಸುತ್ತಿದ್ದವು. ಈ ಆತನ ಸ್ವರೂಪದಿಂದ ಆ ದಿವ್ಯಪುರುಷನೇ ಸಾಕ್ಷಾತ್ ಶ್ರೀನಿವಾಸನೆಂಬದು ಸ್ಪಷ್ಟವಾಗಿ ವ್ಯಕ್ತವಾಗುತ್ತಿತ್ತು. ನಾನು ಈ ಮೊದಲೇ ಆ ಶ್ರೀನಿವಾಸನ ಮಹಿಮೆಯನ್ನು ತಿಳಿದಿರುವೆನು. ಅವನ ಕರದಲ್ಲಿಯ ಚಕ್ರಪ್ರಭಾವದಿಂದ ವಾರಣಾಸಿಯು ದಹಿಸಿ ಭಸ್ಮವಾಯಿತಂತೆ. ಶೋಭಿಸುವ ಆತನ ಕೈಯಲ್ಲಿಯ ಹಂಸವರ್ಣದ ಶಂಖಧ್ವನಿಯಿಂದ ರಾಕ್ಷಸರೆಲ್ಲ ದಿಕ್ಕಾಪಾಲಾದರಂತೆ ಆ ಶ್ರೀನಿವಾಸನನ್ನು ನಂಬಿರುವ ಭಕ್ತರು ಅಂಥಿಂಥವರಲ್ಲ. ಅವರು ವೇದಶಾಸ್ತ್ರವೇತ್ತರೂ ಒಳ್ಳೆ ಧರ್ಮವಂತರೂ ವ್ರತ–ನೇಮಗಳಲ್ಲಿ ಆಸಕ್ತಿಯುಳ್ಳವರೂ. ವೇದೋಕ್ತ ಕರ್ಮಗಳನ್ನು ಕೈಕೊಂಡವರೂ ಶ್ರೀಹರಿಯ ಶಂಖ–ಚಕ್ರಾದಿಗಳ ಚಿಹ್ನಯುಕ್ತ ಮುದ್ರೆಗಳನ್ನೂ ಊರ್ಧ್ವಪುಂಡ್ರಗಳನ್ನೂ ಧರಿಸುವವರೂ ತಾಯ್ತಂದೆಗಳ ಸೇವೆಯಲ್ಲಿ ನಿರತರೂ ಸದಾಸತ್ಯನುಡಿಯುವವರೂ ಆಗಿರುವವರೇ ಅವನ ಭಕ್ತರು. ಅವರೇ ವೈಷ್ಣವರು. ಅವರನ್ನು ಭವದಿಂದ ಉದ್ಧರಿಸುವವನೇ ಆ ಶ್ರೀನಿವಾಸನು. ಆ ಮಹಾತ್ಮನೇ ನನ್ನನ್ನು ಮೋಹಿಸಿರುವನು. ಅವನು ನನ್ನನ್ನು ವರಿಸದಿದ್ದರೆ. ಅಥವಾ ನೀವು ನನ್ನನ್ನು ಆತನಿಗೆ ಲಗ್ನಮಾಡಿಕೊಡದಿದ್ದರೆ ನನ್ನ ಪ್ರಾಣವು ಉಳಿಯಲಾರದು. ಈ ನನ್ನ ನುಡಿಯು ಸತ್ಯಸತ್ಯವೆಂದು ತಿಳಿ. ಈ ನನ್ನ ತಾಪವು ಶರೀರಕ್ಕೆ ಆದುದಲ್ಲ. ಆತನ ವಿರಹದಿಂದ ಮನಸ್ಸಿಗಾದುದು. ಈ ನನ್ನ ಅಂತಸ್ಥಿತಿಯನ್ನು ಬಹಿರಂಗ ಪಡಿಸುವದು ಯುಕ್ತವಾದುದಲ್ಲವೆಂದು ನಾನು ಇದುವರೆಗೆ ಮೌನತ್ವತಾಳಿಕೊಂಡಿದ್ದೆನು. ನೀನು ನಿನ್ನ ಕರಳನ್ನು ಕರಗಿಸಿಕೊಂಡು ನನಗೆ ಆಗ್ರಹ ಪಡಿಸಿದುದುದರಿಂದ ನಿನಗೊಬ್ಬಳಿಗೆ ಮಾತ್ರ ನಿಜವೃತಾಂತವನ್ನು ತಿಳಿಸಿದೆನು." ಎಂದು ಹೇಳಿದಳು.

ಮಗಳು ಮನಬಿಚ್ಚಿ ಹೇಳಿದ ಮಾತುಗಳನ್ನು ಕೇಳಿ ತಾಯಿಯು— 'ಪದ್ಮಾ ನಿನ್ನ ಅಪೇಕ್ಷೆಯನ್ನು ತೀವ್ರವೇ ನಾನು ಪೂರ್ಣಮಾಡುವೆ. ಏನೊಂದು ಚಿಂತೆಮಾಡಬೇಡ' ಎಂದು ಆಕೆಯನ್ನು ಸಮಾಧಾನಗೊಳಿಸಿದಳು. ಹಾಗು ತಾನು ಆ ಕೂಡಲೆ ತನ್ನಪತಿ ಆಕಾಶರಾಜನ ಬಳಿಗೆ ಬಂದಳು.

ಆಕಾಶರಾಜನು ತನ್ನ ದರಬಾರಿನಿಂದ ಅದೇ ಮಂದಿರದೊಳಕ್ಕೆ ಬಂದಿದ್ದನು. ಮಗಳು ಪದ್ಮಾವತಿಗೆ ಕಾಹಿಲೆಯಾದುದನ್ನರಿತು ಅವನ ಹೃದಯವು ತಲ್ಲಣಗೊಂಡಿತ್ತು. ತಾನು ದರಬಾರಿನಲ್ಲಿ ಕುಳಿತಾಗಲೂ ಕೂಡ ಪದ್ಮಾವತಿಯ ಸಮಾಚಾರವನ್ನು ತಂದು ತನಗೆ ತಿಳಿಸಲೇಬೇಕೆಂದು ಸೇವಕರಿಗೆ ಆತನ ಕಟ್ಟಪ್ಪಣೆ. ಅದರಂತೆ ಪ್ರತಿಯೊಂದು ನಿಮಿಷದ ಪದ್ಮಾವತಿಯ ಸಮಾಚಾರವು ರಾಜನಿಗೆ ತಿಳಿಯದೆ ಇರುತ್ತಿರಲಿಲ್ಲ. ಧರ್ಮದೇವತೆ ಕೊರವಂಜಿಯು ಬಂದುದೂ ತನ್ನ ಪತ್ನಿ ಧರಣೀದೇವಿಯು ಆಕೆಯನ್ನು ಪ್ರಶ್ನೆಮಾಡಿದುದೂ ಕೊರವಿಯು ಉತ್ತರವಾಗಿ ನುಡಿದುದೂ ಇವೆಲ್ಲವೂ ಆತನಿಗೆ ಗೊತ್ತಾಗಿ ಬಿಟ್ಟವು. ಈಗ ಅತನು ಬಂದ ಕೂಡಲೆ ಮಗಳನ್ನು ಕಾಣುವತವಕದಿಂದ ಪದ್ಮಾವತಿಯ ಹತ್ತಿರ ಬಂದನು. ಕಲ ತಾಸಿನ ಹಿಂದೆ ಕೇವಲ ನಿಶ್ಚಲಳಾಗಿ ಏನೂ ಪ್ರಜ್ಞೆಯಿಲ್ಲದೆ ಬಿದ್ದುಕೊಂಡಿದ್ದ ಮಗಳು ಈಗ ತಾಯಿಯೊಡನೆ ಹರಟೆಯ ಸ್ವರೂಪದ ನುಡಿಗಳನ್ನಾರಂಭಿಸಿದ್ದನ್ನು ತಿಳಿದು ಒಳಸೇರಿದನು. ಧರಣೀದೇವಿಯು ಸುಮುಖಳಾಗಿ ಬಂದು ಪತಿಯನ್ನು ಪದ್ಮಾವತಿಯ ಸನಿಹಕ್ಕೆ ಕರೆದೊಯ್ದಳು. ಹಾಗು ಧರ್ಮದೇವತೆ ಕೊರವಿಯು ಬಂದು ಹೋದಾಗಿನಿಂದ ಪದ್ಮಾವತಿಯು ಶುದ್ಧಿಯನ್ನು ಪಡೆದಿರುವಳೆಂದು ಹೇಳಿ ಇದುವರೆಗೆ ತಾನು ಆಕೆಯ ಸಂಗಡ ನಡೆಯಿಸಿದ ಮಾತು ಕತೆಗಳನ್ನು ಒಂದೂ ಬಿಡದೆ ಹೇಳಿದಳು. ಧರ್ಮದೇವತೆ ಕೊರವಿಯು ಹೇಳಿದ ಸಂಗತಿಗಳಿಗೂ ಪದ್ಮಾವತಿಯು ಹೇಳಿದ ಮಾತುಗಳಿಗೂ ಸಮನ್ವಯ ಉಂಟಾಯಿತೆಂದು ಆ ರಾಜರಾಣಿಯರು ನಿಶ್ಚಿತ ಮಾಡಿಕೊಂಡರು. ಆ ಕೂಡಲೆ ರಾಜನು ಇನ್ನು ಅವಕಾಶವಿಲ್ಲದೆ ಶ್ರೀನಿವಾಸನನ್ನು ಕಂಡು ಆತನೊಡನೆ ಪದ್ಮೆಯ ಲಗ್ನವನ್ನು ಮಾಡಿಯೇ ತೀರುವೆನು. ಎಂಬದಾಗಿ ಹೆಂಡತಿಗೆ ಹೇಳಿದನು. ಹಾಗು ತನ್ನ ಮಗಳ ಸನಿಹಕ್ಕೆ ಹೋಗಿ—'ಪದ್ಮೆ! ನಿನಗೆ ಮನಸಿಗೆ ಸೊಗಸು ಉಂಟಷ್ಟೇ? ಮೈಯಲ್ಲಿಯ ಜ್ವರಗಳು ಇಳಿದಿರುವವೇ? ನಿನ್ನಿಂದ ಇದುವರೆಗೆ

ನಮ್ಮ ಮನಸ್ಸಿನಲ್ಲಿ ಒಳ್ಳೇ ಗಡಬಡಿಯಿದ್ದಿತು. ಶ್ರೀಹರಿಯ ಚರಣಪ್ರಸಾದ ದಿಂದ ಅದು ನಿವಾರಣೆಯಾಯಿತು. ಇನ್ನೂ ನೀನು ಅಶಕ್ತಳಾಗಿ ತೋರುವಿ. ನಿನ್ನ ತಾಯಿ ಧರಣೀದೇವಿಯು ನೀಡಿದ ಪಥ್ಯಕರ ಆಹಾರವನ್ನು ಸ್ವೀಕರಿಸಿ ಅಶಕ್ತತೆಯಿಂದ ದೂರಾಗು ಅವಳು ನಿನ್ನ ಮನೋಭೀಷ್ಟತೆಯನ್ನು ಪೂರ್ಣ ಮಾಡಲು ಹೇಳುವದನ್ನೆಲ್ಲ ನಿಜವೆಂದು ನಂಬಿ ಆ ಶ್ರೀಹರಿಯ ಧ್ಯಾನವನ್ನು ಮಾಡು ಶೀಘ್ರವೇ ನಿನಗೆ ಮಂಗಲಕಾರಕ ದಿನಗಳು ಲಭಿಸುವವು ನಾನೀಗ ರಾಜದರ್ಬಾರಿಗೆ ಹೋಗುವೆ.'' ಎಂದು ಮಗಳಿಗೆ ಹೇಳಿ ಮುದ್ದಿಸಿ ಹೊರಡಲನುವಾದನು.

ಪದ್ಮಾವತಿಯು ತನ್ನ ತಾಯಿಯ ಮುಂದೆ ತನ್ನ ಹೃದ್ಗತವನ್ನು ತಿಳಿಸಿದ ಸಂಗತಿಗಳು ಈಗ ತಂದೆ ತನ್ನನ್ನು ಪ್ರೀತಿಯಿಂದ ನುಡಿಸುತ್ತಿರುವಾಗ ಆಕೆಯ ಸ್ಮರಣಕ್ಕೆ ಬಂದವು. ಆಕೂಡಲೆ ಅವಳಿಗೆ ಲಜ್ಜೆಯೂ ಭಯವೂ ಉತ್ಪನ್ನ ವಾಗಿ ತನ್ನ ತಂದೆಯೊಡನೆ ಪಿಟ್ಟೆಂದು ಮಾತನಾಡಲಿಲ್ಲ! ತನ್ನ ಮನೋಭಾವ ವನ್ನು ಆತನಿಗೆ ತಿಳಿಸಲು ಆಕೆಯ ಮನಸ್ಸು ಹೇಗೆ ಧೈರ್ಯಗೊಂಡೀತು? ಆದರೂ ಆಕೆಯ ನಯನಗಳಲ್ಲಿ ಗುಪ್ತರಾಶಿಯಾಗಿ ಬಿದ್ದ ಹಲವು ಕಿರಣ ಗಳಲ್ಲಿ ಆಕೆಯ ಮಹತ್ತ್ವನುವಾಗಿದ್ದ ಆಶಾಕಿರಣವೊಂದು ತಂದೆಯ ದೃಷ್ಟಿಯಲ್ಲಿ ಚಿಮುಕಿ ಕೂಡಲೆ ಮರೆಯಾಯಿತು. ಇಷ್ಟೇ ಅಲ್ಲ ಅದು ಅವಳಲ್ಲಿಯ ಲಜ್ಜೆ ಯನ್ನು ಎಚ್ಚರಗೊಳಿಸಿ ಅವಳಲ್ಲಿ ವಿನಯತ್ವವನ್ನು ಬರಮಾಡಿಕೊಂಡಿತು. ರಾಜನು ಮಗಳನ್ನು ಸಂತೃಪಿ ತನ್ನ ಸತಿ ಧರಣೀದೇವಿಗೆ—' ಪದ್ಮಾವತಿಯ ಉಪಚಾರವನ್ನು ಚನ್ನಾಗಿ ಸಾಗಿಸು ಎಂದು ಹೇಳಿ ದರಬಾರಕ್ಕೆ ಹೋದನು

ರಾಜನು ಇನ್ನೂ ದರಬಾರು ಮುಟ್ಟಿರಲಿಕ್ಕಿಲ್ಲ. ಅಷ್ಟರಲ್ಲಿ ಅಗಸ್ತ್ಯೇ ಶ್ವರನ ಅಭಿಷೇಕಕ್ಕಾಗಿ ಹೋಗಿದ್ದ ಬ್ರಾಹ್ಮಣರೂ ಪೂಜಾ ಸಲಕರಣೆಗಳನ್ನು ತೆಗೆದುಕೊಂಡು ಹೋಗಿದ್ದ ಕನ್ನಿಕೆಯರೂ ಅಭಿಷೇಕಮುಗಿಸಿಕೊಂಡು ಅರ ಮನೆಗೆ ಬಂದರು. ಅವರೊಡನೆ ಅಗಸ್ತ್ಯೇಶ್ವರನ ಸನ್ನಿಧಿಯಲ್ಲಿ ಅವರಿಗೆ ಭೆಟ್ಟಿಯಾಗಿದ್ದ ಬಕುಲಾವತಿಯೂ ಬಂದಳು. ಬ್ರಾಹ್ಮಣರು ತಾವು ಪೂಜೆ ಮಾಡಿತಂದ ಅಭಿಷೇಕ ತೀರ್ಥವನ್ನೂ ಪ್ರಸಾದವನ್ನೂ ಪದ್ಮಾವತಿಗೆ ನೀಡಿ ದರು. ದರಬಾರನ್ನು ಮುಗಿಯಿಸಿಕೊಂಡು ರಾಜನೂ ಬಂದನು. ಅವನಿಗೂ

ತೀರ್ಥ-ಪ್ರಸಾದಗಳನ್ನು ಕೊಟ್ಟನಂತರ ರಾಜಮಂದಿರದಲ್ಲಿ ಕೂಡಿದವರಿಗೆಲ್ಲ ರಿಗೂ ಕೊಡಲಾಯಿತು.

ಅಗಸ್ತ್ಯೇಶ್ವರನ ಸ್ಥಾನದಿಂದ ತಮ್ಮೊಡನೆ ಬಂದ ಬಕುಲಾವತಿಯನ್ನು ಕನ್ನಿಕೆಯರು ಧರಣೀದೇವಿಯ ಭೆಟ್ಟಿ ಮಾಡಿಸಿದರು. ಧರ್ಮದೇವತೆ ಕೊರವಿಯು ಮೊದಲೇ ಹೇಳಿದ ಸಂಗತಿಯು ಕೂಡಲೆ ರಾಜಪತ್ನಿಯ ಸ್ಮರಣೆಗೆ ಬಂದು 'ಇವಳೇ ಕನ್ಯಾರ್ಥಿಯಾಗಿ ಬಂದವಳಿರಬಹುದು.' ಎಂದು ತಿಳಿದಳು. ಹಾಗು ಆ ಕೂಡಲೆ ಅವಳು ಬಕುಲಾವತಿಯನ್ನು ಶಿಷ್ಟ-ಸಾಂಪ್ರದಾಯಾನುಸಾರವಾಗಿ ಉಪಚರಿಸಿದಳು. ಆಕೆಯನ್ನು ರತ್ನಪೀಠದ ಮೇಲೆ ಕುಳ್ಳಿರಿಸಿದಳು. ಹಾಗು ಆ ಕನ್ನಿಕೆಯರನ್ನು ಕುರಿತು— 'ಕನ್ನಿಕೆಯರೇ! ಈ ನಮ್ಮ ಮಂದಿರಕ್ಕೆ ಬಂದಿರುವ ಭಾಗ್ಯದೇವತೆಯರು ಯಾರು? ಈ ಗೌರವಯುಕ್ತ ವೃದ್ಧ ಮಾತುಃಶ್ರೀ ಸಮಾನರು ಇಲ್ಲಿ ಬಂದ ಉದ್ದಿಶ್ಯವೇನಿರುವದು? ಇದನ್ನು ನೀವು ಆವರಿಂದ ಈ ಮೊದಲೇ ಅರಿತಿದ್ದರೆ ನನಗೆ ತಿಳಿಸಿರಿ.' ಎಂದು ಕೇಳಿದಳು. ಆಗ ಆ ಕನ್ನಿಕೆಯರಲ್ಲಿ ಒಬ್ಬಳು ರಾಜಪತ್ನಿಯ ಮುಂದೆ ಬಂದು— 'ತಾಯಿ, ಧರಣೀದೇವೀ! ಈ ಮಾತುಃಶ್ರೀ ಸಮಾನರಾದ ಮುದಿಕೆಯು ವೇಂಕಟಾಚಲವಾಸಿಯಾದ ಶ್ರೀನಿವಾಸನ ಪಾದ ಸೇವಿಕೆಯಂತೆ. ಇವಳೂ ಆ ಪರ್ವತದಲ್ಲಿಯೇ ವಾಸವಾಗಿರುವಳಂತೆ. ನಾವು ಇನ್ನೂ ಹೆಚ್ಚು ವಿಚಾರಿಸಹತ್ತಲು 'ನನಗೆ ಧರಣೀದೇವಿಯವರ ಹತ್ತಿರ ಕೆಲಸವೊಂದಿದೆ. ನನಗೆ ಅರಮನೆಯ ಪರಿಚಯವಿಲ್ಲ. ನೀವು ನಿಮ್ಮೊಡನೆ ನನ್ನನ್ನು ಕರೆದುಕೊಂಡು ಹೋಗಿರಿ' ಎಂದು ಇಷ್ಟೇ ನಮಗೆ ತಿಳಿಸಿದಳು ಈಗ ಅವಳನ್ನು ನಮ್ಮ ಸಂಗಡ ಕರೆದುಕೊಂಡು ಬಂದಿರುವೆವು. ಇನ್ನು ಮೇಲೆ ನೀವು ಅವರೊಡನೆ ಮಾತನಾಡಲು ಅವರಿಗೆ ಅವಕಾಶವನ್ನು ಕೊಡಬಹುದು. ಇದಕ್ಕೂ ಹೆಚ್ಚಿಗೆ ನಮಗೇನೂ ತಿಳಿದಿಲ್ಲ.' ಎಂದು ಹೇಳಿ ಆ ಕನ್ನಿಕೆಯರು ಅಲ್ಲಿಂದ ದೂರಾಗಿ ಹೋದರು.

ಬಳಿಕ ರಾಜಪತ್ನಿ ಧರಣೀದೇವಿಯು ತನ್ನ ಅರಮನೆಯನ್ನು ಪ್ರವೇಶಿಸಿ ಬಂದ ಬಕುಲಾವತಿಯ ಹತ್ತಿರ ಬಂದು— 'ತಾಯಿ! ನೀವು ನಮಗೆ ಅಪರಿಚಿತರಾದರೂ ನಿಮ್ಮಲ್ಲಿ ನಾವು ಪೂಜ್ಯತೆಯನ್ನು ಒಪ್ಪಿ ನಿಮಗೆ ಸ್ವಾಗತ ಮಾಡುವೆವು. ಇಂದಿನ ನಿಮ್ಮ ಆಕಸ್ಮಿಕ ಬರುವಿಕೆಯಿಂದ ನಾವು ಧನ್ಯರು. ಇನ್ನು

ತಾವು ಶ್ರಮವಹಿಸಿ ಇಲ್ಲಿಯ ವರೆಗೆ ಬಂದಿರಲು ಏನೊಂದು ಕಾರಣವಿರ ಬಹುದು. ದಯಮಾಡಿ ಅದನ್ನಿಷ್ಟು ನನಗೆ ತಿಳಿಸುವಿರಾದರೆ ನಿಮ್ಮ ಸದಭಿಪ್ರಾಯದಂತೆ ನೀವು ಬಂದ ಕಾರ್ಯವನ್ನು ಪೂರ್ಣ ಮಾಡಿ ಕೊಡುವೆನು. ಎಂದಳು. ಅದಕ್ಕೆ ಬಕುಲಾವತಿಯು— 'ರಾಜಪತ್ನಿಯೇ, ನಾನು ನನ್ನ ವೇಂಕಟಾಚಲವಾಸಿ ಶ್ರೀನಿವಾಸನಿಗೆ ಅನುರೂಪಳಾದ ಕನ್ಯೆಯನ್ನು ದೊರಕಿಸಿ ಲಗ್ನ ಮಾಡುವ ಬಯಕೆಯುಳ್ಳವಳಾಗಿರುವೆ. ಆತನಿಗೆ ತಕ್ಕ ವಧುವು ನಿಮ್ಮ ಮಗಳಿರುವಳೆಂದು ಕೇಳಿರುವೆ. ಈ ನಿಮ್ಮ ಮಗಳನ್ನೇ ಆತನಿಗೆ ನಿಶ್ಚಯಿಸಿ ಕೊಂಡು ಹೋಗಲು ಬಂದಿರುವೆ." ಎಂದಳು. ಆದಕ್ಕೆ ಧರಣೀದೇವಿಯು— "ಅಮ್ಮಾ! ನಿನ್ನ ಬರುವಿಕೆಯ ಉದ್ದೇಶವು ಸಂಪೂರ್ಣ ತಿಳಿದಂತಾಯಿತು. ಆದರೆ ಇಂಥ ಪ್ರಸಕ್ತಿಗಳಲ್ಲಿ ಪೂರ್ವಾಪರವಾಗಿ ಎಲ್ಲ ಸಂಗತಿಗಳನ್ನು ಅರಿತು ಕೊಂಡು ಶರೀರಸಂಬಂಧ ಬೆಳೆಸುವದು ಯೋಗ್ಯ. ಹತ್ತು ಸುಳ್ಳುಗಳನ್ನು ಹೇಳಿ ಒಂದು ಕಲ್ಯಾಣ ಕಟ್ಟುವಲ್ಲಿ ಮೋಸಗಾರಿಕೆಯಿರುವದೆಂಬದನ್ನು ನಾನು ಅಲ್ಲಗಳೆಯಲಾರೆ. ನೀವಾದರೂ ಕನ್ಯೆ ಬೇಡಲು ಆತುರವುಳ್ಳವರಾಗಿರುವಿರಿ. ಆದರೆ ನಿಮ್ಮ ಶ್ರೀನಿವಾಸನ ಸಂಬಂಧದ ಸಮಗ್ರ ಸಂಗತಿಗಳನ್ನು ಸತ್ಯವಾಗಿ ವಿಶದೀಕರಿಸಿದ್ದಾದರೆ ನನ್ನ ಪತಿರಾಜರನ್ನೂ ಮೈದುನದೇವರಾದ' ತೋಂಡ ಮಾನರನ್ನೂ ವಿಚಾರಿಸಿ ನಮ್ಮೆಲ್ಲರ ಅಭಿಪ್ರಾಯವನ್ನು ನಿಮ್ಮ ಮುಂದೆ ತಿಳಿಸುವೆನು. ಅದಕ್ಕೆ ನಿಮ್ಮ ವರನ ಗೋತ್ರ–ನಕ್ಷತ್ರಗಳೇನು? ಕುಲ–ಶೀಲ, ವಿದ್ಯಾ–ಬುದ್ಧಿ, ವೃತ್ತಿ–ವ್ಯವಸಾಯ ಇವುಗಳನ್ನೆಲ್ಲ ಇದ್ದಂತೆ ತಿಳಿಸಿರಿ. ಆತನಿಗೆ ಜನ್ಮವಿತ್ತ ಪುಣ್ಯವಂತರಾರು? ಸದ್ಯ ಆ ವರನ ವಾಸ್ತವ್ಯವೆಲ್ಲಿದೆ? ಇವೆಲ್ಲವುಗಳನ್ನು ದಯಮಾಡಿ ತಿಳಿಸುವಿರಾ?' ಎಂದು ಕೇಳಿದಳು. ರಾಜಭಾರ್ಯೆಯ ಪ್ರಶ್ನಮಾಲಿಕೆಗಳನ್ನೆಲ್ಲ ಬಕುಲಾವತಿಯು ಕೇಳಿಕೊಂಡು ಎಲ್ಲವುಗಳಿಗೂ ಸಮರ್ಪಕವಾದ ಹಾಗು ಸತ್ಯವಾದ ಉತ್ತರವನ್ನಿತ್ತಳು— 'ದೇವೀ! ಆ ನಮ್ಮ ಶ್ರೀನಿವಾಸನನ್ನು ಹೆತ್ತವರು ವಸುದೇವ–ದೇವಕಿಯರು. ಅವರದು ಚಂದ್ರವಂಶವು. ಕೃಷ್ಣನೆಂಬ ಜನ್ಮನಾಮವು. ಆದರೂ ಸದ್ಯ ಶ್ರೀನಿವಾಸನೆಂಬ ಹೆಸರಿನಿಂದ ಇಲ್ಲಿಯ ವೇಂಕಟಾಚಲದ ನಿವಾಸಿಯಾಗಿರುವನು. ಇನ್ನು ಘಟಿತಾರ್ಥಕ್ಕೆ ಅವಶ್ಯವಿರುವ ಸಂಗತಿಗಳೆಂದರೆ—ಶ್ರೀನಿವಾಸನು ವಶಿಷ್ಠಗೋತ್ರಜನು. ಶ್ರವಣಾನಕ್ಷತ್ರ ಜಾತನು, ಶೀಲ–ಗುಣ, ವಿದ್ಯೆ–ಬಲಗಳಿಂದ

ಮಿಗಿಲಾದವನು. ಅವನ ವಯಸ್ಸು ಇಪ್ಪತ್ತೈದು ವರುಷಕ್ಕೆ ಮಿಕ್ಕಿಲ್ಲ. ನಿಮ್ಮ ಗೋತ್ರಕ್ಕೂ ವಧುವಿನ ರಾಶಿ–ನಕ್ಷತ್ರಗಳಿಗೂ ಹೋಲಿಸಿ ಯೋಗ್ಯ ಜ್ಯೋತಿಷಿಗಳಿಂದ ನಾಲಾವಳಿ ನೋಡಿಕೊಳ್ಳಿರಿ. ನಮ್ಮ ಶ್ರೀನಿವಾಸನ ಬಗ್ಗೆ ಇದಕ್ಕೂ ಹೆಚ್ಚಿನ ಮಾಹಿತಿಯು ಈ ವಿಷಯದಲ್ಲಿ ನಿಮಗೆ ಅವಶ್ಯವಿಲ್ಲ. ಆದರೆ ನಿಮಗೊಂದರಿಂದ ಮಾತ್ರ ಸಂಶಯವುಂಟಾಗಬಹುದೆಂದು ನನ್ನ ತರ್ಕವಿದೆ. ಅದೆಂದರೆ— 'ಇಂಥ ಲಕ್ಷಣಯುಕ್ತ ಶ್ರೀನಿವಾಸನ ಲಗ್ನವು ಇದುವರೆಗೆ ಏಕಾಗ ಲಿಲ್ಲ ?' ಎಂದು ಕೇಳಬಹುದು. ಆದರೆ ಅದಕ್ಕಾಗಿ ಇರುವ ಬಲವಾದ ಕಾರಣ ವನ್ನೂ ನಿಮಗೆ ತಿಳಿಸುವೆ" ಎಂದು ಬಕುಲಾವತಿಯು ಸ್ವಲ್ಪ ಆಲೋಚಿಸಿ ಧೈರ್ಯ ತಂದುಕೊಂಡು— "ಧರಣೀದೇವಿ! ಆ ಶ್ರೀನಿವಾಸನಿಗೆ ಚಿಕ್ಕತನ ದಲ್ಲಿ ಲಗ್ನವಾಗಿದೆ. ತಮ್ಮ ವಂಶಲತೆಯು ಕುಡಿ ಬಿಟ್ಟು ಹಬ್ಬಬೇಕೆಂಬ ಬಯ ಕೆಯು ಸರ್ವರಿಗೂ ಸಾಮಾನ್ಯವಾದುದಲ್ಲವೇ ? ಅದರಂತೆ ನಮ್ಮ ಶ್ರೀನಿವಾಸ ನಿಗೆ ಆ ಮೊದಲಿನ ಪತ್ನಿಯಿಂದ ಒಂದೂ ಅಪತ್ಯವು ಜನಿಸಲಿಲ್ಲ. ಇದೇ ನಿಮಿತ್ತವಾಗಿ ಆತನಿಗೆ ಇನ್ನೊಂದು ಲಗ್ನ ಮಾಡಿ ಆಕೆಯ ಹೊಟ್ಟೆಯಿಂದ ಹುಟ್ಟಿದ ಮಕ್ಕಳ ಮುದ್ದಿನಾಟವನ್ನು ನೋಡಿ ಸಂತೋಷಪಡಬೇಕೆಂಬ ಹೆಬ್ಬ ಯಕೆ ನನ್ನಲ್ಲಿ ಉಂಟಾಗಿದೆ. ಇದೇ ಈ ಎರಡನೆಯ ಲಗ್ನದ ನಿಜವಾದ ಕಾರ ಣವಿರುವದು" ಎಂದು ನಿರ್ವಂಚನೆಯಿಂದ ಎಲ್ಲ ನಿಜ ಸಂಗತಿಯನ್ನು ಹೇಳಿ ಬಿಟ್ಟಳು.

ಬಕುಲಾವತಿಯು ತನ್ನ ಬಯಕೆಯನ್ನೆಲ್ಲ ಬಿಚ್ಚಿಬಿಡದೆ ಹೇಳಿದುದರಿಂದ ಧರಣೀದೇವಿಗೆ ಆನಂದವೆನ್ನಿಸಿತು. ಆಕೂಡಲೆ ಅವಳಲ್ಲಿ ಕೊರವಂಜಿಯ ಭವಿಷ್ಯದಂತೆ ಇದುವರೆಗೆ ಸಂಗತಿಯು ವರ್ತಿಸಿದ್ದನ್ನು ತಿಳಿದುಕೊಂಡಳು. ಪದ್ಮಾವತಿಯನ್ನು ಯೋಗ್ಯವರನಿಗೇ ಕೊಟ್ಟು ಲಗ್ನಮಾಡಿಕೊಡಬೇಕೆಂದು ಮೊದಲಿನಿಂದಲೂ ಪ್ರಾರ್ಥಿಸಿದ್ದ ಆಕೆಯು ಅನಾಯಾಸವಾಗಿ ಅಂಥವರನು ತಾನೇ ಕೂಡಿ ಒಂದುದನ್ನು ನಿರಾಕರಿಸುವದು ಮೂರ್ಖತನದ್ದಾಗುವದು. ಎಂದು ಅರಿತುಕೊಂಡಳು. ಆ ಕೂಡಲೆ ಅವಳು ತನ್ನ ಮಗ ವಸುದಾನನಿಂದ ತನ್ನಪತಿ ಆಕಾಶರಾಜನನ್ನು ಅಲ್ಲಿಗೇ ಬರಮಾಡಿಕೊಂಡು ಇದುವರೆಗೆ ಬಕು ಲಾವತಿಯಿಂದ ತಿಳಿದ ಸಂಗತಿಯನ್ನೆಲ್ಲ ಆತನ ಮುಂದಿಟ್ಟಳು. ಹಾಗೂ ಆಕಯು ತನ್ನ ಪತಿರಾಜನಿಗೆ ಕನ್ಯಾರ್ಥಿಯಾಗಿ ಬಂದಿರುವ ಈ ಬಕುಲಾವತಿ

ಯವರು ಆದಷ್ಟು ತೀವ್ರ ಲಗ್ನಮಾಡಿಕೊಡಬೇಕೆಂದು ಬಯಸುತ್ತಾರೆ. ವರನ ಸಂಬಂಧದ ಎಲ್ಲ ವಿಚಾರಗಳನ್ನು ಅರಿತಿದ್ದಾಗಿದೆ ಈಗ ಪದ್ಮಾವತಿಯು ಈ ಮೊದಲು ಅವಳು ಹೇಳಿದ ತನ್ನ ವನವಿಹಾರದಲ್ಲಿ ವರ್ತಿಸಿದ ಸಂಗತಿಗಳಿಂದಲೂ ಈಗ ನಮ್ಮ ಹಾಗು ಬಕುಲಾವತಿಯರಲ್ಲಿ ನಡೆವ ಮಾತು ಕಥೆಗಳನ್ನು ಆಸ್ಥಿತಿಯಿಂದ ಅವಳು ಕೇಳುತ್ತ ಮೌನ ತಾಳಿರುವದರಿಂದಲೂ ಸಂಶಯವಿಲ್ಲದೆ ಆಕೆ ಆ ಶ್ರೀನಿವಾಸನನ್ನೇ ವರಿಸುವಳು ಅದಕ್ಕಾಗಿ ನೀವು ಈಗಲೆ ಕುಲಪುರೋಹಿತರನ್ನು ಕರಿಸಿ ಬಕುಲಾವತಿಯವರು ತಿಳಿಸಿದ ವರನ ರಾಶಿ, ನಕ್ಷತ್ರ, ಗೋತ್ರ ಮೊದಲಾದವುಗಳಿಗೂ ಪದ್ಮಾವತಿಯ ರಾಶಿ ನಕ್ಷತ್ರಗಳಿಗೂ ಹೊಂದಿಸಿ ಘಟಿತಾರ್ಥವನ್ನು ನೋಡಿಸಿರಿ. ನಿಮಗೂ ತೋಂಡಮಾನ ಮೈದುನ ದೇವರಿಗೂ ಒಪ್ಪಿತವಾದಲ್ಲಿ ಕೂಡಲೆ ವಿವಾಹ ಸಿದ್ಧತೆಯನ್ನು ಮಾಡಿರಿ ಎಂದು ಹೇಳಿದಳು

ತನ್ನ ಪ್ರಿಯಪತ್ನಿಯು ಹೇಳಿದ ಸಂಗತಿಗಳನ್ನೆಲ್ಲ ವಿಚಾರಮಾಡಿಕೊಂಡು ಆಕೆಯನ್ನು ಕುರಿತು— " ಸಖಿ! ಬಕುಲಾವತಿಯರು ದಾವತಿಗೊಂಡು ಇಲ್ಲಿಗೆ ಬಂದುದು ಕೇವಲ ನಮ್ಮ ಸುದೈವವೆಂದೇ ತಿಳಿಯುತ್ತೇನೆ, ಕನ್ಯಾರ್ಥಿಯಾಗಿ ಅವರ ಬರುವಿಕೆಯೆಂದರೆ ಶ್ರೀನಿವಾಸನೇ ಸಾಕ್ಷಾತ್ತಾಗಿ ಬಂದು ಕನ್ಯೆಯನ್ನು ಬೇಡಿದಂತೆಯೇಸರಿ ಬೇಡಬಂದ ಯೋಗ್ಯವರನಿಗೆ ಕನ್ಯೆಯನ್ನು ಕೊಡುವದು ಉತ್ತಮ. ಹುಡುಕಾಡಿ ವರನನ್ನು ಗೊತ್ತುಹಚ್ಚಿ ಕನ್ಯೆಯನ್ನುಕೊಟ್ಟು ಅವನ ಮನೆಗೆ ಮುಡುಪದು ಮಧ್ಯಮ; ಲಗ್ನಮಾಡಿಕೊಳ್ಳುವ ಇಚ್ಛೆಯಿಲ್ಲದವನಿಗೆ ಕೇವಲ ಅವನ ಸಿರಿಯನ್ನು ನೋಡಿ ಆಗ್ರಹದಿಂದ ಲಗ್ನಮಾಡಿ ಕೊಡುವದು ಕನಿಷ್ಠ ಈ ವಿಚಾರಗಳಿಂದ ನೋಡಲು ಶ್ರೀನಿವಾಸನು ನಮ್ಮ ಪದ್ಮೆಗೆ ಉತ್ತಮವರನಾಗಿರುವನು. ಮೇಲಾಗಿ ಆತನು ಈ ಜಗತ್ತಿಗೇ ಒಡೆಯನು. ಅಂಥವನಿಗೆ ಕನ್ಯೆಯನ್ನು ದಾನವಾಗಿ ಧಾರೆಯೆರೆದು ಕೊಡುವೆವೆಂದ ಮೇಲೆ ನಮ್ಮಂಥ ಕೃತಕೃತ್ಯರೇ ಇಲ್ಲವೆಂದು ತಿಳಿ. ಇದೇ ನಮ್ಮ ಸುದೈವ. ಇದರಿಂದ ನಮ್ಮ ಪಿತೃಗಳಿಗೆ ಸುಗತಿ ಇನ್ನು ತೀವ್ರವೇ ನಮ್ಮ ಮಗಳ ಲಗ್ನವನ್ನು ಮಾಡಿ ನೋಡಿ ತೃಪ್ತರಾಗೋಣ. " ಎಂದು ಹೇಳಿದನು. ಅನಂತರ ಆಕಾಶರಾಜನಲ್ಲಿ ಇನ್ನೂ ಒಂದು ವಿಚಾರವು ಹುಟ್ಟಿತು. ಕೇವಲ ಸ್ತ್ರೀವಾಕ್ಯದ ಮೇಲೆಯೇ ವಿಶ್ವಾಸವಿಟ್ಟು ಮಹತ್ವದ ಕಾರ್ಯ ಕೈಕೊಳ್ಳುವದು ಯುಕ್ತವಲ್ಲ. ಅದಕ್ಕಾಗಿ ನಾನೂ ಪದ್ಮಾವತಿಯನ್ನು

ಇನ್ನೊಮ್ಮೆ ವಿಚಾರಿಸುವದು ಉತ್ತಮವೆಂದು ತಿಳಿದು ತನ್ನ ಸತಿ ಧರಣೀ ದೇವಿಯೊಡನೆ ಪದ್ಮಾವತಿಯಿದ್ದಲ್ಲಿಗೆ ಬಂದನು.

ರಾಜ-ರಾಣಿಯರಿಬ್ಬರೂ ಮಗಳು ಪದ್ಮಾವತಿಯ ಹತ್ತಿರ ಹೋದರು. ಶ್ರೀನಿವಾಸನ ತದೇಕ ಧ್ಯಾನದಲ್ಲಿ ಸಿದ್ಧ ಇರದಿದ್ದರೂ ಹಾಸುಗೆಯ ಮೇಲೆ ಮುಸುಕಿಕ್ಕಿ ಮಲಗಿದ ಆಕೆಯನ್ನು ಕಂಡರು. ಧರಣೀದೇವಿಯು— "ಮಗಾ ಪದ್ಮಾ ಏಳು ನೋಡು ಇಲ್ಲಿ ಯಾರು ಬಂದಿರುವರು ಕಾಣು. ನಿನ್ನ ಮನಸಿನ ಬಯಕೆಯನ್ನು ಪೂರ್ಣವಾಗಲು ಇನ್ನೇನು ಕಾಲಾವಧಿಯಿಲ್ಲ. ಏಳೇಳು ಎಂದು ಎಬ್ಬಿಸಿದಳು ಪದ್ಮಾವತಿಯು ಎದ್ದು ಹಾಸಿಗೆಯನ್ನು ಬಿಟ್ಟು ಒತ್ತಟ್ಟಿಗೆ ಸರಿದಳು. ಸಹಜವಾದ ತನ್ನ ಲಜ್ಜೆಯಿಂದ ತಂದೆಯನ್ನು ಕಂಡು ಕೆಳಗೆ ಮುಖಮಾಡಿಕೊಂಡು ಕುಳಿತಳು. ರಾಜನು ಮಗಳನ್ನು ಕುರಿತು— 'ಪದ್ಮಾ ಇದು ನೋಡು ಇನ್ನು ಮನೋವ್ಯಥೆಯನ್ನು ಬಿಟ್ಟು ಬಿಡು. ನಿನ್ನ ದೇಹಾಲಸ್ಯವು ದೂರಾಗಿದೆಯಲ್ಲವೇ ? ತೀವ್ರವೇ ನಿನ್ನನ್ನು ಯೋಗ್ಯವರನಿಗೆ ಕೊಟ್ಟು ಲಗ್ನಮಾಡಿ ಕೃತಕೃತ್ಯರಾಗುವ ನಮ್ಮ ಮನದಿಚ್ಛೆ. ನೀನು ಏನೂ ಸಂಕೋಚಪಡ್ಡದಾಗದೆ ನಿನ್ನ ಮನೋಭಿಪ್ರಾಯವನ್ನು ನನ್ನ ಮುಂದೆ ತಿಳಿಸು ಯಾಕ ಮಾತಾಡಲೊಲ್ಲೆ ? ತೀವ್ರ ಹೇಳು ನಿನ್ನ ಲಗ್ನದ ಸಂಪೂರ್ಣ ಸಿದ್ಧತೆಯನ್ನು ಕೈಕೊಳ್ಳಬೇಕಾಗಿದೆ.' ಇತ್ಯಾದಿಯಾಗಿ ಮಗಳನ್ನು ಮುದ್ದಿಡುವ ಮಾತುಗಳಿಂದ ಮಾತನಾಡಿಸಿದನು. ರಾಜನ ಮಾತಿನೊಡನೆ ಧರಣೀದೇವಿಯೂ ನಡುನಡುವೆ ತಾನೂ 'ತಿಳಿಯಿತೇ' 'ಮನಸ್ಸಿನಲ್ಲಿದ್ದದ್ದನ್ನು ಹೇಳಿಬಿಡು' ಎಂದು ನುಡಿಯುತ್ತಿದ್ದಳು ತಂದೆ ತಾಯಿಗಳಿಬ್ಬರೂ ತನ್ನ ಅಭಿಪ್ರಾಯ ಕೊಳ್ಳದೆ ಬಿಡಲಾರರೆಂದು ಅರಿತು ಪದ್ಮಾವತಿಯು— ತಾಯಿ ! ನನ್ನ ಲಗ್ನದ ವಿಷಯವಾಗಿ ನಾನೇನು ಹೇಳಲೀ ? ಹಿರಿಯರಾದ ನಿಮ್ಮ ಅಭಿಪ್ರಾಯಕ್ಕೆ ನಾನು ಹೊರತಾಗಿರುವೆನೆ ? ಈ ಬಗ್ಗೆ ನನ್ನನ್ನು ಪುನಃ ಪುನಃ ಏಕೆ ಕೇಳುವಿ ? ಒಮ್ಮೆ ನಿನ್ನೆದುರು ನುಡಿದ ಮಾತುಗಳನ್ನು ಮತ್ತೆ ನುಡಿಯುವದಕ್ಕೆ ನನಗೆ ನಾಚಿಕೆಯೆನಿಸುತ್ತದೆ. ನೀನೇ ತಂದೆಯವರ ಪ್ರಶ್ನೆಗಳಿಗೆ ನನ್ನ ಪರವಾಗಿ ಉತ್ತರಕೊಡು ಎಂದು ಮೆಲ್ಲನೆಯ ಮಾತುಗಳಿಂದ ತಾಯಿಗೆ ಹೇಳಿದಳು. ಆಗ ಧರಣೀದೇವಿಯು ಪತಿಯನ್ನು ಕುರಿತು— 'ಮಹಾರಾಜ ! ಪದ್ಮೆಯು ಈ ಮೊದಲೇ ನನ್ನ ಮುಂದೆ ತಿಳಿಸಿದ ಎಲ್ಲ ಸಂಗ

ತಿಯನ್ನು ನಿಮಗೆ ತಿಳಿಸಿರುವೆ ಈಗ ನೀವು ಆಕೆಗೆ ಕೇಳಿದ ಪ್ರಶ್ನೆಗಳಿಗೆ ಅವಳು ತನ್ನ ಹೇಳಿಕೆಯಲ್ಲಿ ಒಂದಕ್ಷರ ನಹ ತೊಡೆದು ನುಡಿಯುವಂತಿಲ್ಲ ಇನ್ನು ನಾವು ಆಕೆಯನ್ನು ಹೆಚ್ಚು ಚಿಕಿತ್ಸೆಮಾಡುವದರಿಂದ ಉಪಯೋಗವಾಗದು. ಮೊದಲೇ ಜಡ್ಡಿನಾಕೆ. ಬಹಳ ಮಾತಾಡಲು ಅವಳಿಗೆ ಮನಸ್ಸಿಲ್ಲ ಇನ್ನು ತಾವು ಲಗ್ನದ ಬಗ್ಗೆ ಅನೇಕಯೋಚನೆಗಳನ್ನು ಮಾಡದೆ ಆಕೆಯ ಮಂಗಲ ಕಾರ್ಯವನ್ನು ತೀವ್ರವೇ ನೆರವೇರಿಸಲಿಕ್ಕೆ ಬೇಕು. ಇನ್ನು ಮುಂದಿನ ಕಾರ್ಯ ಭಾಗವನ್ನು ಆರಂಭಿಸುವದೇ ಯುಕ್ತವು' ಎಂದಳು. ರಾಜನು ಆ ಕೂಡಲೆ ಅಲ್ಲಿಂದ ಎದ್ದು 'ಪದ್ಮಾ! ನಿನ್ನ ಮನಸ್ಸಿನ ಇಚ್ಛೆಯಂತೆ ನಿನ್ನನ್ನು ವೇಂಕಟಾ ಚಲದ ಶ್ರೀನಿವಾಸನಿಗೇ ಧಾರೆಯೆರೆದು ಕೊಡುವೆ. ಇದರಲ್ಲಿ ನಾನು ಇನು ಅಂತರ-ಅವಕಾಶಗಳನ್ನು ಅವಲಂಬಿಸುವದಿಲ್ಲ. ನೀನು ನಿಶ್ಚಿಂತಳಾಗಿ ನಿನ್ನ ದೇಹಾಲಸ್ಯವನ್ನು ದೂರಚಲ್ಲಿಬಿಡು ಎಂದು ಸಮಾಧಾನ ಹೇಳಿದನು ಹಾಗು ಅಲ್ಲಿಯೇ ಕುಳಿತುಕೊಂಡು ದೇವಗುರು ಬೃಹಸ್ಪತ್ಯಾಚಾರ್ಯರಿಗೆ ಪತ್ರ ಬರೆದು ಮಗ ವಸುದಾನನ ಕೈಯಲ್ಲಿ ಕೊಟ್ಟು ಕಳುಹಿದನು.

ತಂದೆಯು ಬರೆದುಕೊಟ್ಟ ಪತ್ರಸಹಿತವಾಗಿ ವಸುದಾನನು ಸುರಲೋಕಕ್ಕೆ ಹೋಗಿ ಗುರುಬೃಹಸ್ಪತ್ಯಾಚಾರ್ಯರನ್ನು ಕಂಡನು ಅವರಿಗೆ ಸಾಷ್ಟಾಂಗ ಪ್ರಣಿಪಾತ ನೀಡಿ ತಂದೆಯಿಂದ ತಂದ ಪತ್ರವನ್ನು ಅವರಕೈಗೆ ಕೊಟ್ಟನು ಗುರುವು ಆಕಾಶರಾಜನ ಹಸ್ತಲಿಖಿತ ಪತ್ರವನ್ನುಬಿಚ್ಚಿದನು ಅದರಲ್ಲಿ ಬರೆದ ಪದ್ಮಾವತಿ ಪರಿಣಯದ ವಿಚಾರಕ್ಕಾಗಿ ತನ್ನನ್ನು ರಾಜನು ವಿನಯದಿಂದ ಬರಮಾಡಿ ಕೊಳ್ಳಲು ಬರೆವದ್ದನ್ನುನೋಡಿ ಆ ಗುರುವಿಗೆ ಒದಿಸಲಾರದಷ್ಟು ಸಂತೋಷ! ಆ ಕೂಡಲೆ ಆತನು ವಸುದಾನನನ್ನು ಮುಂದೆ ಕಳಿಸಿ ಹಿಂದಿನಿಂದ ತಾನು ಆ ರಾಜನ ಪಟ್ಟಣವಾದ ನಾರಾಯಣಪುರವನ್ನು ಬಂದು ಸೇರಿದರು

ಗುರುಮಾರ್ಗ ಪ್ರತೀಕ್ಷೆಯಲ್ಲಿದ್ದ ರಾಜನು ಮಗನಿಂದ 'ಗುರುಗಳು ಇದೀಗ ಬರುವರು' ಎಂದು ತಿಳಿದುಕೊಂಡು ಮಹಾದ್ವಾರಕ್ಕೆ ಬರುವಷ್ಟರಲ್ಲಿಯೇ ಬೃಹಸ್ಪತ್ಯಾಚಾರ್ಯರು ಅಲ್ಲಿಗೆ ಬಂದೇಬಿಟ್ಟರು ತಡವಿಲ್ಲದೆ ರಾಜನ ವಂದನೆಗಳನ್ನು ಸ್ವೀಕರಿಸಿ ಕುಶಲಪ್ರಶ್ನೋತ್ತರಗಳಲ್ಲಿಯೇ ಅವರಿಬ್ಬರು ಸಾಗುತ್ತ ಅರಮನೆಯೊಳಕ್ಕೆ ಪ್ರವೇಶಮಾಡಿದರು. ಗುರುಗಳನ್ನು ಉಚಿತಾಸನದಲ್ಲಿ ಕುಳ್ಳಿರಿಸಿ ರಾಜನು ಯಥಾವಿಧಿಯಿಂದ ಸತ್ಕರಿಸಿದನು. ಆಗ

ರಾಜನು 'ಮಹಾನ್! ತಮ್ಮ ಆಜ್ಞೆಯನ್ನು ಪಡೆದು ನಮ್ಮ ಪುತ್ರಿ ಸೌಭಾಗ್ಯ ಕಾಂಕ್ಷಿಣಿ ಪದ್ಮಾವತಿಯ ವಿವಾಹಕಾರ್ಯ ನೆರವೇರಿಸಲು ಬದ್ಧನಾಗಿರುವೆನು. ಜಗತ್ಪತಿಯಾದ ವೇಂಕಟಾಚಲದ ಶ್ರೀನಿವಾಸನಿಗೇ ಧಾರೆಯೆರೆದುಕೊಟ್ಟು ಶರೀರ ಸಂಬಂಧಪಡೆಯಬೇಕೆನು. ಆ ಶ್ರೀನಿವಾಸನ ಕಡೆಯಿಂದ ಆತನ ಮಾತೆಯು ಆಪ್ತಳಾದ ಬಕುಲಾವತಿಯು ಕನ್ಯೆಯನ್ನು ಒಯಿಸಿ ಬಂದಿರುವಳು. ಇನ್ನು ಮುಂದಿನ ವಿಚಾರವೆಲ್ಲ ಕುಲಗುರುಗಳಾದ ನಿಮ್ಮ ಅನುಮತಿಯಂತೆ ಸಾಗುವುದು ಕ್ರಮಪ್ರಾಪ್ತವು. ಹೆಚ್ಚಿಗೇನು ತಿಳಿಸಲಿ? ನಿಮ್ಮ ಅಪ್ಪಣೆಯನ್ನನುಸರಿಸಿ ಮುಂದೆ ಸಾಗುವೆನು' ಎಂದು ನುಡಿದು ಸುಮ್ಮನಾದನು.

ರಾಜ! ಸಹಸ್ರವರ್ಷದ ಶರೀರಸಂಬಂಧ ಘಟನೆಗೆ ಸಾರಾಸಾರ ವಿಚಾರಮಾಡುವುದು ಸರ್ವಸಮ್ಮತವು. ನಾನು ಇದುವರೆಗೆ ಸುರಲೋಕದಲ್ಲಿ ನಡೆವ ವಿಚಾರಗಳಲ್ಲಿ ಮನಸ್ಸು ತೊಡಗಿಸುತ್ತ ಅಲ್ಲಿಯೇ ಬಹುಕಾಲ ಕಳೆದೆನು. ಈ ಭೂಲೋಕದ ಯಾವಸಂಗತಿಗಳ ಕಡೆಗೂ ಲಕ್ಷ್ಯಕೊಡಲಿಲ್ಲ. ಶ್ರೀನಿವಾಸನ ಸಂಪೂರ್ಣಸಂಗತಿಯು ನನಗೆ ಗೊತ್ತಿದ್ದಕ್ಕಿಂತಲೂ ಆತನ ಸಮೀಪದಲ್ಲಿ ಆಶ್ರಮವಾಸಿಯಾಗಿದ್ದ ಶುಕಾಚಾರ್ಯರಿಗೆ ಹೆಚ್ಚು ತಿಳಿದಿರಲಿಕ್ಕೆಬೇಕು. ಅವರನ್ನು ಬರಮಾಡಿಕೊಂಡು ಮುಂದಿನವಿಚಾರ ನಡೆಯಿಸೋಣ. ಶೀಘ್ರವೇ ಅವರನ್ನು ಕರೆಯಿಸು'. ಎಂದು ಆಜ್ಞೆಯನ್ನಿತ್ತರು. ಆ ಕೂಡಲೆ ರಾಜನು ತನ್ನ ತಮ್ಮ ತೋಂಡಮಾನನನ್ನು ಕಳಿಸಿ ಆ ಶುಕಾಚಾರ್ಯರನ್ನು ಕರೆಯಿಸಿಕೊಂಡು ಗುರುಬೃಹಸ್ಪತ್ಯಾಚಾರ್ಯರಿಗೆ ಭೆಟ್ಟಿಮಾಡಿಸಿದನು. ಬೃಹಸ್ಪತಿಯವರು ಶುಕಮುನಿಯು ಬಂದ ಕೂಡಲೇ 'ರಾಜನು ತನ್ನ ಮಗಳನ್ನು ಶ್ರೀನಿವಾಸನಿಗೆ ಕೊಟ್ಟು ವಿವಾಹ ಮಾಡುವ ಸಿದ್ಧತೆಯನ್ನು ಕೈಕೊಂಡಿರುವನು' ಎಂದಿಷ್ಟೇ ಆತನಿಗೆ ತಿಳಿಸಿದನು. ಶುಕಮುನಿಗೆ ಒಳ್ಳೇ ಆನಂದದ ಮಿತಿಮೀರಿ ಭ್ರಮಿಷ್ಟನನ್ನು ಸಹ ಮೀರಿಸುವ ಹುಚ್ಚಾಟಗಳನ್ನು ಆ ಮುನಿಯು ಕೈಕೊಂಡ ಕೆಲಹೊತ್ತಿನನಂತರ ಶುದ್ಧಿಯನ್ನು ಪಡೆದನು. ಆಕಾಶರಾಜನನ್ನು ಕುರಿತು ಶುಕಮುನಿಯು—ರಾಜ! ನಿನ್ನ ಧನ್ಯತೆಯು ಇನ್ನೊಬ್ಬರಿಗೆ ದೊರೆಯದು. ಸಾಕ್ಷಾತ್ ಶ್ರೀನಿವಾಸನಿಗೆ ಅರ್ಥಾತ್ ಜಗತ್ಪತಿಗೆ ನಿನ್ನಮಗಳನ್ನು ಕನ್ಯಾದಾನ ಮಾಡಿಕೊಡುವಿಯೆಂದಮೇಲೆ ಇನ್ನು

ಮೇಲೆ ನಿನ್ನ ಮುಂದೆ ಯಾರಿರುವರು? ನಿನ್ನ ವಂಶವೇ ಉದ್ಧಾರವಾಯಿತೆಂದು ತಿಳಿ. ನಿನ್ನ ಪೂರ್ವ ಸುಕೃತವು ನಿನಗೆ ಜಗತ್ಪತಿಯನ್ನು ಜಾಮಾತೃವನ್ನಾಗಿ ಮಾಡಿಕೊಟ್ಟಿತು. ಆ ಸಾಕ್ಷಾತ್ ಶ್ರೀನಿವಾಸದೇವನ ಪ್ರಾಪ್ತಿಗಾಗಿ ನಮ್ಮಂಥ ಸನ್ಯಾಸಿಗಳೂ, ಯೋಗಿಗಳೂ, ಇನ್ನೂ ಹಲವು ಪ್ರಕಾರದ ಸಾಧಕರೂ. ತಪ–ತಪಾನುಗಟ್ಲಿಯಾಗಿ ದೇಹ ದಣಿಸಿ, ಮೈಮೇಲೆ ಹುತ್ತು ಬೆಳೆಯುವ ವರೆಗೂ ಕುಳಿತು ಧ್ಯಾನಮಾಡಿದರು. ಸ್ಮರಣೆಮಾಡಿದರು. ಇಷ್ಟೇಏಕೆ? ದೇಹವನ್ನೂ ಕೂಡ ಚಲ್ಲಿಹೋದರು. ಆದರೂ ಆತನು ಅವರಿಗೆ ದೊರೆಯಲು ದುಸ್ತರನಾದನು. ನೀನುಮಾತ್ರ ಸುಗಮವಾಗಿ ಆ ಶ್ರೀನಿವಾಸನನ್ನು ಹೊಂದುವಿಎಂದಮೇಲೆ ನಿನ್ನ ಯೋಗ್ಯತೆಯು ಅಸಾಮಾನ್ಯವಾದುದು! ಸಂತೋಷ! ರಾಜಾ! ನಮ್ಮೆಲ್ಲರಿಗೂ ಒಳ್ಳೆ ಸಂತೋಷ! ಆ ಶ್ರೀನಿವಾಸನನ್ನು ಕುರಿತು ಮನಸ್ಸಿನಲ್ಲಿ ಏನೊಂದು ಸಂಶಯವನ್ನೆಣಿಸದೆ ನಿನ್ನ ಮಗಳನ್ನು ಆತನಿಗೆ ಕನ್ಯಾದಾನವಾಗಿನೀಡು. ನಿನ್ನ ಮೂಲಕವಾಗಿ ಹಾಗು ನೀನು ಮಾಡುವ ಮಗಳಲಗ್ನ ನಿಮಿತ್ತವಾಗಿ ಬಂದ ನಮ್ಮೆಲ್ಲರಿಗೆ ಅನಾಯಾಸವಾಗಿ ಲಕ್ಷ್ಮೀಸಹಿತ ಶ್ರೀನಿವಾಸನನ್ನು ಕಾಣುವ ಸುಯೋಗವು ಲಭಿಸುವದು. ಎಂದು ಶುಕಮುನಿಯೂ ಬೃಹಸ್ಪತ್ಯಾಚಾರ್ಯರೂ ರಾಜನಿಗೆ ತಮ್ಮ ತಮ್ಮ ಸ್ಪಷ್ಟವಾದ ಅಭಿಪ್ರಾಯಗಳನ್ನು ತಿಳಿಸಿದರು.

ಆ ಬಳಿಕ ರಾಜನು ಬಕುಲಾವತಿಯಿಂದ ಕೇಳಿಕೊಂಡ ವರನ ಗೋತ್ರ–ನಕ್ಷತ್ರಗಳನ್ನು ಬರೆದ ಕಾಗದವನ್ನೂ ಪದ್ಮಾವತಿಯ ಜಾತಕದ ಟಿಪ್ಪಣೆಯನ್ನೂ ಬ್ರಹಸ್ಪತ್ಯಾಚಾರ್ಯರ ಕಡೆಗೆ ಕೊಟ್ಟು— 'ಸ್ವಾಮಿ! ವಧೂವರರ ಜನನ ಟಿಪ್ಪಣೆಗಳನ್ನು ನಿರೀಕ್ಷಿಸಿ ಘಟಿತಾರ್ಥವನ್ನು ತಿಳಿಸಬೇಕು. ಹಾಗು ಅವರಿಗಿರುವ ಗ್ರಹಗಳ ಬಲಾಬಲಗಳನ್ನೂ ಫಲವನ್ನೂ ನೋಡಬೇಕು.' ಎಂದು ಹೇಳಿದನು. ಗುರುವು ಎರಡೂ ಟಿಪ್ಪಣೆ ಕಾಗದಗಳನ್ನು ಆಳವಾಗಿ ಜ್ಯೋತಿರ್ಗಣಿತದ ಆಧಾರದಿಂದ ವಿಚಾರಿಸಿದನು. ಬಳಿಕ ಮತ್ತೂ ಒಂದು ಸಾರೆ ನೋಡಿ ತನ್ನ ಮನಸ್ಸಿಗೆ ಒಪ್ಪಿತವಾದ ನಂತರ ರಾಜನನ್ನು ಕುರಿತು— 'ರಾಜ! ವರನ ಗೋತ್ರವು ವಶಿಷ್ಠವಾಗಿದ್ದು ಕನ್ಯೆಯ ಗೋತ್ರವಾದ ಅತ್ರಿಯ ಎಲ್ಲ ಪ್ರವರಗಳಿಂದ ಭಿನ್ನವಾಗಿರುವದು. ವರನ ಜನನ ನಕ್ಷತ್ರವು ಶ್ರವಣ. ಹಾಗೂ ನಿಮ್ಮ ಮಗಳ ನಕ್ಷತ್ರವು ಮೃಗಶಿರವಾದುದರಿಂದ ನಾಡೀದೋಷವಾಗಲಾರದು.

ಇಬ್ಬರ ನಕ್ಷತ್ರಗಳಾದರೂ ದುಷ್ಟ ವರ್ಗದವಲ್ಲ. ಮುಖ್ಯವಾಗಿ ಗೋತ್ರ-ನಾಡಿಗಳ ಭಿನ್ನತೆಯಾದಲ್ಲಿ ವಧೂವರರ ವಿವಾಹಕ್ಕೆ ಬಾಧಕವಿಲ್ಲೆಂದು ಬಹು ಜನ ಮತ. ಇನ್ನೂ ಇದಕ್ಕಿಂತಲೂ ಸೂಕ್ಷ್ಮ ತಿಳಿಯುವದಾದಲ್ಲಿ ನಾಡೀ ವೇಧಲಾದ ಕೂಟ, ನವಾಂಶ, ದ್ವಾದಶಾಂಶ ದೋಷ ಇವೆಲ್ಲವನ್ನು ನೋಡಿ ಯಾವದರಲ್ಲಿಯೂ ದೋಷವಿರದ್ದನ್ನು ಕಂಡುಕೊಳ್ಳಬೇಕಾಗುತ್ತದೆ ಇದೂ ಅಲ್ಲದೆ ಜನ್ಮಲಗ್ನ ಕುಂಡಲಿಯನ್ನು ನೋಡಿ ಮಂಗಳ ದೋಷವಿದೆಯೋ ಹೇಗೆಂಬದನ್ನು ಕಾಣಬೇಕಾಗುತ್ತದೆ ಪ್ರಕೃತ ನೀನು ನನ್ನ ಕೈಯಲ್ಲಿ ಕೊಟ್ಟ ವಧೂವರರ ಟಿಪ್ಪಣೆಗಳಿಂದ ಯಾವ ದೋಷಗಳೂ ಈ ವಧೂವರರಲ್ಲಿ ಕಂಡು ಬರುವದಿಲ್ಲ. ಈ ಪ್ರಕಾರ ಜ್ಯೋತಿಷ್ಯದ ಪರವಾಗಿ ನುಡಿಯಬೇಕಾದರೆ ಈ ವಿವಾಹಕ್ಕೆ ತಿಲಾಂಶವಾದರೂ ಸಂಶಯಕ್ಕೆ ಆಸ್ಪದ ಸಿಗಲಾರದು. ರಾಜ! ಇನ್ನು ವರನ ಉತ್ಪನ್ನವೊದಲಾದವುಗಳ ವಿಚಾರಮಾಡಿ ಕನ್ಯೆಕೊಡುವದು ಇಲ್ಲವೆ ಬಿಡುವದು ನಿಮ್ಮ ಮನಸ್ಸನ್ನು ಅವಲಂಬಿಸಿದೆ ಆ ವಿಷಯದಲ್ಲಿ ಜ್ಯೋತಿಷಿಗಳಾದ ನಾವು ಏನನ್ನೂ ಅಭಿಪ್ರಾಯ ಕೊಡಲಾರವು. ಕೇವಲ ವಧೂವರರ ಲಗ್ನವಾಗಬೇಕು. ನಮಗೆ ಯಥೇಚ್ಛವಾಗಿ ಭೋಜನ, ದಕ್ಷಿಣೆ ದೊರೆಯಬೇಕು ಇಷ್ಟೇ ನಮ್ಮ ಬಯಕೆಯಿರಲು ಸಾಕು. ಹಾಗು ವಧೂವರರಿಗೆ ಉತ್ತರೋತ್ತರ ಉತ್ಕರ್ಷೆಯನ್ನು ದೇವರು ಉಂಟು ಮಾಡಲೆಂದು ಆಶೀರ್ವಾದ ಮಾಡುವ ನಮಗೆ ಅಧಿಕಾರವಿದ್ದರೆ ಸಾಕು'' ಎಂದು ನುಡಿದನು. ಆಕಾಶರಾಜನು ಗುರುಮುಖದಿಂದ ಎಲ್ಲ ಸಂಗತಿಯನ್ನು ಕೇಳಿಕೊಂಡು ಆ ಕೂಡಲೇ ತನ್ನ ಬಂಧು-ಬಳಗ, ಇಷ್ಟಮಿತ್ರ ಇವರನ್ನೆಲ್ಲ ಕರೆಯಿಸಿಕೊಂಡು ಪದ್ಮಾವತಿಯ ವಿವಾಹವದ್ದು ಕುರಿತು ಅವರೊಡನೆ ತುಸು ವಿಚಾರ ಮಾಡಿದನು. ಅವರೆಲ್ಲರೂ ಆಕಾಶರಾಜನ ವಿಚಾರದಲ್ಲಿ ಏನೂ ಹೆಚ್ಚು-ಕಡಿಮೆ ಎಣಿಸದೆ ವಿವಾಹವನ್ನು ಆದಷ್ಟು ತೀವ್ರ ಮಾಡಿ ಮುಗಿಸಲು ಅನುಮತಿಯಿತ್ತರು

ಆಯಿತು! ನಮ್ಮ ಪದ್ಮಾವತಿಯ ಲಗ್ನದ ಪೂರ್ವ ಪೀಠಿಕೆಯು ಮುಗಿದಂತಾಯಿತು. ಇನ್ನು ಕನ್ಯಾಪೇಕ್ಷಿಯಾದ ಶ್ರೀನಿವಾಸನಿಗೆ ಈ ಸಂಗತಿಯನ್ನು ಅಲ್ಲಿಂದ ಬಂದ ಬಕುಲಾವತಿಯ ಹಾಗು ಶುಕಮುನಿಗಳ ಮುಖಾಂತರವಾಗಿ ವಾಗಿ ತಿಳಿಸುವದೂ ನಿರ್ಣಯವಾಯಿತು. ಆಕಾಶರಾಜನು ಗುರು-ಬೃಹಸ್ಪತ್ಯಾಚಾರ್ಯರ ಸಮಕ್ಷಮವಾಗಿ ಕೂಡಿದ ಎಲ್ಲ ಬಂಧುಗಳನ್ನೂ ಆಪ್ತೇಷ್ಟರನ್ನೂ

ವರನ ಕಡೆಯಿಂದ ಬಂದ ಬಕುಲಾವತಿಯನ್ನೂ ಕುರಿತು ತನ್ನ ಭುಜಗಳನ್ನೆತ್ತಿ 'ನಾನು ನನ್ನ ಮಗಳು ಪದ್ಮಾವತಿಯನ್ನು ವೇಂಕಟಾಚಲದ ಶ್ರೀನಿವಾಸನಿಗೆ ಕನ್ಯಾದಾನದಿಂದ ಧಾರೆಯೆರೆದು ಕೊಡುವೆನು. ಈ ನನ್ನ ಭಾಗ್ಯಾಸಕ್ಕ ದೇವ–ಗುರು–ವಿಪ್ರರೂ ಮೊದಲಾಗಿ ಎಲ್ಲರು ಪುಸನ್ನತೆಯನ್ನು ಕೊಡುವಿರೆಂದು ನಂಬಿರುವೆ.' ಎಂದು ಸಾರಿ ಹೇಳಿದನು. ಬಳಿಕ ಬೃಹಸ್ಪತ್ಯಾಚಾರ್ಯರ ಸಲಹೆಯಂತೆ ವೇಂಕಟಾಚಲದ ಶ್ರೀನಿವಾಸನಿಗ ಒಂದು ಪತ್ರವನ್ನು ಬರೆದನು. ಆ ಪತ್ರಿಕೆಯ ಲಿಖಿತವು ಕೆಳಗಿನಂತಿದೆ—

" ಸ್ವಸ್ತಿ! ಶುಭಂ ಭವತು!! ಅಪ್ರಾಕೃತ, ನಿತ್ಯಾನಂದ, ಅದ್ವಿತೀಯ ಸ್ವತಂತ್ರ ಮೂರ್ತಿಯೂ ಅನಂತ ರೂಪಿಯೂ ಭಕ್ತಪ್ರಿಯನೂ, ಸಕಲ ಸುರರಿಂದ ವಂದ್ಯನೂ ಲಕ್ಷ್ಮೀಪತಿಗೆ ಆವಾಸವಾದ ವೇಂಕಟಗಿರಿ ನಿವಾಸಿಯೂ ಆದ ಶ್ರೀನಿವಾಸನಿಗೆ.— ನಾರಾಯಣಪುರದ ಆಕಾಶರಾಜನ ಕೃತಕಾನೇಕ ಆಶೀರ್ವಾದಗಳು. ಸರ್ವವೂ ಕುಶಲವು. ನನ್ನ ಈ ಪತ್ರಿಕೆಯಿಂದ ನಿಮಗೆ ನಾನು ಬಿನ್ನವಿಸುವದೇನಂದರೆ— ನಿಮಗೆ ನನ್ನ ಪ್ರೇಮದ ಪುತ್ರಿ ಸೌಭಾಗ್ಯ ಕಾಂಕ್ಷಿಣಿ ಪದ್ಮಾವತಿಯನ್ನು ಕನ್ಯಾದಾನ ವಿಧಿಯಿಂದ ಇದೇ ವೈಶಾಖ ಶುದ್ಧ ದಶಮೀ ಶುಕ್ರವಾರದ ಶುಭ ಮುಹೂರ್ತದಲ್ಲಿ ಲಗ್ನ ಮಾಡಿ ಕೊಡುವದನ್ನು ದೇವ–ಗುರು–ವಿಪ್ರರ ಆಶೀರ್ವಾದ ಹಾಗು ಆಜ್ಞೆಗಳಿಂದ ನಿಶ್ಚಯಿಸಿರುವೆನು. ನೀವು ನಿಮ್ಮ ಇಷ್ಟ–ಮಿತ್ರ, ಬಂಧು–ಬಾಂಧವರೊಡನೆ ಸಕಾಲಕ್ಕೆ ಇಲ್ಲಿಗೆ ಆಗಮಿಸಿ ನಮ್ಮಿಂದ ದತ್ತವಾದ ಕನ್ಯೆ ಪದ್ಮಾವತಿಯನ್ನು ವಿಧಿಯುಕ್ತವಾಗಿ ಸ್ವೀಕರಿಸುವಿರೆಂದು ನಾವು ಬಲವಾಗಿ ಬಾರೈಸುವೆವು. ನಮ್ಮ ಉಳಿದ ಎಲ್ಲ ವಿಚಾರಗಳು ನಿಮ್ಮ ಕಡೆಯಿಂದ ಬಂದ ಮಾತುಃಶ್ರೀ ಸಮಾನರಾದ ಬಕುಲಾವತಿಯವರಿಂದಲೂ ನಿಮ್ಮ ಸಮೀಪವಾಸಿಗಳಾದ ಮುನಿವರೇಣ್ಯ ಶುಕಾಚಾರ್ಯರಿಂದಲೂ ನಿಮಗೆ ವಿದಿತವಾಗುವದು. ಶ್ರೀನಿವಾಸ! ನಮ್ಮ ಪದ್ಮಾವತಿಯೊಡನೆ ನಿನ್ನ ಪರಿಣಯವಾಗಿ ಉತ್ತರೋತ್ತರ ಕಲ್ಯಾಣವಾಗಲಿ' ಎಂದು ನನ್ನ ಬಯಕೆಯ ರೂಪದ ಆಶೀರ್ವಾದವನ್ನು ನೀಡುವೆನು."

ಮೇಲಿನಂತೆ ಆಕಾಶರಾಜನು ಪತ್ರವನ್ನು ಬರೆದು ಒಂದು ಸಲ ಗುರುವಿನೆದುರಿಗೆ ಓದಿ ತೋರಿಸಿದನು. ಆಗ ತಮ್ಮ ಆಶ್ರಮಕ್ಕ ಹೊರಟು ನಿಂತಿದ್ದ ಶುಕಾಚಾರ್ಯರ ಕೈಗೆ ಅದನ್ನು ಕೊಟ್ಟು— ' ಸ್ವಾಮಿನ್! ಇದೀಗ

ನೀವು ಹೊರಟು ವೇಂಕಟಾಚಲಕ್ಕೆ ಹೋಗಿ ಶ್ರೀನಿವಾಸನಿಗೆ ಈ ಪತ್ರಿಕೆಯನ್ನು ಕೊಡಿರಿ. ಆತನ ಮನಸ್ಸು ಪದ್ಮಾವತಿಯನ್ನು ವರಿಸುವ ಹಾಗೆ ನೀವು ನಿಮ್ಮ ಜಾಣತನದ ಮಾತುಗಳನ್ನು ಬಳೆಸಿರಿ, ವರದಕ್ಷಿಣೆ, ವರಭೂಷಣಗಳಿಗಾಗಿ ಆತನು ಬೇಡುವ ಹೊನ್ನಿನ ಸಂಖ್ಯೆಯನ್ನು ಇಮ್ಮಡಿ ಮುಮ್ಮಡಿಯಾಗಿ ನನ್ನ ಪತಿಯಿಂದ ನೀವೇ ಆತನಿಗೆ ತಿಳಿಸಿಬಿಡಿರಿ. ಆವನು ತನ್ನ ವಿವಾಹಕ್ಕಾಗಿ ಒಂದು ಕಪರ್ದಿಕೆಯನ್ನು ಸಹ ವ್ಯಯ ಮಾಡಬಾಗದೆಂದು ಅವನಿಗೆ ತಿಳಿಸಿಬಿಡಿರಿ. ಒಟ್ಟಿನ ಮೇಲೆ ಈ ವಿವಾಹವು ಕೈಗೂಡುವಂತೆ ಮಾಡುವಲ್ಲಿ ನೀವು ವಿಶೇಷ ಶ್ರಮವಹಿಸಿರಿ." ಎಂದು ಹೇಳಿ ಶಿಷ್ಟಾಚಾರದಂತೆ ಸ್ವಲ್ಪ ಮುಂದೆ ಕಳಿಸಿ ಹಿಂತಿರುಗಿದನು.

ಶುಕಮುನಿಗಳು ತಮ್ಮ ಆಶ್ರಮದ ಮಾರ್ಗ ಹಿಡಿದು ನಡೆದರು. ಅವರ ತರುವಾಯ 'ಅಲ್ಪಾವಧಿಯಲ್ಲಿಯೇ ಬಕುಲಾವತಿಯು ಧರಣೀದೇವಿಯ ನಿರೋಪ ಪಡೆದು ತನ್ನ ಕುದುರೆಯನ್ನೇರಿ ವೇಂಕಟಾಚಲಕ್ಕೆ ತೆರಳಿದಳು. ಏಕಸಮಯಾವಚ್ಛೇದವಾಗಿ ಅವರೀರ್ವರೂ ವೇಂಕಟಾಚಲವನ್ನು ತಲುಪಿದರು. ಇಬ್ಬರಿಗೂ ಶ್ರೀನಿವಾಸನಿಂದ 'ಬರ್ರಿ' ಎಂಬ ಒಂದೇ ಶಬ್ದದಿಂದ ಸ್ವಾಗತವಾಯಿತು.

ಇದುವರೆಗೆ ಶ್ರೀನಿವಾಸನು 'ಬಕುಲಾವತಿಯ ಮಾರ್ಗವನ್ನೇ ನಿರೀಕ್ಷಿಸುತ್ತ ಹುತ್ತಿನ ಮೇಲೆ ಕುಳಿತಿದ್ದ. ನಡುನಡುವೆ ಎದ್ದು ನಿಂತು ದೃಷ್ಟಿ ಹರಿಯುವವರೆಗೆ ನೋಡುತ್ತಿದ್ದ. ಹುತ್ತದ ಒಂದು ಬದಿಯ ಮಾರ್ಗದಿಂದ ಶುಕಮುನಿಯೂ ಇನ್ನೊಂದು ಬದಿಯ ಮಾರ್ಗದಿಂದ ಬಕುಲಾವತಿಯೂ ಬಂದರು. ಕೂಡಲೇ ಶ್ರೀನಿವಾಸನು ಶುಕಮುನಿಗಳೇ ನೀವು ವಹಿಸಿದ ನನ್ನ ಕಾರ್ಯವು ಕೈಗೂಡಿತೇ ? ಬಕುಲಾದೇವಿ! ನಿನ್ನ ಬಯಕೆ ಈಡೇರಿತೇ? ಎಂದು ಕೇಳಿದನು. ಇಬ್ಬರೂ ಒಂದೇ ಉಸುರಿನಿಂದ 'ಹೌದು' ಎಂದು ನುಡಿದರು. ಆಗ ಶ್ರೀನಿವಾಸನ ಉತ್ಸಾಹಕ್ಕೆ ಎಣೆಯಿಲ್ಲದಾಯಿತು. ಕೂಡಲೆ ಆತನು ಶುಕಮುನಿಯನ್ನು ಅಪ್ಪಿ ಶುಕಮುನಿಗಳೇ ನೀವು ನನ್ನ ವಿವಾಹ ಜರುಗಿಸುವ ಆಶೆಯುಳ್ಳವರಾಗಿ ಮಾರ್ಗಯಾಸ ಹೊಂದಿದಿರಿ. ಕಾರ್ಯ ಕೈಗೂಡಲು ನನ್ನಲ್ಲಿಲ್ಲದ ಸಂಗತಿಗಳನ್ನು ಇದ್ದಂತೆ ಮಾಡಿ ನೀವು ಅಲ್ಲಿ ನುಡಿದಿರಬಹುದು. ಆದರೂ ಅಡ್ಡಿಯಿಲ್ಲ. ಗಂಡಾಂತರದಲ್ಲಿ ಸಿಕ್ಕ ಪ್ರಾಣಿಯನ್ನು ಉಳಿಸುವಲ್ಲಿಯೂ ಬೇರೊಬ್ಬನ ಕಲ್ಯಾಣಕಾರ್ಯ ಕೊನೆಗಾಣಿಸುವಲ್ಲಿಯೂ ಹಲವು

ಸುಳ್ಳುಗಳನ್ನು ಬಳಿಸಿದ್ದಾದರೆ ಅದು ದೋಷವೆನ್ನಿಸಲಾರದು. ಇಷ್ಟೇಅಲ್ಲ ಆ ಸುಳ್ಳಾಡುವವರು ಸಹ ವೈಕುಂಠಪದವಿಗೆ ಏರುವರೆಂದು ನನ್ನ ವಚನ ವುಂಟು. ಈಗ ನಾನು ನನ್ನ ಲಕ್ಷ್ಮಿಯಿಂದ ದೂರಾಗಿರುವೆನಲ್ಲವೇ ? ಸಾಮಾನ್ಯರ ಕುಟುಂಬಕ್ಕಿಂತಲೂ ನನ್ನದು ಬಲುದೊಡ್ಡದು. ಇಡೀ ಬ್ರಹ್ಮಾಂಡವೇ ನನ್ನಮನೆ. ಬ್ರಹ್ಮನೇ ನನ್ನ ಮಗನು, ಎಲ್ಲ ಜೀವರಾಶಿಗಳೇ ನನ್ನಿಂದ ರಕ್ಷಿತವಾಗುವ ಮಕ್ಕಳು. ಇಂಥ ಘನವಾದ ಸಂಸಾರವನ್ನು ತೂಗಿಸಿಕೊಂಡು ಹೋಗುವದು ನನ್ನ ಲಕ್ಷ್ಮಿಯು ಸಿಟ್ಟಾಗಿ ಕರವೀರಪುರಕ್ಕೆ ಹೋದಂದಿನಿಂದ ನನಗೆ ದುಸ್ತರವೆನ್ನಿಸಿ ಬಿಟ್ಟಿದೆ. ಮಂದಬುದ್ಧಿಯಿಂದ ಪ್ರಪಂಚ ತ್ಯಾಗ ಮಾಡಿ ವೈರಾಗ್ಯದ ಸೋಗು ಹಾಕಿಕೊಂಡು ನಿರ್ಜನವಾದ ಅರಣ್ಯಸೇರಿ 'ಬ್ರಹ್ಮಚಿಂತನವೆಂದು ಕುಳಿತುಕೊಳ್ಳಲು ನನ್ನ ಮನಸ್ಸಿಲ್ಲ. ಹಾಗಾದರೆ ನನ್ನ ಇಡೀ ಜಗತ್ಕುಟುಂಬವೇ ನಾಶವಾಗುವದು ಈ ಅನವಸ್ಥೆಯನ್ನು ತಪ್ಪಿಸಲು ನಾನು ಇನ್ನೊಂದು ಲಗ್ನ ಮಾಡಿಕೊಳ್ಳದೆ ಗತ್ಯಂತರವಿಲ್ಲದಾಯಿತು. ಆ ಬಗ್ಗೆ ನಮ್ಮ ಬಕುಲಾವತಿಯ ಬಯಕೆಯೂ ಹೆಚ್ಚಾಯಿತು. ಕೊನೆಗೆ ನಿಮ್ಮೆಲ್ಲರ ಮಧ್ಯಸ್ತಿಕೆಯಿಂದ ನನ್ನ ಲಗ್ನದ ಆಶೆಯು ಕೈಗೂಡುವದೆಂದು ಕೇಳಿ ಈಗ ನನಗೆ ಒಳ್ಳೇ ಸಂತೋಷವಾಯಿತು ! ನನ್ನ ಸಂಸಾರವು ಇನ್ನು ಸುಗಮತೆ ಹೊಂದವದರಲ್ಲಿ ಸಂಶಯವಿಲ್ಲ ಇನ್ನು ಇದುವರೆಗೆ ಶ್ರಮವಹಿಸಿದಂತೆ ತೀವ್ರವೇ ಲಗ್ನ ಜರುಗುವ ಪ್ರಯತ್ನಮಾಡಿ ಲಗ್ನದಲ್ಲಿ ಓಡಾಡಿ ಕಾರ್ಯ ಪೂರ್ಣವಾಗುವಂತೆ ಮಾಡಿರಿ ಮುನಿಗಳೇ ಆಕಾಶರಾಜನು ಯಾವ ಮುಹೂರ್ತಕ್ಕೆ ಲಗ್ನಮಾಡಿಕೊಡುವನೆಂಬದನ್ನ ನೀವು ವಿಚಾರಿಸಲಿಲ್ಲವೇ ? ಇನ್ನಾದರೂ ಮತ್ತೊಮ್ಮೆ ಹೋಗಿ ಅದನ್ನಿಷ್ಟು ತಿಳಿದುಕೊಂಡು ಬರ್ರಿ " ಎಂದು ಶ್ರೀನಿವಾಸನು ನುಡಿಯಲು ಶುಕಮುನಿಯು ಆಕಾಶರಾಜನ ಪತ್ರವನ್ನು ಆತನ ಕೈಗೆ ನೀಡಿದನು. ಶ್ರೀನಿವಾಸ ! ಮುಹೂರ್ತವನ್ನೂ ಕೂಡ ನಿಶ್ಚಿತಗೊಳಿಸಿ ಆ ರಾಜನು ಈ ಪತ್ರದಲ್ಲಿ ಬರೆದಿರುವನು. ನೋಡಿಕೊಳ್ಳಿರಿ ನಮಗೆ ನಿನ್ನಿಂದಾದ ಈ ಸ್ವಾಗತ ಸಂಭ್ರಮದಲ್ಲಿ ನನ್ನ ಕಂಕುಳಲ್ಲಿದ್ದ ಈ ಪತ್ರವನ್ನು ನಿಮ್ಮ ಕೈಗೆ ಕೊಡಲು ಮರೆತುಬಿಟ್ಟೆನು. ಶ್ರೀನಿವಾಸ! ಮುಪ್ಪಿನಲ್ಲಿ ಮನುಷ್ಯನ ಚಿತ್ತವು ಹೇಗೆ ವಿಸ್ಮೃತಿಗೊಳ್ಳುವದೆಂಬುದನ್ನು ನನ್ನ ಈ ಸ್ಥಿತಿಯಿಂದ ಕಾಣಿರಿ. ಅದೇನೇ ಇರಲಿ ಈಗ ಈ ಪತ್ರವನ್ನು ಬಿಚ್ಚಿ ಓದಿಕೊಳ್ಳು. ಬಹುಶಃ ಅದರಲ್ಲಿ ಲಗ್ನದ ಮುಹೂರ್ತವನ್ನು ರಾಜನು ಕಾಣಿಸಿರಲಿಕ್ಕೆ ಬೇಕೆಂಬದು

ಅವನು ಆಡಿದ ಮಾತುಗಳಿಂದ ನನಗೆ ಕಂಡುಬರುತ್ತದೆ! ಎಂದು ಆ ಪತ್ರವನ್ನು ಆತನಿಗೆ ಸೂಚಿಸಿದನು. ಆ ಕೂಡಲೆ ಶ್ರೀನಿವಾಸನು ಆ ಪತ್ರವನ್ನು ಓದುವ ಕೂತೂಹಲವನ್ನು ನಟಿಸಿ ಸಮಗ್ರವಾಗಿ ಓದಿದನು. ಒಳ್ಳೇ ಸಂತೋಷವನ್ನು ತೋರ್ಪಡಿಸಿದನು

ಆಕಾಶರಾಜನು ತನಗೆ ಕಳಿಸಿದ ಲಗ್ನಪತ್ರಿಕೆಗೆ ಪ್ರತ್ಯುತ್ತರವಾಗಿ ಶ್ರೀನಿವಾಸನು ಪತ್ರಬರೆದು ಲಗ್ನಕ್ಕಾಗಿ ತನ್ನ ಪ್ರಕಟಿತವಾದ ಅನುಮತಿಯನ್ನು ತಿಳಿಸಿದನು. ಶ್ರೀನಿವಾಸನು ಬರೆದ ಉತ್ತರಕಾಗದದಲ್ಲಿಯ ಲೇಖನವು ಕೆಳಗಿನಂತಿದೆ:

ರಾಜಾಧಿರಾಜ ಆಕಾಶರಾಜರ ಸೇವೆ ಸನ್ನಿಧಿಗೆ:—ವೇಂಕಟಾಚಲವಾಸಿ ಶ್ರೀನಿವಾಸನು ಜನ್ಮದಾತೃವಿನ ಪೂಜ್ಯತೆಗೆ ನಿಮಗೆ ಮರ್ಯಾದೆಯನ್ನರ್ಪಿಸಿ ನಮಸ್ಕಾರಗಳಿಂದ ಪತ್ರ ಬರೆಯುವದೇನಂದರೆ—

ಶುಕಮುನಿಗಳ ಕೈಯಲ್ಲಿ ಕೊಟ್ಟು ನೀವು ಕಳುಹಿದ ಪತ್ರದ ಅಭಿಪ್ರಾಯವು ಪೂರ್ಣವಾಗಿ ಅವಗತವಾಯಿತು. ಅತಿ ಸಂತೋಷವೆನ್ನಿಸಿತು. ಹಾಗು ನಮ್ಮ ಬಕುಲಾವತಿಯವರ ಮುಖಾಂತರವೂ ಎಲ್ಲ ಸಂಗತಿಯು ತಿಳಿಯಿತು. ನೀವು ಬರೆದ ಪತ್ರದಲ್ಲಿಯ ಎಲ್ಲ ವಿಚಾರಗಳಿಗೆ ನನ್ನ ಹಾಗು ನನ್ನ ಪರವಾಗಿ ನನ್ನ ವಿವಾಹಕ್ಕಾಗಿ ಆತುರಪಡುವ ಶುಕ–ಬಕುಲಾವತಿಯವರು ಮೊದಲಾಗಿ ಎಲ್ಲರ ಒಪ್ಪಿಗೆಯಿದೆ ಎಂಬುದನ್ನು ಈ ಪತ್ರದಿಂದ ನಿಮಗೆ ತಿಳಿಸುವೆ. ದೇವ ಗುರುಗಳಿಂದ ನೀವು ನಿರ್ಣಯಿಸಿಕೊಂಡ ಆ ಮುಹೂರ್ತದಲ್ಲಿಯೇ ನಿಮ್ಮ ಪುತ್ರಿಯಳಾದ ಪದ್ಮಾವತಿಯನ್ನು ದೇವಲೋಕದ ಸುರರೆಲ್ಲರ ವಿದ್ಯಮಾನವಾಗಿ ಅಂಗೀಕರಿಸುವೆನು. ಇನ್ನು ಮೇಲೆ ಇನ್ನೊಂದು ವಿಚಾರಕ್ಕೆ ಆಸ್ಪದವಿಲ್ಲ. ನನ್ನ ಹಾಗು ಪದ್ಮಾವತಿಯ ಪಾಣಿಗ್ರಹಣ ಸಮಾರಂಭದಿಂದ ನಿಮ್ಮ ಪೂರ್ವೋತ್ತರ ವಂಶವು ಉದ್ಧರಣೆಯಾಗಲಿ ಹಾಗು ನಿಮಗೆ ಯಶಸ್ಸು ಪ್ರಾಪ್ತವಾಗಲಿ ಇವೇ ನನ್ನ ಬೇಡಿಕೆಗಳು ಹೀಗೇ ನನ್ನ ನಮಸ್ಕಾರಗಳು"

ಮೇಲಿನಂತೆ ಶ್ರೀನಿವಾಸನು ಆಕಾಶರಾಜನಿಗೆ ಉತ್ತರ ಬರೆದು ಶುಕ ಮುನಿಗಳೇ ನೀವು ನನ್ನ ವಿವಾಹದ ಕಾರ್ಯಕ್ಕೆ ಆರಂಭಿಸಿದಷ್ಟಕ್ಕೆ ಮಾತ್ರ ನಿಮ್ಮ ಕೆಲಸಮುಗಿಯಲಿಲ್ಲ. ನಾನು ಆಕಾಶರಾಜನಿಂದ ಕನ್ಯಾದಾನವನ್ನು ಸ್ವೀಕರಿಸಿ ಪದ್ಮಾವತಿಯನ್ನು ನಮ್ಮ ಗೃಹಪ್ರವೇಶ ಮಾಡಿಕೊಳ್ಳುವ ವರೆಗಿನ ಪ್ರತಿಯೊಂದು ಕೆಲಸಗಳಲ್ಲಿ ನಿಮ್ಮನ್ನು ಬಿಡಬಾರದಾಗಿದೆ. ಈಗ ನೀವು ಆಕಾಶರಾಜನಲ್ಲಿಗೆ ಈ ನನ್ನ ಪ್ರತ್ಯುತ್ತರದ ಪತ್ರವನ್ನು ತೆಗೆದುಕೊಂಡು

ಹೋಗಿರಿ. ಎಂದು ಶುಕಾಚಾರ್ಯರನ್ನು ಪರಾಮರಿಸಿ ಆಕಾಶರಾಜನ ನಾರಾಯಣಪುರಕ್ಕೆ ಕಳಿಸಿದನು.

ಶುಕಮುನಿಗಳು ಪತ್ರದ ಉತ್ತರ ತೆಗೆದುಕೊಂಡುಹೋದರು. ಬಕುಲಾವತಿಯೂ ಶ್ರೀನಿವಾಸನೂ ಒಳ್ಳೇ ತೃಪ್ತಿಕರವಾದ ಮನಸ್ಸಿನಿಂದ ಕುಳಿತುಕೊಂಡು ಮಾತು ನಡೆಯಿಸಿರುವರು. ಬಕುಲಾವತಿಯು ಕನ್ಯೆಯ ಘಟನೆಯ ಕುರಿತು ತಾನು ಹೊರಟು ಹೋದಂದಿನಿಂದ ತಿರುಗಿ ಬರುವವರೆಗಿನ ಎಲ್ಲ ಸಂಗತಿಗಳನ್ನು ಒಂದಕ್ಷರಬಿಡದೆ ಹೇಳಿದಳು. ಹಾಗು ಶ್ರೀನಿವಾಸ! ಯೋಗಾಯೋಗವು ಎಂಥ ವಿಚಿತ್ರವಿರುತ್ತದೆಂಬದನ್ನು ಕೇಳು ನಾನು ಅಲ್ಲಿಗೆ ಹೋಗುವ ಮೊದಲೇ ಧರ್ಮದೇವತೆ ಎಂಬ ಹೆಸರಿನ ಕೊರವಂಜಿಯು ರಾಜ ಮಂದಿರಕ್ಕೆ ಹೋಗಿ ಧರಣೀದೇವಿಯ ಮುಂದೆ ಪದ್ಮಾವತಿಪರಿಣಯದ ಮುಂದಿನ ಭವಿಷ್ಯವನ್ನು ಸೂಚಿಸಿದ್ದಳಂತೆ ಅಲ್ಲದ ಶ್ರೀನಿವಾಸನ ಎಲ್ಲ ಸಂಗತಿಯನ್ನೂ ನಾನು ಅಲ್ಲಿಗೆ ಬರುವಸೂಚನೆಯನ್ನೂ ಅವಳು ಸೂಚಿಸಿದ್ದಳಂತೆ ಆ ನರ–ನಾರಾಯಣಾಶ್ರಮದ ಧರ್ಮದೇವಿಯ ಭವಿಷ್ಯವಾಣಿಯಂತೆ ಎಲ್ಲ ಸಂಕೇತಗಳೂ ವರ್ತಿಸಿದವು ಅದರಿಂದಲೇ ಪದ್ಮಾವತಿಯನ್ನು ನಿನಗಾಗಿ ಕೊಡುವ ಸಂಕಲ್ಪವನ್ನು ಆ ರಾಜ–ರಾಣಿಯರು ಕೈಕೊಂಡರು. ಶ್ರೀನಿವಾಸ! ನಿನ್ನ ಸುದೈವದಿಂದಲೇ ಇವೆಲ್ಲಘಟನೆಗಳು ಜರುಗಿದವೆಂದುನನ್ನನಂಬುಗೆ ಆಯಿತು. ಇತ್ಯಾದಿ ಸಂಗತಿಗಳನ್ನು ಬಕುಲಾವತಿಯು ಆಪ್ತತೆಯಿಂದ ಹೇಳಿಕೊಳ್ಳಹತ್ತಿದಳು. ಶ್ರೀನಿವಾಸನು ಕೇವಲ ದಂಗುಬಡೆದವರಂತೆ ಕುಳಿತುಕೊಂಡು ಬಕುಲಾವತಿಯ ಮಾತುಗಳನ್ನೆಲ್ಲ ಕೇಳಹತ್ತಿದನು. ಪಾಪ! ಬಕುಲಾವತಿಗೆ ಆ ಕಪಟನಾಟಕ ಸೂತ್ರಧಾರಿ ಶ್ರೀನಿವಾಸನ ಅಘಟಿತ ಘಟನಾ ಸಾಮರ್ಥ್ಯವೂ ಮಾಯಾಲೀಲೆಯೂ ಹೇಗೆ ವಿದಿತವಾಗುವದು.? ಸಾಮಾನ್ಯರಿಗೆ ತಿಳಿಯುವದು ಶಕ್ಯವಿಲ್ಲ.

ಬಕುಲಾವತಿಯು ಶ್ರೀನಿವಾಸನ ಮುಂದೆ ಒಳ್ಳೆಉತ್ಸಾಹ ಬೀರಿ ಹೇಳುವ ಮಾತುಗಳನ್ನೆಲ್ಲ ಕೇಳಿ ಆತನು 'ತಾಯಿ! ನಿನ್ನ ಬಲವಾದ ಬಯಕೆಯಿಂದಲೇ ಪದ್ಮಾವತಿಯೊಡನೆ ನನ್ನ ಪರಿಣಯವು ನಿಶ್ಚಿತವಾಯಿತು.

ಎಂದು ಆಕೆಗೆ ಗೌರವವನ್ನಿಟ್ಟು ಮಾತಾಡಿ ಆಕೆಗೆ ಒಳ್ಳೆ ಹರುಷವನ್ನುಂಟುಮಾಡಿದನು.

---

# ೧೦ ನೆಯ ಅಧ್ಯಾಯ

ಶ್ರೀನಿವಾಸನ ಹಾಗೂ ಬಕುಲಾವತಿಯರ ಮಾತು-ಕತೆಗಳು ಆನಂದದ ಭರದಲ್ಲಿಯೇ ಸಾಗಿ ಮುಗಿಯುವ ಮೊದಲೇ ಆತನ ಮುಖಭಾವದಲ್ಲಿ ಒಮ್ಮೆಲೆ ಮಾರ್ಪಾಟಾಗಿ ಆತನ ಉದಾಸೀನತೆಯು ಬಕುಲಾವತಿಗೆ ಕಾಣಹತ್ತಿತು. ಮಗನ ಮನೋಭಿಪ್ರಾಯವು ಆಕೆಗೆ ಹೇಗೆ ಗೊತ್ತಾಗಬೇಕು? ಆದರೂ ಅವಳು— 'ಶ್ರೀನಿವಾಸ! ಇದುವರೆಗೆ ಆದುದು ಒಳಿತಾಯಿತಲ್ಲವೇ? ಎಂಬ ಪ್ರಶ್ನೆಯಿಂದ ಮುಗಿಯಲು ಬಂದ ಮಾತುಗಳನ್ನು ಮತ್ತೆ ಚಿಗುರೊಡಿಸಿದಳು. ಬಕುಲಾವತಿಯಾಡಿದ ನುಡಿಯನ್ನು ಕೇಳಿ ಕೂಡಲೆ ಶ್ರೀನಿವಾಸನು— 'ತಾಯಿ! ಆದುದೆಲ್ಲ ಒಳಿತೇ ಸರಿ! ಆದರೆ—!' ಎಂದುಸುರಿ ದೃಷ್ಟಿಯನ್ನು ನಿರ್ನಿಮಿತ್ತವಾಗಿ ಬೇರೊಂದು ನಿಟ್ಟಿಗೆ ಹೊರಳಿಸಿ ಮುಗ್ಧನಾದನು. ಆಗ ಬಕುಲಾವತಿಯು— 'ಆದರೆ? ಆದರೆಂದರೇನು? ಇನ್ನೂ ನಿನ್ನ ಮನಸ್ಸಿನಲ್ಲಿ ಉಳಿದ ಸಂದೇಹವೇನು?' ಎಂದು ಕೇಳಿದಳು. ಏನೋ ವಿಚಾರದಲ್ಲಿದ್ದವನಂತೆ ನಟಿಸುವ ಶ್ರೀನಿವಾಸನಿಂದ ಉತ್ತರ ಬರಲಿಲ್ಲ ಬಕುಲಾವತಿಯು ಮತ್ತೆ ಮತ್ತೆ ಆತನನ್ನು ಕೇಳಿದಳು. ಕೊನೆಗೆ ಆತನು ಆಕೆಯ ಕಡೆಗೆ ನಿರುತ್ಸಾಹ ದೃಷ್ಟಿಯನ್ನು ಚಲ್ಲಿ— 'ತಾಯಿ! ನಿನ್ನ ಬುದ್ಧಿಬಲದಿಂದ ನನ್ನ ವಿವಾಹಕ್ಕೆ ಆವಶ್ಯಕ ಪೂರ್ವಪೀಠಿಕೆಯನ್ನು ಮುಗಿಯಿಸಿದಿ. ಆದರೆ ಆ ಆಕಾಶರಾಜನ ಸಮೃದ್ಧವಾದ ಸಂಪತ್ತಿಗೆ ಹುತ್ತಿನಲ್ಲಿ ವಾಸವಾಗಿದ್ದ ನನ್ನ ದಾರಿದ್ರ್ಯವು ಸರಿಯಾಗುವದೇ? ಆತನ ರಾಜವೈಭವವೇನು? ಬಂಧು-ಬಳಗ ಆಪ್ತೇಷ್ಟವರ್ಗವೇನು? ಇದೆಲ್ಲದರ ವಿಚಾರವನ್ನು ಲಕ್ಷ್ಯಕ್ಕೆ ತಾರದೆ ಕೇವಲ ಕಾಮುಕ ವೃತ್ತಿಯ ಪಾಮರನಂತೆ ನಾನು ಪದ್ಮಾವತಿಯನ್ನು ಮೋಹಿಸಿದೆ. ಕೇವಲ ಮಗನ ಲಗ್ನದ ಸಡಗರವನ್ನು ಕಣ್ಣಾರೆಯುವಂತೆ ನೋಡಿ ಇಹಜನ್ಮ ನೀಗುವ ಹವ್ಯಾಸದಿಂದ ಆಕಾಶರಾಜನ ಹಾಗು ನನ್ನ ತಾರತಮ್ಯವನ್ನು ಮನಸ್ಸಿನಲ್ಲಿ ತಾರದೆ ನಾರಾಯಣಪುರಕ್ಕೆ ಹೋಗಿ ಆ ಕನ್ಯೆಯನ್ನು ನೀನು ಗೊತ್ತುಮಾಡಿಕೊಂಡುಬಂದೆ. ಅಜಗಜಾಂತರದಷ್ಟು ಸಾಂಪತ್ತಿಕ ಸ್ಥಿತಿಯಲ್ಲಿ ಭೇದವಿದ್ದ ನಮ್ಮ ಹಾಗು ರಾಜನ ಶರೀರಸಂಬಂಧ ಕೂಡುವದು ಶಕ್ಯವೇ ಇರಲಿಲ್ಲ. ನಿನ್ನ ಇಲ್ಲವೆ ಶುಕಮುನಿಯ ಯಾವದೇ ಒಂದು ಮೋಸದ

ಮಾತಿಗೆ ಆತನು ಬಲಿಬಿದ್ದು ತನ್ನ ಪ್ರೇಮದ ಪುತ್ಥಳಿಯಂತಿದ್ದ ಪದ್ಮಾವತಿಯನ್ನು ನನಗೆ ಲಗ್ನ ಮಾಡಿ ಕೊಡುವದಕ್ಕೆ ಒಪ್ಪಿರಬಹುದು. ಒಂದು ವೇಳೆ ಮೋಸವು ಬೈಲಿಗೆ ಬಂದರೆ ಇಲ್ಲವೆ ನನ್ನ ದಾರಿದ್ರ್ಯತನವು ಆ ರಾಜನಿಗೆ ತಿಳಿದು 'ಮರ್ಯಾದೆಗೆ ಸಲ್ಲದು' ಎಂಬ ಭಾವನೆಯು ಆತನಲ್ಲಿ ಹುಟ್ಟಿದರೆ ಮುಂದೆ ನನ್ನ ಸಂಸಾರವು ಸುಗಮವಾಗಿ ಸಾಗಲಿಕ್ಕಿಲ್ಲ. ಇದನ್ನೆಲ್ಲ ನಾವು ಮೊದಲೇ ನೋಡಿಕೊಳ್ಳತಕ್ಕದ್ದಿತ್ತು! ತಾಯಿ! ವಿವಾಹ, ವಿನೋದ, ವಿವಾದದಲ್ಲಿ ತೊಡಗಿರುವ ವ್ಯಕ್ತಿಗಳಲ್ಲಿ ಸಮತೆಯು ಇರಬೇಕಾಗುವದು. ಅಂದರೇನೇ ಅನ್ಯೋನ್ಯರಲ್ಲಿ ಸುಖವೂ ಸೊಗಸೂ ವರ್ಧಿಸುವವು.

ಈ ಎಲ್ಲ ವಿಚಾರಗಳಿಂದ ನೋಡಲು ಆ ರಾಜನೊಡನೆ ನಮ್ಮ ಶರೀರ ಸಂಬಂಧವು ಯೋಗ್ಯವಾಗಲಾರದು. ತಾಯಿ! ನನಗೆ ಬಂಧು–ಬಳಗವೆಲ್ಲಿ? ಆಪ್ತೇಷ್ಟವರ್ಗವೆಲ್ಲಿ? ಕಪರ್ದಿಕೆಯ ಬೆಲೆಯನ್ನು ಸಹ ಹೊಂದದ ನಮ್ಮ ನಮ್ಮ ಸಂಪತ್ತು ಅರ್ಥಾತ್ ಅಚಲವಾದ ದಾರಿದ್ರ್ಯತನವು. ಇಷ್ಟೆಲ್ಲ ಹೀನ ದೆಶೆಯಲ್ಲಿಯ ನನಗೆ ಲಗ್ನವು ದೂರತೋವಾಸ್ತವೇ ಸರಿ. ಅದರೊಳಗಂತೂ ಪದ್ಮಾವತಿಯೊಡನೆ ಪರಿಣಯ ಬಯಸುವದಂತೂ ಕನಸಿನ ಸುಖವನ್ನು ಬಯಸಿದಂತೆ ಎಂದು ಬೇರೆ ಹೇಳಬೇಕಾಗಿಲ್ಲ.", ಎಂದು ನುಡಿದು ಸುಮ್ಮನಾದನು. ಹಾಗು ಸಾಮಾನ್ಯರಂತೆ ಖಿನ್ನ ಮುಖ ಮಾಡಿಕೊಂಡು ಕುಳಿತನು

ಒಮ್ಮೆಲೇ ಶ್ರೀನಿವಾಸನು ಲಗ್ನದ ಬಗ್ಗೆ ನಿರಾಕರಿಸುವ ನುಡಿಗಳನ್ನು ಆಡಿದ್ದರಿಂದ ಬಕುಲಾವತಿಯು ದಿಕ್ಕುಗಾಣದಾದಳು. 'ನಾನು ಇದುವರೆಗೆ ವ್ಯರ್ಥಶ್ರಮಬಟ್ಟೆನಲ್ಲ! ಈತನು ವಿವಾಹದ ಸಡಗರವನ್ನು ನೋಡುವ ನನ್ನ ಅದೃಷ್ಟವು ಮತ್ತೂ ಅದೃಷ್ಟವೇ ಆಯಿತಲ್ಲ!' ಎಂದು ಮನಸ್ಸಿನಲ್ಲಿ ಮಿಡುಕ ಹತ್ತಿದಳು. ಆದರೆ ಅವಳು ಅಷ್ಟಕ್ಕೆ ಬಿಡದೆ ಶ್ರೀನಿವಾಸನಿಗೆ–'ಶ್ರೀನಿವಾಸ! ಹತ್ತು ಸುಳ್ಳುಹೇಳಿ ಕಲ್ಯಾಣ ಕಟ್ಟಿಕೊಳುವದಕ್ಕೆ ಅನುಮತಿಯಿದ್ದ ನೀನೇ ಈಗ ಸಹಸ್ರ ಸುಳ್ಳುನುಡಿದು ನಿನಗೇ ಜರಗುವ ಕಲ್ಯಾಣವನ್ನು ತೊರೆದು ಬಿಡುವಿಯಲ್ಲ! ಇದೇನು ನಿನ್ನ ರೀತಿ? ನಿನ್ನ ದರಿದ್ರತನವು ಕೇವಲ ನಿನ್ನ ಹೇಳಿಕೆಗೆ ಮಾತ್ರ ದಾರಿದ್ರ್ಯವನವನ್ನು ದಹಿಸುವ ದಾವಾಗ್ನಿಯಾಗಿರುವಿ. ಬಂಧು – ಬಾಂಧವರಿಲ್ಲೆಂದು ನುಡಿದುಕೊಳ್ಳುವಿ. ಕಮಲಜನು ನಿನ್ನ ಮಗನೂ ರುದ್ರನು ನಿನ್ನ ಮಮ್ಮಗನೂ ಆಗಿರುವರಲ್ಲವೆ? ಇವರು ಮೊದಲು ಮಾಡಿಕೊಂಡು ನಿನ್ನ ಬಳಗವಿದ್ದು ದಿಕ್ಕಿಲ್ಲವನಂತೆ ದುಃಖದ

ಮಾತುಗಳನ್ನೇಕೆ ಹಾಡುವಿ ? ನಿನಗೆ ವಿವಾಹ ಸಂಬಂಧವನ್ನು ಜೋಡಿಸುವ ಕುರಿತು ಬೃಹಸ್ಪತ್ಯಾಚಾರ್ಯರೂ ಶುಕಮುನಿಗಳೂ ತಮ್ಮ ಸತತ ಪ್ರಯತ್ನ ದಿಂದ ಆಕಾಶರಾಜನಿಗೆ ಉಪದೇಶಮಾಡಿ ನಿನಗೆ ಕನ್ಯೆಕೊಡಲು ಒಡಂಬಡಿಸಿ ನಿಶ್ಚಯ ಮಾಡಿದರೆಂದಮೇಲೆ ಆ ಋಷಿವರ್ಯರ ಆಶೆಯನ್ನು ನೀನು ಕಡೆಗಣಿಸಿ ಬಿಡುವಿಯಲ್ಲ ! ಇದೆಂಥ ನಿನ್ನ ನಡತೆ ? ಈ ನಿನ್ನ ಮನಸ್ಸಿನ ವಿಕಲ್ಪತೆಯನ್ನು ತೊಡೆದುಬಿಡು. ವಿವಾಹಕ್ಕೆ ಸಿದ್ಧನಾಗು. ಬ್ರಹ್ಮಾದಿ ಬಂಧು-ಬಾಂಧವರನ್ನೂ ಇಂದ್ರಾದಿ ಸುರವೃಂದವನ್ನೂ ಲಗ್ನಕ್ಕಾಗಿ ಆಮಂತ್ರಣಮಾಡು. ಈಗಿನದಾದ ಕಲಿಯುಗದಲ್ಲಿ ದೇವತೆಗಳಿಗೆ ಭೂಲೋಕ ಸಂಚಾರವು ದುರ್ಲಭವಾದುದ ರಿಂದ ನಿನ್ನಲಗ್ನದ ನಿಮಿತ್ತದಿಂದಾದರೂ ಇಲ್ಲಿಗೆ ಅವರೆಲ್ಲ ಬರಲಿ. ಆಕಾಶ ರಾಜನಿಗೆ ಒಂದುವೇಳೆ ' ಶ್ರೀನಿವಾಸನು ಬಂಧು-ಬಳಗಗಳ ದಿಕ್ಕಿಲ್ಲದವನು ' ಎಂದು ಸಂದೇಹಉಂಟಾಗಿದ್ದರೆ ಅವರನ್ನೆಲ್ಲ ಕಾಣಲಿ, ನಿನ್ನ ಐಶ್ವರ್ಯವನ್ನು ನೋಡಲಿ. ಇದೆಲ್ಲ ಮಾಡುವದನ್ನುಬಿಟ್ಟು ಸಣ್ಣಹುಡುಗನಂತೆ ' ನಾನು ಲಗ್ನ ವೊಲ್ಲೆ ' ಎಂದು ನುಡಿಯುವ ನಿನಗೆ ಬುದ್ಧಿಯಿಲ್ಲವೆನ್ನಬೇಕೆ ? ಹಾಗೆಂದಿಗೂ ತಿಳಿಯಕೂಡದು. " ಎಂದು ಗಂಭೀರ ಮುದ್ರೆಯಿಂದ ನುಡಿದಳು. ಮತ್ತು ' ಶ್ರೀನಿವಾಸ ! ! ಇದೇ ವೈಶಾಖ ಶುದ್ಧ ದಶಮಿ ಮುಹೂರ್ತವಿದೆ ಎಂದಮೇಲೆ ಕಾಲಹರಣವು ಇನ್ನು ಆಗಕೂಡದು. ನಾಮಾನು-ಸಾಹಿತ್ಯಗಳನ್ನೆಲ್ಲ ಸಿದ್ಧ ಪಡಿಸಿಕೊಳ್ಳಬೇಕಾಗಿದೆ. ತೀವ್ರವೇ ಎಲ್ಲರನ್ನು ಬರಮಾಡಿಕೊಳ್ಳಬೇಕಾಗಿದೆ." ಎಂದು ಹೇಳಿದಳು.

ಬಕುಲಾವತಿಯ ಬಯಕೆಯನ್ನೂ ಆಕೆಯು ತನ್ನ ಮೇಲೆ ಕೇವಲ ಸತ್ತೆ ಯನ್ನು ಉಪಯೋಗಿಸಿ ನುಡಿದ ಮಾತುಗಳನ್ನೂ ತಿಳಿದು ಶ್ರೀನಿವಾಸನು— ' ತಾಯಿ ! ನಿನ್ನ ಅಪ್ಪಣೆ ನನಗೆ ಮಾನ್ಯವದೆ. ಹಾಗು ನಿನ್ನ ಆಶೆಗೆ ನಾನು ಅಡ್ಡಬರಲಾರೆ ' ಎಂದು ನುಡಿದು ಕೂಡಲೆ ಆತನು ಶೇಷ—ಗರುಡರನ್ನು ಸ್ಮರಿಸಿದನು. ಶ್ರೀನಿವಾಸನ ಕಡೆಗೆ ಅವರು ಆ ಕೂಡಲೆ ಬಂದು ಆತನ ಎದುರಿನಲ್ಲಿ ನಿಂತರು. ಆಗ ಶ್ರೀನಿವಾಸನು ತಡಮಾಡದೆ ಬ್ರಹ್ಮ ಹಾಗು ರುದ್ರರಿಗೊಂದು ಪತ್ರ ಬರೆದನು. ಬ್ರಹ್ಮನಿಗೆ ತಲಪುವ ಪತ್ರವನ್ನು ಗರುಡನ ಕೈಗೆ ಕೊಟ್ಟು ' ಇದನ್ನು ನೀನು ನೇರವಾಗಿ ಬ್ರಹ್ಮನಿಗೇ ಮುಟ್ಟಿಸು ' ಎಂದು ಹೇಳಿ ಕೊಟ್ಟನು. ಕೈಲಾಸಗಿರಿಯಲ್ಲಿದ್ದ ರುದ್ರನಿಗೆ ಶೇಷನ ಮುಖಾಂತರ

ಪತ್ರ ಕಳಿಸಿದನು. ಗರುಡ—ಶೇಷರಿಬ್ಬರೂ ಶ್ರೀನಿವಾಸನಿಂದ ಅಪ್ಪಣೆ ಹೊಂದಿ ಪತ್ರ ಮುಟ್ಟಿಸಲು ಆಕಾಶಮಾರ್ಗದಿಂದ ಹೋದರು.

ಗರುಡನು ಸತ್ಯಲೋಕಕ್ಕೆ ಬಂದ. ಬ್ರಹ್ಮನನ್ನು ಕಂಡ. ಪತ್ರವನ್ನು ಆತನ ಕೈಗೆ ನೀಡಿದ. ಬಹುದಿನಗಳ ತರುವಾಯ ತನಗೆ ಬಂದ ತಂದೆಯ ಪತ್ರವನ್ನು ಪಿತಾಮಹ ಬ್ರಹ್ಮನು ತನ್ನ ನಾಲ್ಕೂ ಶಿರಸ್ಸುಗಳಿಂದ ವಂದಿಸಿ ಅದನ್ನು ಬಿಚ್ಚಿ ಅಲ್ಲಿಯೇ ಇದ್ದ ವಾಯುವಿನಿಂದ ಓದಿಸಿದ, ಅದರಲ್ಲಿ ಬರೆದ ಸಂಗತಿಯನ್ನೆಲ್ಲ ಅರಿತುಕೊಂಡನು. ಶ್ರೀನಿವಾಸನು ಚತುರ್ಮುಖ ಬ್ರಹ್ಮನಿಗೆ ಬರೆದ ಪತ್ರವು. "ಚಿರಂಜೀವ ಚತುರ್ಮುಖನಿಗೆ:— ವೇಂಕಟಗಿರಿವಾಸನ ಶುಭಪ್ರದಾಯಕವಾದ ಅನೇಕ ಆಶೀರ್ವಾದಗಳು. ನಾರಾಯಣಪುರದ ಆಕಾಶರಾಜನ ಪುತ್ರಿ. ಪದ್ಮಾವತಿಯನ್ನು ಆತನಿಂದ ನಾನು ಕನ್ಯಾದಾನವಾಗಿ ಅಂಗೀಕಾರಮಾಡಿ ಕೊಳ್ಳುವೆನು. ಆದಕ್ಕಾಗಿ ಜರುಗುವ ಮಂಗಲಮಹೋತ್ಸವದ ನಿಮಿತ್ತ ದಿಂದೆ ನೀನು ನಿನ್ನ ಪುತ್ರಲೋಕಪಾಲಕ, ಅಸುರನಾರಿಯರು, ಯಕ್ಷ—ಗಂಧರ್ವ—ಸರ್ಪಾದಿಗಳಿಗೆಲ್ಲ ಆಮಂತ್ರಣವನ್ನಿತ್ತು. ಅವರನ್ನು ಅವಶ್ಯ ವಾಗಿ ಸಂಗಡ ಕರೆದುಕೊಂಡು ಬರಬೇಕು. ಹಾಗು ವಿವಾಹಕಾರ್ಯದ ಆರಂಭ ವಾಗುವಂತೆ ಮಾಡಬೇಕು ಇತಿ ಆಶಿಷ: " ಎಂಬ ಬರೆಹವುಳ್ಳದಾಗಿತ್ತು.

ಪತ್ರದ ಪ್ರಕಾರ ಬ್ರಹ್ಮನು ತನ್ನ ಸತ್ಯಲೋಕದ ದ್ವಾರಪಾಲಕರಿಂದ ಭೂಲೋಕಕ್ಕೆ ಹೋಗಲು ಸೂಚಿಸುವ ಭೇರಿ–ದುಂದುಭಿಗಳನ್ನು ಮೊಳಗಿಸಿ ದನು ಸೇನಾನಾಯಕನ ಪ್ರಥಮಾಗಮನವಾಯಿತು. ಬ್ರಹ್ಮನು ಅವನಿಗೆ– 'ನಾವೀಗ ಎಲ್ಲರೂ ಭೂಲೋಕದಲ್ಲಿಯ ವೇಂಕಟಗಿರಿಗೆ ಶ್ರೀನಿವಾಸ ಕಲ್ಯಾಣ ಕ್ಕಾಗಿ ಹೊರಡಬೇಕಾಗಿದೆ ನಿನ್ನ ಚತುರಂಗ ಬಲವೆಲ್ಲ ಸನ್ನದ್ಧರಾಗಿ ಹೊರ ಡಲಿ, ಅಷ್ಟದಿಕ್ಪಾಲಕರನ್ನೂ ಅಷ್ಟವಸುಗಳನ್ನೂ ಕರೆಯಿಸು. ಭೂಲೋಕ ದಲ್ಲಿ ಜರುಗುವ ಆ ಕಲ್ಯಾಣದ ಸೊಬಗನ್ನು ಎಲ್ಲರೂ ನೋಡಲಿ.' ಎಂದು ಆಜ್ಞೆಯನ್ನಿತ್ತನು.

ಇದಲ್ಲದೆ ತನ್ನ ಸತಿಯರಾದ ಸಾವಿತ್ರಿ ಗಾಯತ್ರಿ, ಸರಸ್ವತಿಯರಿಗೆ ಸಾಲಂ ಕೃತರಾಗಿ ಹೊರಡಲು ಸೂಚಿಸಿದನು. ತಂದೆಯ ಮದುವೆ ಎಂದಮೇಲೆ ಕೇಳು ವದೇನು? ಮಗನ ಉತ್ಸಾಹಕ್ಕೆ ಎಣೆಯಿಲ್ಲದಾಯಿತು. ತಾನೂ ಶೃಂಗಾರ

ಪೂರ್ಣನಾಗಲು ದಿವ್ಯತರ ವಸ್ತ್ರಾಭರಣಗಳನ್ನು ತೊಟ್ಟನು. ತನಗಿರುವ ನಾಲ್ಕೂ ಶಿರಸ್ಸುಗಳನ್ನು ಕ್ರಮವಾಗಿ ಒಂದೊಂದನ್ನೆ ಬೇರೆ ಬೇರೆ ಶಿರೋಭೂಷಗಳಿಂದ ಅಲಂಕರಿಸಿದನು. ಆವನ ಕೈಯಲ್ಲಿಯ ಬಂಗಾರದಕಡೆ–ತೋಡೆಗಳೂ, ಕಿವಿಗಳಲ್ಲಿಯ ಉತ್ತಮ ರತ್ನಗಳಿಂದ ಕೆತ್ತಿದ ಮಕರ ಕುಂಡಲಗಳೂ ನವರತ್ನ ನಿರ್ಮಿತ ಕವಚವೂ, ಮುತ್ತುಗಳನ್ನು ಪೋಣಿಸಿ ಮಾಡಿದ ಉಡುದಾರವೂ ಆತನಲ್ಲಿ ಎಂದಿಲ್ಲದ ಚೆಲುವಿಕೆಯನ್ನು ಅಂದು ಉಂಟು ಮಾಡಿದವು ಇಷ್ಟೆಲ್ಲ ಸಡಗರದೊಡನೆ ಆ ಹಂಸವಾಹನ ಬ್ರಹ್ಮನು ತನ್ನ ಪತ್ನಿಯರು ಮೊದಲಾಗಿ ಎಲ್ಲ ಜಂಜಡದೊಂದಿಗೆ ವಿಚಿತ್ರ ವಿಮಾನದಲ್ಲಿ ಕುಳಿತುಕೊಂಡು ವೇಂಕಟಾಚಲಕ್ಕೆ ಹೊರಟನು.

ಬ್ರಹ್ಮನು ತನ್ನ ತಂದೆಯ ವಿವಾಹಕ್ಕೆ ಸಂಭ್ರಮ ವೈಭವಗಳಿಂದ ನಡೆದನು. ಆಗ ಆತನ ಸೈನ್ಯದ ಸೊಬಗು ಅವರ್ಣನೀಯವಾದದ್ದಿತ್ತು. ಆನೆ, ಕುದುರೆ, ರಥ ಮತ್ತು ಕಾಲ್ದಳಗಳು ತರತರದ ಅಲಂಕಾರಗಳಿಂದ ಶೋಭಾಯಮಾನವಾಗಿದ್ದವು. ಗಜಬಲದ ಪ್ರತಿಯೊಂದು ಆನೆಯು ಹೇಮಘಂಟಿಕೆ, ಶ್ವೇತಚಾಮರಗಳಿಂದಲೂ, ಅಶ್ವಬಲವೆಲ್ಲ ಆರೋಪಿತ ವೀರರ ಶೃಂಗಾರದಿಂದಲೂ ಮೆರೆಯುತ್ತಿದ್ದವು ರಥಗಳ ಚಕ್ರಧ್ವನಿಗಳ ಚೀತ್ಕಾರವೂ ಕಾಲಾಳುಗಳು ಧರಿಸಿರುವ ಶಸ್ತ್ರಾಯುಧಗಳ ಠಣತ್ಕಾರವೂ ಗಮನಮಾರ್ಗದಲ್ಲಿಯ ಜನಗಳ ಕಿವಿಗಳನ್ನು ಗಡಚಿಕ್ಕಿ ಕಿವುಡಾಗುವಂತೆ ಮಾಡುತ್ತಿದ್ದವು. ಇಂಥ ಚತುರ್ಬಲದ ಸೊಬಗನ್ನು ಬ್ರಹ್ಮನು ತನ್ನ ಚತುರ್ಮುಖಗಳ ಚಕ್ಷುಗಳಿಂದ ನಿರೀಕ್ಷಿಸುತ್ತ ಭೂಲೋಕಕ್ಕೆ ಹೊರಟನು. ಆತನ ನಾಲ್ಕು ಶಿರಸ್ಸುಗಳನ್ನು ತನ್ನ ನೆರಳಿನಿಂದ ಮುಚ್ಚಿ ಶೋಭಿಸುವ ಶ್ವೇತ ಛತ್ರವು ಅತಿ–ಎತ್ತರವಾದ ಹೇಮದಂಡಯುಕ್ತವಾಗಿ ಬೆಳಗುತ್ತಿದ್ದಿತು. ಮೂರು ಯೋಜನಗಳವರೆಗೆ ಪಸರಿಸಿದ ಆ ಛತ್ರವನ್ನು ಲಕ್ಷಾಂತರ ಜನರು ಎತ್ತಿ ಹಿಡಿದಿದ್ದರು. ಆ ಸೈನ್ಯದಲ್ಲಿ ಮೊಳಗುವ ನಾವಿರಾರು ನಗಾರೆ–ನೌಬತ್ತು ಮೊದಲಾದ ಚರ್ಮವಾದ್ಯಗಳೂ, ಕಹಳೆ— ತುತ್ತೂರಿಮೊದಲಾದ ಲಕ್ಷಾನುಲಕ್ಷ ಉಚ್ಛಸ್ವಿತ ಓಷ್ಠ್ಯವಾದ್ಯಗಳೂ ಹಾಗು ಅಗಣಿತವಾದ ತಂತುವಾದ್ಯ–ಶೃಂಗವಾದ್ಯಗಳೂ ಅವವುಗಳ ನಿನಾದಗಳಿಂದ ಇಡೀ ಭೂಲೋಕದ ಜನವೆಲ್ಲ ದಂಗಾಗಿ ಹೋಯಿತು. ಇನ್ನು ಆ ಬ್ರಹ್ಮನ ಮುಂಭಾಗದಲ್ಲಿ ನಡೆದ ಗಂಧರ್ವರ ಗಾಯ

ನವೂ, ನಟ ನರ್ತಕಿಯರ ನೃತ್ಯವೂ ಅಪ್ಸರೆಯರ ಭಾವವಿನ್ಯಾಸವೂ ಒಳ್ಳೆ ಮೋಹಕವಾಗಿ ನಡೆದಿದ್ದವು. ಅವರ ಮುಂದೆ ವಂದಿ-ಮಾಗಧ-ಬಟ್ಟಂಗಿಗಳ ಸ್ತುತಿಪಾಠವೂ ಋಷಿ ಮುನಿಗಳ ವೇದ ಪಠನವೂ ನಡೆಯುತ್ತಿರಲು ಆ-ಆ-ಸೂಬಗುಗಳನ್ನು ನೋಡುತ್ತ ಬ್ರಹ್ಮನು ಭೂಲೋಕಕ್ಕೆ ಹೊರಟನು. ಅವನು ಬರುವ ಮಾರ್ಗದಲ್ಲಿಯ ಸತ್ಯ-ತಪ ಮೊದಲಾದ ಸಪ್ತಲೋಕ ನಿವಾಸಿಗಳು ಅವನ ಭಾಗ್ಯವನ್ನು ಕಣ್ದಣಿವಂತೆ ನೋಡ ಹತ್ತಿದರು. ಪಿತಾಮಹನಾದ ಆ ಬ್ರಹ್ಮನು ಬರುವಕಾಲಕ್ಕೆ ಆತನು ತನ್ನ ತೇಜ-ಐಶ್ವರ್ಯಗಳಿಂದಲೂ ಸ್ವರೂಪದಿಂದಲೂ ಸಾಕ್ಷಾತ್ ನಾರಾಯಣನೇ ಹೊರಟು-ಬಂದಿರಬಹುದೆಂದು ಎಷ್ಟೋ ಋಷಿಮೊದಲಾದವರು ಭಾವಿಸಿ, ಅಲ್ಲಿಗೆ ಓಡಿಬಂದು ನೋಡಿದರು. ಆದರೆ ಆ ಶೋಭವಂತನು ನಾರಾಯಣನಾಗಿರದೆ ಸಮಸ್ತ ಭೂಷಣಗಳಿಂದ ಕೂಡಿರುವ ಅವನಮಗ ಬ್ರಹ್ಮನೆಂಬದನ್ನು ಅರಿತರು. ಹಾಗು ಆತನು ತನ್ನ ತಂದೆಯ ವಿವಾಹಕ್ಕಾಗಿ ಭೂಲೋಕದಲ್ಲಿಯ ಶೇಷಾಚಲಕ್ಕೆ ತನ್ನ ವೈಭವದಿಂದ ಹೋಗುವನೆಂಬದನ್ನೂ ಆತನ ಅನುಚರರಿಂದ ಕೇಳಿಕೊಂಡನು. ಆ ಋಷಿ ಮೊದಲಾದವರೆಲ್ಲ ಆ ಬ್ರಹ್ಮನ ಪರಿವಾರದೊಡನೆ ತಾವೂ ಶ್ರೀನಿವಾಸನ ಕಲ್ಯಾಣಮಹೋತ್ಸವಕ್ಕಾಗಿ ಹೊರಟು ನಡೆದರು. ಈ ಪ್ರಕಾರ ಚತುರ್ಮುಖ ಬ್ರಹ್ಮನು ತನ್ನ ಹಾಗು ಆಗಂತುಕ ಪರಿವಾರದೊಡನೆ ವೈಭವದಿಂದ ಭೂಲೋಕಕ್ಕೆ ಹೊರಟು ಬಂದು ವೇಂಕಟಾಚಲವನ್ನು ಸಮೀಪಿಸಿದನು ಬ್ರಹ್ಮನನ್ನು ಕರೆಯಲು ಹೋಗಿದ್ದ ಗರುಡನು ಅವರನ್ನೆಲ್ಲ ಹಿಂದುಳಿಸಿ ತಾನೊಬ್ಬನೇ ಮುಂದೆ ಶ್ರೀನಿವಾಸನ ಹತ್ತಿರ ಬಂದು—'ಬ್ರಹ್ಮನು ತನ್ನ ಸಮಸ್ತ ಪರಿವಾರದೊಡನೆ ಇದೀಗ ಬರಲಿದುವನು. ಸದ್ಯ ಆತನು ಜಾಹ್ನವೀ ತೀರವನ್ನು ದಾಟಿ ಬಂದಿರಬಹುದು. ಇನ್ನು ಕೆಲ ಹೊತ್ತಿನಲ್ಲಿಯೇ ಗೋದಾವರಿ-ಕೃಷ್ಣೆಗಳನ್ನು ದಾಟಿ ಶ್ರೀಶೈಲಗಿರಿಯನ್ನು ಬಳಿಸಿ-ಅಹೋಬಲ ಪರ್ವತಕ್ಕೆ ಬರುವನು. ಈ ಆನಂದದ ವಾರ್ತೆಯನ್ನು ಮುಂದಾಗಿ ತಿಳಿಸಲು ನಾನು ಮುಂದೆ ಬಂದಿರುವೆನು' ಎಂದು ಹೇಳಿದನು

ಮಗನು ತನ್ನ ಮದುವೆಗಾಗಿ ಸಂಭ್ರಮದಿಂದ ಬರುತ್ತಿರುವದನ್ನು ಕೇಳಿ ಶ್ರೀನಿವಾಸನಿಗೆ ಹಿಡಿಸಲಾರದಷ್ಟು ಆನಂದವಾಯಿತು. ತನ್ನ ಮಗನನ್ನು ಯಾವಾಗ ಕಾಣುವೆನೋ ಎಂಬ ತವಕವು ಆತನಲ್ಲಿ ಹಿರಿದಾಯಿತು. ಕೂಡಲೆ ಅವನು ಬಕುಲಾವತಿಯ ಅಪ್ಪಣೆಯಿಂದ ಬ್ರಹ್ಮನು ಬರುವ ಮಾರ್ಗದಿಂದ

ಗರುಡನನ್ನೇರಿ ಅವನಿಗೆ ಎದುರಾಗಿ ಹೋದನು. ಅವರಿಬ್ಬರ ಭೆಟ್ಟಿಯು ತುಂಬುರ ತೀರ್ಥದಲ್ಲಾಯಿತು ಇಬ್ಬರೂ ಒಬ್ಬರನ್ನೊಬ್ಬರು ಅಪ್ಪಿಕೊಂಡರು. ಅನ್ಯೋನ್ಯ ದರ್ಶನದಿಂದ ಅವರವರ ಕಣ್ಣುಗಳಲ್ಲಿ ಬಾಷ್ಪವು ಪ್ರವಾಹಗಟ್ಟಿತು. ಕಡೆಗೆ ಅವರಿಬ್ಬರು ತಮ್ಮ ತಮ್ಮ ಮನಸ್ಸಿನಲ್ಲಿಯ ದುಗುಡುಗಳನ್ನು ತೊರೆದು ಕುಶಲ ಪ್ರಶ್ನೆಗಳನ್ನಾಡಿ ಸಂತುಷ್ಟ ಚಿತ್ತರಾದರು. ಈ ಪ್ರಕಾರವಾಗಿ ಆ ಶ್ರೀನಿವಾಸ-ಬ್ರಹ್ಮರು ಆಕಾಲದಲ್ಲಿ ಕೇವಲ ತಮ್ಮ ಲೀಲೆಯಿಂದ ಜಗತ್ತಿಗೆ ತಂದೆ-ಮಕ್ಕಳ ಹೃದಯಸಂತಿರಬೇಕೆಂಬ ಪಾಠವನ್ನು ತೋರಿಸಿದರು. ಅವರಿಬ್ಬರ ಸಂದರ್ಶನದ ಪ್ರಸಂಗವನ್ನು ದೇವತೆಗಳು ಕಣ್ಮುಟ್ಟಕಂಡು ಬಾಯ್ತುಂಬ ಅವರನ್ನು ಹೊಗಳಿದರು ಮತ್ತು ಆ ದೇವತೆಗಳು ಯಾವಲೋಕದಲ್ಲಿಯೂ ಶ್ರೀನಿವಾಸನಂಥ ತಂದೆಯಿಲ್ಲ, ಬ್ರಹ್ಮನಂಥ ಮಗನಿಲ್ಲ. ಎಂಬದಾಗಿ ಒಂದೇ ದನಿಯಿಂದ ಸಾರಿನುಡಿದರು

ಬಳಿಕ ಶ್ರೀನಿವಾಸನು ಮಗನಿಂದೊಡಗೂಡಿ ತನ್ನ ವಾಸಸ್ಥಳವಾದ ಶೇಷಾಚಲದ ವಲ್ಮೀಕಕ್ಕೆ ಬಂದನು ಬ್ರಹ್ಮನು ಬಕುಲಾವತಿಯನ್ನು ನಮಿಸಿ ಅವಳಿಂದ ಆಶೀರ್ವಾದ ಪಡೆದು ತನ್ನ ಧನ್ಯತೆಯನ್ನು ಹೊಗಳಿಕೊಂಡನು. ಬಳಿಕ ಬ್ರಹ್ಮನು ತನ್ನ ತಂದೆಯನ್ನು ಕುರಿತು— 'ಸ್ವಾಮಿ ಶ್ರೀನಿವಾಸ! ಬಹುದಿನಗಳಿಂದ ನಿನ್ನ ಕ್ಷೇಮವೃತ್ತವನ್ನು ತಿಳಿಯದೆ ನಾನು ಚಿಂತೆಯಿಂದ ಬಳಲಿ ಬೆಂಡಾಗಿದ್ದೆ ಇಂದು ನಿನ್ನ ದರ್ಶನವು ಸಕಲತೀರ್ಥಗಳ ದರ್ಶನದಿಂದಾದ ಪುಣ್ಯಕ್ಕಿಂತಲೂ ಪುಣ್ಯಕರವೆನ್ನಿಸಿ ಒಳ್ಳೆ ಆನಂದವಾಯಿತು! ಆದರೂ ನೀನು ವೈಕುಂಠದಿಂದ ಅಂತರಿಸಿದಂದಿನಿಂದ ಇದುವರೆಗಿನ ನಿನ್ನ ಕುಶಲವಾರ್ತೆಯನ್ನು ನಿನ್ನ ಮುಖದಿಂದ ತಿಳಿದು ಹೆಚ್ಚು ಸಂತೋಷಪಡಲು ಹಾರೈಸುವೆನು. ಅದನ್ನಷ್ಟು ನನಗೆ ತಿಳಿಸುವಿಯೆಂದೂ ನಂಬಿರುವೆನು. ಎಂದು ನುಡಿದನು.

ಮಗನು ಒಳ್ಳೆ ಕಳಕಳಿಯಿಂದೆ ತನ್ನ ಸಮಾಚಾರ ತಿಳಿಯಲು ಆತುರನಾದದ್ದನ್ನು ತಿಳಿದು ಶ್ರೀನಿವಾಸನು ಸಂತೋಷ ಚಿತ್ತನಾದನು ಹಾಗೂ ತಾನು ಭೃಗುಮುನಿ ಪಾದದಿಂದ ತಾಡನ ಹೊಂದಿದ ಪ್ರಸಂಗದಿಂದ ಲಕ್ಷ್ಮೀದೇವಿಯು ಭೂಲೋಕದಲ್ಲಿ ಬಂದು ಕರವೀರವುರಕ್ಕೆ ಸೇರಿದ್ದು ಮೊದಲಾಗಿ ತನಗೆ ಆಕಾಶರಾಜನ ಪುತ್ರಿ ಪದ್ಮಾವತಿಯ ನಿಶ್ಚಯವಾಗುವವರೆಗಿನ ಸಮಗ್ರ ಸಂಗತಿಯನ್ನು ಒಂದಕ್ಷರ ಸಹ ಬಿಡದೆ ಹೇಳಿದನು. ಶ್ರೀನಿವಾಸನು

ಹೇಳುವ ಎಲ್ಲ ಸಂಗತಿಗಳನ್ನು ಬ್ರಹ್ಮನು ತನ್ನ ಎಂಟೂ ಕಿವಿಗಳನ್ನೆಲ್ಲ ತೆರೆದಿಟ್ಟು ಕೇಳಹತ್ತಿದನು. ನಡನಡುವೆ ತಂದೆಯ ಮುಖವನ್ನು ತನ್ನ ಎಂಟೂ ಕಣ್ಣುಗಳಿಂದ ಕಂಡು ನಲಿಯುವನು. ಆತನ ತಲೆಗಾದ ಕೊಡಲಿಯ ಗಾಯ ಸಿಡಿಸ್ಸು ತನ್ನ ನಾಲ್ಕೂ ಬಾಯಿಗಳಿಂದ ಹಾ ಹಾ ಹಾ ಹಾ ಎಂದು ದುಃಖೋದ್ಗಾರ ತೆಗೆದನು. ಪದ್ಮಾವತಿಯನ್ನು ವರಿಸುವ ನಿಶ್ಚಯ ಮಾಡಿರುವೆನೆಂದು ಶ್ರೀನಿವಾಸನು ನುಡಿದಕೂಡಲೆ ಆ ಚತುರ್ಮುಖನು ತನ್ನ ಎಲ್ಲ ಮುಖಗಳಿಂದ ಒಳ್ಳೇ ಸಂತೋಷಭರಿತನಾಗಿ ಹಿ! ಹಿ! ಹಿ! ಹಿ! ಎಂದು ನಕ್ಕು ನಲಿದನು.

ತಂದೆ ಮಗನ ಮಾತುಗಳು ಇನ್ನೂ ಮುಗಿದಿರಲೇ ಇಲ್ಲ ಅಷ್ಟರಲ್ಲಿ ವಾಯುವೂ ತನ್ನ ಹೆಂಡತಿ ಭಾರತಿಯೊಡನೆ ತನ್ನ ದುಂದುಭಿವಾದ್ಯದ ಧ್ವನಿಗೈಯುತ್ತ ಚಿಗರೆಯನ್ನೇರಿಕೊಂಡು ಶ್ರೀನಿವಾಸನ ಮದುವೆಗಾಗಿ ಅಲ್ಲಿಗೆ ಬಂದನು. ಶ್ರೀನಿವಾಸನಿಗೆ ವಂದಿಸಿದನು. ಆ ತರುವಾಯ ಶಿವ-ಪಾರ್ವತಿಯರು ನಂದಿಯನ್ನೇರಿ ತಮ್ಮ ಪ್ರಮಥರೊಂದಿಗೆ ಬಂದರು. ಕುಬೇರನು ತನ್ನ ಪರಿವಾರರೊಂದಿಗೆ ನರವಾಹನನಾಗಿ ಬಂದನು. ಅಗ್ನಿಯು ಟಗರನ್ನೇರಿ, ಯಮನು ಕೋಣವನ್ನು ಹತ್ತಿ ಶ್ರೀನಿವಾಸನ ಲಗ್ನಕ್ಕಾಗಿ ಆಮಂತ್ರಿತರಾಗಿ ಬಂದರು. ಇಂದ್ರ, ವರುಣ, ಚಂದ್ರ, ಸೂರ್ಯ ಇವರೆಲ್ಲರು ತಮ್ಮ ತಮ್ಮ ಜನರೊಡನೆ ಬಂದರು. ಸಪ್ತರ್ಷಿ ಮೊದಲಾಗಿ ಎಲ್ಲ ಋಷಿಗಳು ತಮ್ಮ ತಮ್ಮ ಶಿಷ್ಯರಿಂದ ಕೂಡಿಕೊಂಡು ಬಂದರು. ಸುರಲೋಕದ ಗಂಧರ್ವರೂ ಅಪ್ಸರೆಯರೂ ಸಿದ್ಧರೂ ಚಾರಣರೂ ಬಂದರು. ಅನಂತಾದಿ ಉರಗಗಳೆಲ್ಲರ ಆಗಮನವಾಯಿತು. ಋಷಿಗಳೆಲ್ಲ ಬಂದರು. ಬಾರದ ರಾಜರಿಲ್ಲ, ಶ್ರೀನಿವಾಸನ ಭಕ್ತರಂತೂ ಇದ್ದವರೇ ಸರಿ. ಒಟ್ಟಿನಮೇಲೆ ಮೇಲೆ ಹೇಳಿದ ಎಲ್ಲರು ಬಂದರು. ಎಲ್ಲರಿಗೂ ಶ್ರೀನಿವಾಸನು ತಕ್ಕವಾದ ಉಪಚಾರಕ್ಕಾಗಿ ತಾನೇ ನಡುಕಟ್ಟಿ ನಿಂತನು.

ಶ್ರೀನಿವಾಸನ ವೇಂಕಟಾಚಲವೆಂದರೆ ಆತನ ಸ್ವಂತ ಭೂಮಿಯೆಂಬುದು ಎಲ್ಲರೂ ಅರಿತುದಾಗಿದೆ. ಆ ಭೂಮಿಯು ವರಾಹಮೂರ್ತಿಯಿಂದ ಕೊಂಡುದಾಗಿದೆ ಎಂಬುದೂ ತಿಳಿದಿದೆ. ಆತನ ಲಗ್ನಕ್ಕಾಗಿ ಎಲ್ಲಕ್ಕೂ ಮೊದಲು ಆ ಶ್ರೀನಿವಾಸನು ಬಕುಲಾವತಿಗೆ 'ನನಗೆ ಬಂಧು ಬಳಗವಿಲ್ಲ ಇತ್ಯಾದಿಯಾಗಿ

ನುಡಿದುದು ಗೊತ್ತಿರಬಹುದು ಯಾರೂ ದಿಕ್ಕಿಲ್ಲದ ಆತನ ಮದುವೆಗಾಗಿ ಸುರ-ನರೋರಗರೆಲ್ಲ ಬಂದರು ರಾಜರಾಜರನೇಕರು ಬಂದರು. ಇಂದ್ರಾದಿ ದೇವತೆಗಳು ಸಕುಟುಂಬವಾಗಿ ಬಂದರು ಋಷಿಗಳು ಬಂದರು ಬಾಲ ಗಣದ ಷಣ್ಮುಖ ಮೊದಲಾದವರು ತಮ್ಮ ಸರಿಕ ಸ್ನೇಹಿತರಿಂದ ಕೂಡಿ ಬಂದರು. ಅಪಾರ ಚತುರಂಗ ಸೇನೆಯೂ ಬಂದಿತು ಎಲ್ಲರೂ ಬಂದು ಶ್ರೀನಿವಾಸನ ಆ ಪ್ರದೇಶದಲ್ಲಿ ಇಳಿದರು ಸ್ಥಳವೆಲ್ಲ ಲಗ್ನಕ್ಕಾಗಿ ಬಂದವ ರಿಂದ ಕಿಕ್ಕಿರಿಯಿತು. ಅವರೆಲ್ಲರಿಗೆ ಇಲ್ಲಿ ವಸತಿಗೆ ಕಟ್ಟಡವಿಲ್ಲ ಅವಾಧ ವ್ಯಾಪಾದ ಈ ಎಲ್ಲರಿಗೂ ಆಕಾಶರಾಜನಲ್ಲಿ ಇಳಿದುಕೊಳ್ಳಲು ಗೃಹಾದಿಗಳ ಸೌಕರ್ಯವಿಲ್ಲ. ಮುಂದೇನು ಮಾಡಬೇಕು ? ಎಂಬ ವಿಚಾರದ ಮಡಿಕೆಯಲ್ಲಿ ಕುಳಿತನು ಅಷ್ಟರಲ್ಲೇ ದೇವಲೋಕದಿಂದ ಇಂದ್ರನ ತಮ್ಮನಾದ ವಿಶ್ವ-ಕರ್ಮನು ಬಂದಿಳಿದನು. ಕಾರ್ಮಿಕನಾದ ಆತನು ತನ್ನ ಕೆಲಸ ಮುಗಿಯಿಸಿ ಬರಲು ಅವಕಾಶವಾದುದರಿಂದಲೇ ಅವನು ಎಲ್ಲರಿಗಿಂತಲೂ ತಡವಾಗಿ ಬಂದನು. ಆತನು ಬಂದ ಕೂಡಲೆ ಶ್ರೀನಿವಾಸನು ತಡವಾದುದಕ್ಕೆ ಆತನ ಮೇಲೆ ಹರಿ ಹಾಯ್ದನು. ಅವನು ಇಂದ್ರನಿಗೆ 'ಈ ವಿಶ್ವಕರ್ಮನಿಗೆ ಗರ್ವ ಬಂದಂತಾಗಿದೆ. ಇವನನ್ನು ಕೂಡಲೆ ಕೆಲಸದಿಂದ ದೂರಮಾಡಿಬಿಡು' ಎಂದು ಹೇಳಿದನು. ಶ್ರೀನಿವಾಸನು ಸಿಟ್ಟಿನಿಂದ ನುಡಿದುದನ್ನು ಕೇಳಿ ವಿಶ್ವಕರ್ಮನು ಶ್ರೀನಿವಾಸ ನನ್ನು ಪುನಃ ಪುನಃ ಬೇಡಿಕೊಂಡು ಆತನನ್ನು ಶಾಂತಗೊಳಿಸಿದನು.

ಸಿಟ್ಟಿನಿಂದ ಶಾಂತನಾದ ಶ್ರೀನಿವಾಸನು ವಿಶ್ವಕರ್ಮನನ್ನು ಮುಂದೆ ಕರೆದು— 'ನನ್ನ ಕಲ್ಯಾಣಮಹೋತ್ಸವಕ್ಕೆ ಬಂದ ಈ ದೇವಾದಿಗಳಿಗೆಲ್ಲ ಇಲ್ಲಿ ವಾಸಿಸಲು ತಕ್ಕ ವಾಸ್ತವ್ಯಗಳನ್ನು ಕಲ್ಪಿಸು. ಅಂದರೆ ಇಲ್ಲಿ ಐವತ್ತು ಯೋಜನ ಉದ್ದವೂ ಐವತ್ತು ಯೋಜನ ಅಗಲೂ ಆಗಿರುವ ಮನಹರ ಸಭೆ ಯನ್ನು ನಿರ್ಮಿಸು' ಎಂದು ಆಜ್ಞೆಯಿತ್ತನು. ಹಾಗು ನಾವೆಲ್ಲರು ಆಕಾಶ ರಾಜನಲ್ಲಿಗೆ ಹೋದಬಳಿಕ ಅಲ್ಲಿಯೂ ಬೀಡಾರು ಬಿಡಲು ಸ್ಥಳಗಳು ಅವಶ್ಯ. ಅವನ್ನಾದರೂ ಆಕಾಶರಾಜನಿಗೆ ತಿಳಿಸಿ ಅಲ್ಲಿಯೂ ನಿರ್ಮಿಸು, ಎಂದು ಹೇಳಿ ದನು ಮತ್ತು ಇಂದ್ರನನ್ನು ಕರೆದು— ವಿಶ್ವಕರ್ಮನು ಮಾಡುವ ಎಲ್ಲ ಕೆಲಸಗಳನ್ನು ನೋಡಿಕೊಂಡು ಆತನಮೇಲೆ ಲಕ್ಷ್ಯವಿಟ್ಟು ಕೆಲಸ ತೆಗೆದು ಕೊಳ್ಳು ಎಂದು ಆತನಿಗೆ ಆಜ್ಞೆ ಮಾಡಿದನು.

ಶ್ರೀನಿವಾಸನ ಅಪ್ಪಣೆಯಂತೆ ವಿಶ್ವಕರ್ಮನು ತನ್ನ ಉದ್ಯೋಗಕ್ಕೆ ಆರಂಭಿಸಿದನು ದೇವೇಂದ್ರನು ವಿಶ್ವಕರ್ಮನು ಮಾಡುವ ಎಲ್ಲ ಕೆಲಸಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಹತ್ತಿದನು. ವಿಶ್ವಕರ್ಮನು ಶೇಷಾಚಲದಲ್ಲಿ ಕೂಡಿದ ಎಲ್ಲರಿಗಾಗಿ ಸಭಾಗೃಹವನ್ನು ಹಾ! ಹಾ. ಎನ್ನುವಷ್ಟರಲ್ಲಿ ನಿರ್ಮಿಸಿ ದೇವೇಂದ್ರನೊಡನೆ ಆಕಾಶರಾಜನ ನಗರಕ್ಕೆ ಹೋದನು

ನಾರಾಯಣಪುರಕ್ಕೆ ಹೋದಬಳಿಕ ಆಕಾಶರಾಜನ ಒಪ್ಪಿಗೆಯಿಂದ ಆ ರಾಜನಗರದ ಸುತ್ತಲಿನ ಪ್ರದೇಶದ ಅಡವಿ—ವನಗಳನ್ನೂ ಗಿರಿ—ಗಂಹರಗಳನ್ನೂ ಕಡಿಸಿ ನೆಲಸಮ ಮಾಡಿಸಿದನು. ತಮ್ಮ ಮನಸಿಗೆ ತೋರುವಂಥ ಹಲತೆರದ ಮಂದಿರಗಳನ್ನೂ, ಸಭಾಮಂಟಪಗಳನ್ನೂ, ನಿರ್ಮಿಸಿದನು ಕಲ್ಯಾಣೋತ್ಸವಕ್ಕಾಗಿ ಬಂದ ಅನೇಕತರದ ಜನರಿಗಾಗಿ ಅನೇಕತರದ ಕಟ್ಟಡ ಮಂದಿರಗಳು ರಚಿಸಲ್ಪಟ್ಟವು. ಆಕಾಶರಾಜನು ಇದೆಲ್ಲಕ್ಕೂ ಸಂತೋಷಬಟ್ಟು ಆ ವಿಶ್ವಕರ್ಮನಿಂದೆ ನವರತ್ನ ಖಚಿತವಾದ ಹಾಗೂ ಹೇಮ—ರಜತಗಳಿಂದ ಯುಕ್ತವಾದ ಲಗ್ನಮಂಟಪವನ್ನೂ ಸಿದ್ಧಪಡಿಸಿದನು. ಕೇವಲ ವರನಾದ ಶ್ರೀನಿವಾಸನಿಗಾಗಿ ಇಳಿದುಕೊಳ್ಳಲು ಮಣಿಮಯರತ್ನ–ಗೋಪುರ, ತೋರಣಗಳಿಂದ ಹಾಗು ಧನ–ಕನಕ–ಧಾನ್ಯಾದಿಗಳಿಂದ ಪೂರ್ಣವಾಗಿರುವ ಕೋಶಾಗಾರವನ್ನುಳ್ಳ ಒಂದು ಸುಂದರವಾದ ಭವನವನ್ನು ನಿರ್ಮಾಣ ಪಡಿಸಿದನು. ಇದಲ್ಲದೆ ವಾಸ್ತುರಚನಾಕ್ರಮದಂತೆ ಹಲವು ಮಂದಿರಗಳನ್ನು ವಿಶ್ವಕರ್ಮನು ತನ್ನ ಜಾಣ್ಮೆಯಿಂದ ಉಂಟು ಮಾಡಿದನಲ್ಲದೆ ರಾಜರೀವಿಗೊಪ್ಪುವ ಅಶ್ವಶಾಲೆ, ಗಜಶಾಲೆ, ಓಲಗಶಾಲೆ, ವಾಪೀ–ಕೂಪಗಳು, ಮಜ್ಜನಶಾಲೆ ಇತ್ಯಾದಿ ಹಲವು ಭಾಗಗಳುಳ್ಳ ಅನೇಕಾನೇಕ ಮಂದಿರಗಳು ಆ ಕೂಡಲೇ ಆಕಾಶರಾಜನ ನಗರದಲ್ಲಿ ತಲೆಯೆತ್ತಿದವು.

ಅಘಟಿತ ಘಟನಾಸಾಮರ್ಥ್ಯವುಳ್ಳ ತನ್ನ ದೇವತ್ವದಿಂದ ಮಾಯೆಯನ್ನು ಬೀರುವ ಲೀಲಾವತಾರಿ ಶ್ರೀನಿವಾಸನ ಇಚ್ಛೆಗೆ ಬಂದರೆ ಯಾವದು ತಾನೇ ಅಸಾಧ್ಯ ?

——— ———

# ೧೧ ನೆಯ ಅಧ್ಯಾಯ

ಶ್ರೀನಿವಾಸನ ಕಲ್ಯಾಣಮಹೋತ್ಸವಕ್ಕಾಗಿ ದೇವ–ದೇವತೆಗಳೆಲ್ಲ ಶೇಷಾಚಲದಲ್ಲಿ ಒಟ್ಟುಗೂಡಿದರು ಎಲ್ಲರೂ ಶ್ರೀನಿವಾಸನಿಂದ ಸುಸ್ವಾಗತವನ್ನು ಪಡೆದರು. ವಿಶ್ವಕರ್ಮನಿಂದ ಅದೇ ಆಗ ವಿರಚಿತವಾದ ಸಭಾಮಂದಿರವನ್ನು ಅವರೆಲ್ಲರು ಪ್ರವೇಶಿಸಿ ಶ್ರೀನಿವಾಸನ ವಿವಾಹದಿಂದುಂಟಾಗುವ ತಮ್ಮ ಆನಂದವನ್ನು ವ್ಯಕ್ತಪಡಿಸಲು ಉದ್ಯುಕ್ತರಾದರು. ಆಕಾಶರಾಜನಿಂದ ಕರೆ ಬಂದ ಕೂಡಲೆ ಎಲ್ಲರೂ ಹೊರಡುವ ಸಿದ್ಧತೆ ನಡಿಸಿದರು. ಶ್ರೀನಿವಾಸನು ಎಲ್ಲರಿಗೂ ತನ್ನ ಲಗ್ನದ ಬಗ್ಗೆ ತಿಳಿಸತಕ್ಕ ನಿರೂಪಣೆಯನ್ನು ತಿಳಿಸಲು ತನ್ನ ಹುತ್ತಿನಿಂದ ಆ ದೇವಸಭಾಮಂಡಲಕ್ಕೆ ಬಂದನು ತೇಜೋಮಯನಾದ ಆತನನ್ನು ಕಂಡು ದೇವತೆಗಳೆಲ್ಲರು ಹರುಷಗೊಂಡರು.

ಶ್ರೀನಿವಾಸನು ಆ ಸಭಾಮಂದಿರಕ್ಕೆ ಬಂದು ತನಗಾಗಿ ನಿರ್ಮಿತವಾದ ಸ್ಥಾನದಲ್ಲಿ ಕುಳಿತು ಎಲ್ಲ ದೇವತೆಗಳಿಗೆ— 'ಎಲೈ, ಸುರವೃಂದವೇ! ನಿಮ್ಮೆಲ್ಲರನ್ನು ಒಟ್ಟಾಗಿ ಕಾಣುವ ಸುಯೋಗವು ನನ್ನ ವಿವಾಹದ ನಿಮಿತ್ತದಿಂದ ಪ್ರಾಪ್ತವಾದುದರಿಂದ ನಾನು ನನಗೆ ಧನ್ಯತೆಯನ್ನು ತಿಳಿದುಕೊಳ್ಳುವೆನು. ಈಗ ನಾನು ನಾರಾಯಣಪುರದ ಆಕಾಶರಾಜನ ಪುತ್ರಿ ಪದ್ಮಾವತಿಯನ್ನು ಲಗ್ನ ಮಾಡಿಕೊಳ್ಳುವ ಆತುರತೆಯುಳ್ಳವನಾಗಿರುವೆ. ದೇವಗುರು ಬೃಹಸ್ಪತ್ಯಾಚಾರ್ಯರ ಹಾಗು ಶುಕಮುನಿಗಳ ಮಧ್ಯಸ್ಥಿಕೆಯಿಂದಲೂ ನನ್ನ ಮಾತುಃಶ್ರೀಯವರೇ ಆಗಿದ್ದ ಬಕುಲಾವತಿಯವರ ಬಲವಾದ ಬಯಕೆಯಿಂದಲೂ ಆ ಕನ್ನೆಯ ನಿಶ್ಚಯ ಮಾಡಿಕೊಂಡಿದೆ ಕಾರ್ಯವು ತೀವ್ರ ನೆರವೇರಬೇಕಾಗಿದ್ದ ಮೂಲಕ ಈ ನನ್ನ ವಿವಾಹದ ಬಗ್ಗೆ ನಿಮಗೆಲ್ಲರಿಗೂ ಪ್ರತ್ಯೇಕವಾಗಿ ತಿಳಿಸಿ ನಿಮ್ಮ ಸಹಾನುಭೂತಿಯನ್ನು ಮುಂದಾಗಿ ದೊರಕಿಸಲು ಅಷ್ಟೊಂದು ಕಾಲವು ನನಗ ದೊರೆಯಲಿಲ್ಲ. ಆದರೂ ನೀವುಗಳು ನನ್ನ ಆಮಂತ್ರಣವನ್ನು ಮನ್ನಿಸಿ ಮದುವೆಗಾಗಿ ಹೊರಟು ಬಂದಿರುವಿರಾದ್ದರಿಂದ ನನಗೆ ಬಳ್ಳಿ ಸಂತೋಷವೆನಿಸಿದೆ. ಈಗಲಾದರೂ ನನ್ನ ಲಗ್ನದ ಬಗ್ಗೆ ನಿಮ್ಮೆಲ್ಲರ ಸಮ್ಮತಿಯು ದೊರೆತುದಾದರೆ ನಾನು ಧನ್ಯನೆಂದು ಭಾವಿಸುವೆ' ಎಂದು ಎಲ್ಲರನ್ನೂ ನಿರೀಕ್ಷಿಸಿ

ಕುಳಿತುಕೊಂಡನು. ಆಗ ಎಲ್ಲ ದೇವತೆಗಳ ಪರಿಯಿಂದ ಬ್ರಹ್ಮನು ಒಪ್ಪಿಗೆಯ ಹೇಳಿಕೆಯನ್ನು ಶ್ರೀನಿವಾಸನ ಮುಂದೆ ಇಡಲು ಆ ಸಭೆಯಲ್ಲಿ ಎದ್ದು ನಿಂತು:– ಪುರುಷೋತ್ತಮ! ಶ್ರೀನಿವಾಸ! ನಾವೆಲ್ಲರು ನಿನ್ನ ದಾಸ್ಯತ್ವವನ್ನು ಕೊಂಡಿರುವೆವು. ನಿನ್ನ ಕೃಪೆಯಿಂದಲೇ ನಿನ್ನ ಶುಭಮಂಗಲ ವಿವಾಹವನ್ನು ಮಹೋತ್ಸವದೊಡನೆ ಕಾಣುವ ಲವಲವಿಕೆ ನಮ್ಮಲ್ಲಿರುವದು. ನಮ್ಮ ಅಪೇಕ್ಷೆಯನ್ನು ಪೂರ್ಣಮಾಡುವಿ ಎಂದು ನಾವು ನಿನ್ನನ್ನು ಪೂರ್ಣನಂಬಿರುವೆವು' ಎಂದು ನುಡಿದು ದೇವತೆಗಳ ಚಪ್ಪಾಳೆಯಿಂದ ಸೂಚಿತವಾದ ಸಹಾನುಭೂತಿಯನ್ನು ಬೀರಿ ಕುಳಿತುಕೊಂಡನು. ಬಳಿಕ ಶ್ರೀಶಂಕರನು ಶ್ರೀನಿವಾಸನನ್ನು ಉದ್ದೇಶಿಸಿ– 'ನೀನು ಲೌಕಿಕರಂತೆ ಮಾತುಗಳನ್ನಾಡಿ ನಮ್ಮೆಲ್ಲರಿಗೆ ವಿನೋದಮಾಡುತ್ತಿರುವೆ. ಕೈಲಾಸಗಿರಿಯಲ್ಲಿ ನಾನೊಬ್ಬನೇ ಇರಲು ಮನಸ್ಸು ಒಪ್ಪದ್ದರಿಂದ ನಾನು ಆ ಸಪ್ತರ್ಷಿಗಳನ್ನು ಮುಂದೆ ಮಾಡಿ ಅವರ ಮಧ್ಯಸ್ಥಿಕೆಯಿಂದ ಈ ಪಾರ್ವತಿಯನ್ನು ಮದುವೆ ಮಾಡಿಕೊಳ್ಳಲಿಲ್ಲವೇ? ಅದರಂತೆ ಈ ಶೇಷಾಚಲವಾಸಿಯಾದ ನಿನಗೆ ಲಗ್ನಮಾಡಿಕೊಳ್ಳದೆ 'ಒಬ್ಬನೇ ಇರು' ಎಂದು ಹೇಳುವಧೈರ್ಯವು ನಮಗಾಗದು. ಹಾಗು ನೀನು ಒಬ್ಬೊಂಟಿಗನಾಗಿ ಈ ಗಿರಿವಾಸಮಾಡುವದು ಯುಕ್ತವಲ್ಲವೆಂದು ನಾನು ನನ್ನ ಅನುಭವದಿಂದ ನಿನಗೆ ತಿಳಿಸುವೆನು. ಎಂದು ನಗೆಯಾಡಿ ಕುಳಿತನು. ಶ್ರೀನಿವಾಸನೂ ಉಳಿದ ದೇವತೆಗಳೂ ನಕ್ಕು ಶಂಕರನನ್ನು ಹೊಗಳಿದರು. ಇದರಂತೆ ಅವರೆಲ್ಲ ಶ್ರೀನಿವಾಸನ ಲಗ್ನಕ್ಕಾಗಿ ತಮ್ಮ ತಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸಿದರು. ಆನಂದಬೀರಿದರು.

ಇದಾದ ಬಳಿಕ ವಿವಾಹ ಕಾರ್ಯದಲ್ಲಿ ಓಡಾಡುವ ಮುಖ್ಯಕೆಲಸವನ್ನು ಕೈಕೊಂಡ ಬ್ರಹ್ಮನು ಶ್ರೀನಿವಾಸನ ಹತ್ತಿರ ಬಂದು–'ಶ್ರೀನಿವಾಸ! ಇನ್ನು ಮೇಲೆ ವಿವಾಹದ ಮೊದಲೇ ಎಂಟುವರ್ಗಗಳನ್ನು ಗೊತ್ತುಪಡಿಸಬೇಕಾಗಿದೆ ಆ ಪ್ರಕಾರವಾಗಿ ನಾನು ಪುಣ್ಯಾಹವಾಚನದ ಕಾರ್ಯಭಾಗವನ್ನು ನೇಮಿಸಿಕೊಳ್ಳುವೆನು' ಎಂದು ಹೇಳಿ ಶ್ರೀನಿವಾಸನಿಂದ ಒಪ್ಪಿಗೆ ಪಡೆದನು. ಋಷಿಶ್ರೇಷ್ಠ ವಶಿಷ್ಠನನ್ನು ವರನ ಪುರೋಹಿತನೆಂಬದಾಗಿ ತಿಳಿಸಿದನು. ಬ್ರಹ್ಮನೇ ವಿವಾಹದ ಸರ್ವ ಯಾಜಮಾನ್ಯತೆಯನ್ನು ವಹಿಸತಕ್ಕದ್ದೆಂದು ಶ್ರೀನಿವಾಸನು ಹೇಳಿದನು. ಬಂದವರ ಸ್ವಾಗತಕ್ಕಾಗಿಯೂ ಬೀಗರನ್ನು ಮರ್ಯಾದಿಸುವದಕ್ಕಾಗಿಯೂ ಶಂಕರನನ್ನು ನೇಮಿಸಿದನು ಲಗ್ನದ ಅಡಿಗೆಯ ಕಾರ್ಯವನ್ನು ಅಗ್ನಿಯು ತನ್ನ

ಸ್ವಾಹಾ ಮತ್ತು ಸ್ವಧಾಗಳೆಂಬ ಇಬ್ಬರೂ ಪತ್ನಿಯರಿಂದ ಕೂಡಿಕೊಂಡು ಕೈಕೊಳ್ಳಲಿ ಕೇವಲ ನೀರುನಿಡಿಯ ಕೆಲಸವನ್ನು ವರುಣನೊಬ್ಬನೇ ಮಾಡಿದರೆ ಸಾಕು ' ಎಂದು ತಿಳಿಸಿದನು ಇವಲ್ಲದೆ ತಾನೂ ಆಸ್ಥೆಯಿಂದ ನಿಮ್ಮ ಲಗ್ನದಲ್ಲಿ ಕೆಲಸ ಕೈಕೊಳ್ಳುವೆನು. ನನಗೂ ಒಂದು ಕೆಲಸವನ್ನು ಒಪ್ಪಿನಬೇಕೆಂದು ಯಮನು ಶ್ರೀನಿವಾಸನನ್ನು ಕೇಳಿಕೊಂಡನು ಅವನಿಗೆ ಮಾತ್ರ ಶ್ರೀನಿವಾಸನು ಶಿಷ್ಟರಿಗೆ ಏನೊಂದು ತ್ರಾಸು ಕೊಡದೆ ದುಷ್ಟರನ್ನು ನಿಗ್ರಹಿಸುವ ಕೆಲಸವನ್ನು ಒಪ್ಪಿಸಿದನು ಲಗ್ನದಲ್ಲಿ ಸುಗಂಧ–ಪರಿಮಳ ದ್ರವ್ಯಗಳನ್ನು ಒದಗಿಸಿ ಕೊಡುವ ಕೆಲಸವು ವಾಯುವಿನದೆಂದು ಸಾರಿದನು. ಇವರ ಹೊರತಾಗಿ ಧನಾಧಿಪತಿ ಕುಬೇರನು ದೀನ–ದರಿದ್ರ ಮೊದಲಾಗಿ ಬ್ರಾಹ್ಮಣ–ಋಷಿವರೆಗಿನ ಎಲ್ಲ ಯಾಚಕ ವರ್ಗವನ್ನು ದಕ್ಷಿಣೆ–ವಸ್ತ್ರದಾನಗಳಿಂದ ಸಂತುಷ್ಟ ಪಡಿಸತಕ್ಕದ್ದೆಂದು ನಿಯಮಿಸಲ್ಪಟ್ಟನು ದೀಪ–ಬೆಳಕಿನ ವ್ಯವಸ್ಥೆಯು ಚಂದ್ರನಿಗೂ, ಸಮ್ಮಾರ್ಜನೆ–ಉದ್ವಾರ್ಜನೆಗಳಿಂದ ಪಾತ್ರೆಗಳನ್ನು ಬಳಗುವ ಕ್ರಿಯೆಯು ಅಷ್ಟವಸುಗಳಿಗೂ, ಒಡಾಡಿ ಎಲೆ–ದೊನ್ನೆಗಳನ್ನು ಪೂರೈಸುವ ಕೆಲಸವು ನವಗ್ರಹಗಳಿಗೂ ಬೇರೆ ಬೇರೆಯಾಗಿ ನಿಯಮಿಸಿದನು. ನೇಮಕವಾದ ತಮ್ಮ ತಮ್ಮ ಕೆಲಸಗಳನ್ನೆಲ್ಲ ಆಸ್ಥೆಯಿಂದ ಕೈಕೊಂಡು ಪೂರ್ಣಮಾಡುವ ಕುರಿತು ಶ್ರೀನಿವಾಸನು ಈ ಕಾರ್ಯಭಾಗದ ಅಷ್ಟವರ್ಗದವರಿಗೆ ಸ್ಪಷ್ಟನುಡಿದು ವಿನಂತಿಸಿದನು.

ಇಷ್ಟಾದಬಳಿಕ ಬ್ರಹ್ಮನು ' ವಿವಾಹ ಕಾರ್ಯದ ನಿರ್ವಿಘ್ನತೆಗಾಗಿ ಇಷ್ಟದೇವತೆ ಕುಲದೇವತೆಗಳನ್ನು ಪ್ರತಿಷ್ಠಾಪಿಸಿ ಪುಣ್ಯಾಹವಾಚನ ವಿಧಿಯನ್ನು ಮುಗಿಯಿಸಬೇಕಾಗಿದೆ. ಸಿದ್ಧನಾಗಬೇಕೆಂದು ಶ್ರೀನಿವಾಸನಿಗೆ ಸೂಚಿಸಿದನು ಪುರೋಹಿತರು ಎಲ್ಲ ಮಂಗಲಕಾರಕ ದ್ರವ್ಯಗಳನ್ನು ಅಣಿಪಡಿಸಿಕೊಂಡರು ಬ್ರಹ್ಮನು ತನ್ನನ್ನು ಕಾರ್ಯಕ್ಕಾಗಿ ಕರೆದ ಕೂಡಲೆ ಲೌಕಿಕರಂತೆ ಶ್ರೀನಿವಾಸನು ವಲ್ಮೀಕದ ಒಂದು ನಿಟ್ಟಿನಲ್ಲಿ ಖಿನ್ನವದನನಾಗಿ ಕುಳಿತನು. ಬಕುಲಾವತಿಯು ಶ್ರೀನಿವಾಸನು ಮತ್ತೆ ಹೀಗೇಕೆ ಮಾಡಹತ್ತಿದನೆಂದು ಆಲೋಚನೆ ಗೀಡಾದಳು ಆಕೆಯು ಬ್ರಹ್ಮನನ್ನು ಕರೆದು—ನಿನ್ನ ತಂದೆ ಅದೇಕೋ ದುಃಖಿಸುತ್ತ ಕುಳಿತಿರುವನು. ನೀನು ಹೋಗಿ ಅವನ ಶೋಕದ ಕಾರಣವನ್ನು ವಿಚಾರಿಸು ಹಾಗು ಶುಭಕಾರ್ಯದ ಆರಂಭವು ಉಲ್ಲಾಸದಿಂದ ನೆರವೇರುವಂತೆಮಾಡು ಎಂದು ಹೇಳಿದಳು.

ಬಕುಲಾವತಿಯ ಮಾತುಗಳನ್ನು ಕೇಳಿ ಬ್ರಹ್ಮನು ಶ್ರೀನಿವಾಸನ ಬಳಿಗೆ ಹೋಗಿ—ಶ್ರೀನಿವಾಸ! ಇದೇನು ನಿನ್ನ ಮನಸಿನದುಗುಡು; ತೀವ್ರವೇ ಪೀತಾಂಬರಧಾರಿಯಾಗು. ಪುಣ್ಯಾಹವಾಚನಕ್ಕಾಗಿ ನಡೆ ಎಂದು ಎಚ್ಚರಿಸಿದನು. ಹಾಗು ಇಂದೇ ಹೀಗೇಕೆ ದುಃಖಮಾಡುತ್ತಿರುವಿ ಎಂದು ಕೇಳಿದನು

ಬ್ರಹ್ಮನು ಕಳಕಳಿಯಿಂದ ನುಡಿದ ಮಾತುಕೇಳಿ ಶ್ರೀನಿವಾಸನು—'ಮಗನೇ ನನ್ನ ತಾಪವನ್ನು ಏನೆಂದು ಹೇಳಲಿ? ಚಂದ್ರನಿಲ್ಲದ ತಾರಾಂಗಣದಂತೆ, ವೃಕ್ಷರಹಿತವಾದ ವನದಂತೆ, ಈಗ ಈ ದೇವ ಸಮುದಾಯವು ಲಕ್ಷ್ಮೀದೇವಿಯೊಬ್ಬಳು ಇಲ್ಲದ್ದರಿಂದ ಕಾಂತಿಹೀನವಾಗಿದ ಅದಕ್ಕಾಗಿ ನನ್ನಲ್ಲಿ ಲಕ್ಷ್ಮೀವಿರಹವು ದುಃಖವನ್ನುಂಟುಮಾಡಿದೆ ನಾನೇನು ಮಾಡಲಿ? ಎಂದು ನುಡಿದನು ಆಗ ಶಂಕರನು ಶ್ರೀನಿವಾಸನ ಮುಂದೆ ಬಂದು—'ಶ್ರೀನಿವಾಸಾ ಇದೇನು ನಿನ್ನ ವ್ಯಸನ? ಕೇವಲ ಸಾಮಾನ್ಯರಂತೆ ಶೋಕಕ್ಕೆ ಅವಸರವನ್ನೀಯುವದು ದೇವೇಶನಾದ ನಿನಗೆ ಶೋಭೆಯನ್ನಿಸಲಾರದು. ಈ ನಿನ್ನ ತಾಪವು ಕೇವಲ ಲೋಕವಿಡಂಬನೆಗಾಗಿ ಉಂಟಾಗಿರಬೇಕೆಂದು ನನ್ನ ಭಾವನೆಯಾಗಿದೆ. ನಾಕುಬಿಡು ಏಳು ಪುಣ್ಯಾಹವಾಚಕಕ್ಕಾಗಿ ತೀವ್ರ ಏಳು ಎಂದು ಎಚ್ಚರಿಸಿದನು. ಆಗ ಶ್ರೀನಿವಾಸನು ಆತನನ್ನು ಕುರಿತು—ಶಂಕರ! ನೀನು ಇನ್ನೂ ಅಜ್ಞನೆಂದು ನನಗೆ ತೋರುವದು. ಆ ನನ್ನ ಪ್ರಿಯಲಕ್ಷ್ಮಿಯು ಮಹಾಪ್ರಳಯಕಾಲದಲ್ಲಿಯೂಕೂಡ ನನ್ನನ್ನು ಬಿಟ್ಟಿರಲಿಲ್ಲ ನಿರಾಶ್ರಯವಾದ ಕ್ಷೀರಸಾಗರದಲ್ಲಿ ನನ್ನೊಂದಿಗೆ ಶಯನ ವಿಭೂಷಿತಳಾಗಿದ್ದಳು ಸದ್ಯ ಆ ನನ್ನ ಪ್ರೇಮದ ಮಡದಿಯನ್ನು ಹೊರತುಪಡಿಸಿ ವಿವಾಹಕ್ಕಾಗಿ ನನ್ನ ಮನಸ್ಸು ಅದು ಹೇಗೆ ಸೊಗಸುಗಾಣುವದು? ಇನ್ನು ನನ್ನ ವ್ಯಸನ ನಿವಾರಣೆಯು ಆಕೆಯು ಬಾರದ ವಿನಃ ಆಗುವಂತಿಲ್ಲ. ನೀವೇನಾದರೂ ಪ್ರಯತ್ನ ಮಾಡಿ ಆಕೆಯನ್ನು ಕರೆಯಿಸಿರಿ. ಎಂದು ಹೇಳಿದನು. ಶಂಕರ ಹಾಗು ಬ್ರಹ್ಮಾದಿಗಳಿಗೆ ಲಕ್ಷ್ಮಿಯನ್ನು ಹೇಗೆ ಕರೆಯಿಸಿಕೊಳ್ಳಬೇಕೆಂಬದೊಂದು ದೊಡ್ಡ ಸಮಸ್ಯೆಯೇ ಆಯಿತು. ನಮ್ಮ ಕರೆಯನ್ನು ಆಕೆಯು ಮನ್ನಿಸದಿದ್ದರೆ ಮುಂದೇನು ಗತಿ? ಶ್ರೀನಿವಾಸನಂತೂ ಆ ಲಕ್ಷ್ಮಿಯು ಬಾರದೆ ಕಂಕಣಕಟ್ಟಿಕೊಳ್ಳಲು ಸಿದ್ಧನಾಗುವ ಲಕ್ಷಣವಿಲ್ಲ. ಹಮ್ಮಿದ ಲಗ್ನವನ್ನು ಮುರಿದುಕೊಳ್ಳುವದು ಜಗತ್ತಿನಲ್ಲಿ ತೀರ ನಾಚಿಕೆಗೀಡಾದದ್ದಾಗುವದು. ಎಂದು

ಹಲವು ಬಗೆಯಿಂದ ವಿಚಾರಕ್ಕೊಳಗಾದರು. ಬಗೆಹರಿಯದೆ ಅವರು ನಿರ್ವಿಣ್ಣರಾದರು. ಆಗ ಬ್ರಹ್ಮನು ಶಂಕರನಿಗೆ—ದೇವ! ನಾವೇಕೆ ಈ ವಿಷಯವಾಗಿ ತಲೆಕೆಡಿಸಿಕೊಳ್ಳುವದು? ಇದಕ್ಕಾಗಿ ಆ ಶ್ರೀನಿವಾಸನನ್ನೇ ವಿಚಾರಮಾಡಿ ಅವನ ಹೇಳಿಕೆಯಂತೆ ವರ್ತಿಸಿದರಾಯಿತು. ಎಂದು ಹೇಳಿ ತಾನು ಶಂಕರನೊಡನೆ ಶ್ರೀನಿವಾಸನಲ್ಲಿಗೆ ಹೋಗಿ ವಿಚಾರಿಸಿದನು. ಆಗ ಶ್ರೀನಿವಾಸನು—ಹಾಗಾದರೆ ಆ ಸೂರ್ಯನನ್ನು ಕರೆ-ಅವನನ್ನು ಕೇಳಿ ಕರೆಯಿಸೋಣ ಎಂದು ನುಡಿದನು.

ಸೂರ್ಯನು ಶ್ರೀನಿವಾಸನ ಮುಂದೆ ಬಂದು ಏನಪ್ಪಣೆ? ಎಂದು ಕೇಳಿದನು. 'ನೀನು ಈ ಕೂಡಲೆ ಕರವೀರಪುರಕ್ಕೆ ಹೋಗಿ ಮಹಾಲಕ್ಷ್ಮಿಯನ್ನು ಕರೆದುಕೊಂಡುಬಾ' ಎಂದು ಶ್ರೀನಿವಾಸನು ನುಡಿದನು ಅದಕ್ಕೆ ಸೂರ್ಯನು—'ಗೋವಿಂದ! ನಿನ್ನ ಅಪ್ಪಣೆಯಂತೆ ಲಕ್ಷ್ಮೀದೇವಿಯಲ್ಲಿ ನಾನು ಹೋಗಿ ಬರಲು ಬಾಧಕವಿಲ್ಲ ಆದರ?' ಎಂದು ನುಡಿದು ಸುಮ್ಮನಾದನು. ಸೂರ್ಯನ ಮುಖ ಭಾವವನ್ನರಿತು ಶ್ರೀನಿವಾಸನು. 'ರವಿಯೇ ಆದರೆ ಎಂದರೇನು? ನೀನು ಕರವೀರಪುರಕ್ಕೆ ಹೋಗು ಆಕೆಯನ್ನು ಕಾಣು, ನಿನ್ನನ್ನು ಪ್ರೇಮದಿಂದ ಕಾಣುವ ಆಕೆಯ ಮುಂದೆ ನಿನ್ನ ಕಣ್ಣೀರನ್ನು ಉದುರಿಸಿ ನಿಲ್ಲು. ಆಕೆಯು ನಿನ್ನನ್ನು ಸಾಂತ್ವನಗೊಳಿಸಿ ನಿನ್ನ ಶೋಕದ ಕಾರಣವನ್ನು ವಿಚಾರಿಸಲು—ನೀನೊಂದು ಅಸತ್ಯ ವಾಕ್ಯವನ್ನು ನುಡಿದುಬಿಡು. ವಿವಾಹ ಪ್ರಸಂಗ ನೆರವೇರಲು ಸುಳ್ಳು ನುಡಿಯುವದು ದೋಷವಲ್ಲ. ನೀನು ಶಂಕೆಗೊಳ್ಳಬೇಡ. 'ನಿನ್ನ ಪತಿ ಶ್ರೀನಿವಾಸನು ಅನಾರೋಗ್ಯವುಳ್ಳವನಾಗಿ ಕೊರಗಿ ಸೊರಗಿ ಹಾಸಿಗೆ ಹಿಡಿದು ಮಲಗಿರುವನು. ನಿನ್ನ ಮುಖ ದರ್ಶನವನ್ನು ಬಯಸುವನು' ಇವೇ ನೀನು ಹೇಳುವ ಆ ಸುಳ್ಳಿನಕಂತೆ. ಇದಕ್ಕೇನೂ ನೀನು ಅಂಜಬೇಡ. ನಿನಗೆ ಸುಳ್ಳಿನ ದೋಷವು ತಟ್ಟದಂತೆ ಹಾಗು ಆಕೆಯು ನಿನ್ನನ್ನು 'ಸುಳ್ಳು ಹೇಳಿದನು. ಎಂದು ಜರೆಯದಿರಲಿಕ್ಕೆ ನಾನೊಂದು ಹಂಚಿಕೆಮಾಡುವೆನು. ನೀನು ಆಬಗ್ಗೆ ಚಿಂತಿಸಬೇಡ. ಈಗಲೇ ಹೊರಡು ಕರವೀರಪುರಕ್ಕೆ ಹೋಗು. ನಾನು ಹೇಳಿದಂತೆಮಾಡು ಈ ಹಂಚಿಕೆಯೇ ಆಕೆ ಇಲ್ಲಿಗೆ ಬರಲು ಮೇಲಾದದ್ದು. ಇದರಿಂದ ಅವಳು ಬಂದೇ ಬರುವಳು ನೀನು ಸ್ವಲ್ಪ ಹೊತ್ತು ತಡೆದು ನಿಂತಾದರೂ ಆಕೆಯನ್ನು ಸಂಗಡ ಕರೆದುಕೊಂಡುಬಾ'ಎಂದುಹೇಳಿಕಳಿಸಿದನು.

ಶ್ರೀನಿವಾಸನ ಅಪ್ಪಣೆಪಡೆದು ಆತನ ಕಪಟತಂತ್ರವನ್ನು ಧಾರಣಮಾಡಿಕೊಂಡು ರವಿಯು ಕರವೀರಪುರಕ್ಕೆ ಹೋದನು ಶ್ರೀನಿವಾಸನು ಹೇಳಿದಂತೆ ತಂತ್ರವನ್ನು ಬೀಸಿದನು. ನಿಜವಾದ ಎಲ್ಲ ನಂಗತಿಯನ್ನು ಮರೆಮಾಜಿ ಕೇವಲ ಶ್ರೀನಿವಾಸನು ಹೇಳಿವಷ್ಟನ್ನೇ ಹೇಳಿದನು ಆತನು ಮಾಡಲಿಕ್ಕೆ ಹೇಳಿದಷ್ಟನ್ನೇ ಮಾಡಿದನು

ಸೂರ್ಯನಾಡಿದ ನುಡಿಗಳನ್ನೂ ಆತನ ಅಳುವನ್ನೂ ಲಕ್ಷ್ಮೀದೇವಿಯು ಕೇಳಿ, ಕಂಡು ಬಹಳವಾದ ದುಃಖವನ್ನು ಹೊಂದಿದಳು. ಕೂಡಲೆ ರಥವನ್ನು ಆರೋಹಿಸಿ ಮನೋವೇಗದಿಂದ ಶ್ರೀನಿವಾಸನಿಳಿದ ಶೇಷಾಚಲಕ್ಕೆ ಬಂದಳು

ಲಕ್ಷ್ಮೀ ಬರುವ ಮಾರ್ಗದಕಡೆಗೇ ಕಣ್ಣಿಟ್ಟು ನೋಡುತ್ತ ಕುಳಿತಿದ್ದ ಶ್ರೀನಿವಾಸನು ಆಕೆಯ ರಥವು ತೋರಹತ್ತಿದಕೂಡಲೆ ತನ್ನ ಕೃತಕ ಬುದ್ಧಿಯಿಂದ ತನ್ನ ದೇಹ ಸ್ವರೂಪದಲ್ಲಿ ವಿಕೃತಿಯನ್ನಾಗಿ ಮಾಡಿಕೊಂಡನು. ಅನುಗಾಲ ಜೇನೆಬಿದ್ದ ಮಾನವನಂತಾದನು 'ಲಕ್ಷ್ಮೀದೇವಿಯು ಇದೀಗ ಬಂದಳು' ಎಂದು ಮುಂದೆ ಬಂದು ನುಡಿದ ಸೂರ್ಯನ ಮಾತು ಕೇಳಿ ತಾನು ಆಕೆಯನ್ನು ಎದುರುಗೊಳ್ಳುವ ಕುರಿತು ಹೊರಡಲು ಸಿದ್ಧನಾದನು. ಭುಜಗಾಭರಣನಾದ ರುದ್ರನ ಹೆಗಲಮೇಲೆ ತನ್ನದೊಂದು ಕೈಯನ್ನು ಚತುರ್ಮುಖನ ಕಂಠಗಳನ್ನೆಲ್ಲ ಬಳಿಸಿ ಇನ್ನೊಂದು ಕೈಯನ್ನು ಹಾಕಿಕೊಂಡು ಅಶಕ್ತನಂತೆ ನಡೆದನು. ಆಗಿನ ಅವನ ರೂಪವು ಅದ್ಭುತವಾಗಿ ತೋರಿತು. ಎಲ್ಲ ದೇವತೆಗಳೂ ಋಷಿಗಳೂ ಆತನನ್ನು ಕಂಡು ವಿಸ್ಮಯ ಪಡೆದರು. ಇಂಥ ಸ್ವರೂಪದಿಂದ ತನಗೆ ಅಭಿಮುಖನಾಗಿ ಬರುತ್ತಿರುವ ಶ್ರೀನಿವಾಸನನ್ನು ಲಕ್ಷ್ಮೀದೇವಿಯು ದೂರಿಂದಲೇ ಕಂಡು ರಥದಿಂದ ಕೆಳಗಿಳಿದಳು. ಕೂಡಲೆ ಕಾಲ್ನಡಿಗೆಯಿಂದಲೇ ಆತನ ಎದುರು ಹೋಗಿ ಪಾದಕ್ಕೆ ಬಿದ್ದು ಸ್ವಾಮೀ, ನಾನು ಸರ್ವಸ್ವೀ ಮಹಾಪರಾಧಿಯು. ನನ್ನನ್ನು ಕ್ಷಮಿಸಬೇಕೆಂದು ಬೇಡಿಕೊಂಡಳು ಆಗ ಶ್ರೀನಿವಾಸನು-'ದೇವಿ ! ಇನ್ನೇನು ಮಾಡುವದು ? ಗತಿಸಿಹೋದ ನಂಗತಿಯನ್ನು ಸ್ಮೃತಿಸುವದು ಯುಕ್ತವಲ್ಲ. ಅದನ್ನೆಲ್ಲ ಮರೆತು ಬಿಡು ಇನ್ನು ದೇಹಾಲಸ್ಯವು ದೂರಾಗಲೆಂದು ಇಷ್ಟೇ ಬಯಸು' ಎಂದು ದೀನ ದರ್ಶಕ ವಾಣಿಯಿಂದ ನುಡಿಯುವ ನಾರಾಯಣನನ್ನು ಲಕ್ಷ್ಮೀದೇವಿಯು ಪ್ರೇಮಭರದಿಂದ ಬಂದು ಆಲಿಂಗಿಸ ಹೋದಳು. ಆಗ ಶ್ರೀನಿವಾಸನು—'ದೇವೀ ನನ್ನ ಹೃದಯವು

ಆ ಭೃಗು-ಮುನಿಯ ಪಾದ' ಎಂದು ನುಡಿಯುತ್ತಿರುವಷ್ಟರಲ್ಲಿ ಲಕ್ಷ್ಮೀದೇವಿಯು ಆತನ ಬಾಯಿಯನ್ನು ತನ್ನ ಬಲಹಸ್ತದಿಂದ ಗಟ್ಟಿಯಾಗಿ ಮುಚ್ಚಿದಳು. ಹಾಗು ದೇವಾ! ಗತಿಸಿಹೋದ ಸಂಗತಿಯನ್ನು ಸ್ಮೃತಿಸುವದು ಯುಕ್ತವಲ್ಲೆಂದು ಇದೀಗ ನೀವೇ ನುಡಿದಿರಲಿಲ್ಲವೇ ? ಎಂದು ಕೇಳಿದಳು. ಶ್ರೀನಿವಾಸನಿಗೆ ನಗು ತಡೆಯಲಿಲ್ಲ ಆಕೆಯ ಕೈಯನ್ನು ತನ್ನ ಮುಖದಿಂದ ಕೊಸರಿ ಒಗೆದು ದೃಢವಾಗಿ ಆಕೆಯನ್ನು ಆಲಂಗಿಸಿದನು ಆಕೆಯು ಭಕ್ತಿ ಪೂರ್ವಕವಾಗಿ ಅವನ ಹೃದಯ ಪ್ರದೇಶವನ್ನು ಅಪ್ಪಿಕೊಂಡಂತೆ ಆತನ ದೇಹದ ಕೊರಗು-ಸೊರಗುಗಳು ಮಾಯವಾಗಿ ಪುಷ್ಟ ಶರೀರವುಳ್ಳವನಾದನು. ಬಳಿಕವರು ಹಾಗೇ ಕುಶಲ ಮಾತುಗಳನ್ನಾಡುತ್ತ ವಲ್ಮೀಕಕ್ಕೆ ಬಂದರು ಆ ಕಾಲದಲ್ಲಿ ಸಕಲ ಜಗತ್ತುಗಳಿಗೆ ಮಾತಾಪಿತೃಗಳಾದ ಲಕ್ಷ್ಮೀನಾರಾಯಣರ ಸಂದರ್ಶನ ದಿಂದ ದೇವ-ಋಷಿಗಣಗಳು ಕಣ್‌ಮನಗಳು ದಣಿಯುವಂತೆ ಕಂಡರು ಭಕ್ತಿಯಿಂದ ನಮಿಸಿದರು ಭಗವಂತನ ಗುಣಗೀತೆಯನ್ನು ಹಾಡಿದರು. ಆ ಬಳಿಕ ರಮಾನಾರಾಯಣರು ಏಕಾಂತವಲ್ಲಿ ವಾಸವಾಗಿ ಬಹುದಿನಗಳಿಂದ ಹಿಂದುಳಿದಿದ್ದ ಮಾತು-ಕತೆಗಳನ್ನು ಮುಂದರಿಸಿದರು ಅನ್ಯೋನ್ಯರಾಗಿ ಪರಸ್ಪರರ ದೋಷಗಳನ್ನು ಎತ್ತಿ ನುಡಿದರು. ತಪ್ಪಿಗಾಗಿ ಒಬ್ಬರು ಇನ್ನೊಬ್ಬರ ಕ್ಷಮಾಪರಾಧ ಬೇಡಿದರು ಆ ಬಳಿಕ ಲಕ್ಷ್ಮೀದೇವಿಯು ಆತನನ್ನು ಕುರಿತು-ದೇವಾ ಇಷ್ಟು ಕಾಸಬ್ಬವನ್ನು ಅವಲಂಬಿಸಿ ನನ್ನನ್ನೇಕೆ ಕರಿನಬೇಕಾಗಿತ್ತು? ನೀವು ಇನ್ನೊಂದು ವಿವಾಹ ಮಾಡಿಕೊಳ್ಳುವಿರೆಂದಮೇಲೆ ನನ್ನ ಅವಶ್ಯ ವಾದರೂ ನಿಮಗೇನು ? ಎಂದು ಕೇಳಿದಳು

ಆಗ ಶ್ರೀನಿವಾಸನು ಲಕ್ಷ್ಮಿಯ ಮಾತುಗಳಿಗೆ ಪ್ರತ್ಯುತ್ತರನಾಗಿ— ಪ್ರಿಯ ನಖಿಯೇ! ನನ್ನ ಈ ಮೊದಲಿನ ಅವತಾರದ ಸ್ಮರಣೆಯು ನಿನ್ನಲ್ಲಿ ಉಂಟಾಗಲಿ! ಆ ರಾಮಾವತಾರದಲ್ಲಿ ನೀನು ನನಗೆ ಯಾವ ಸಂಗತಿಯನ್ನು ಹೇಳಿದ್ದು ? ಸ್ಮರಿಸು. ಅಗ್ನಿಯಿಂದ ನಿರ್ಮಿತ ವೇದವತಿಯು ನನ್ನ ವಚನದಂತೆ ಈ ಅವತಾರದಲ್ಲಿ ನಾರಾಯಣಪುರದ ಆಕಾಶರಾಜನಲ್ಲಿ ಅಯೋನಿಜೆಕನ್ಯೆ ಯಾಗಿ ಬೆಳೆದಿರುವಳು. ಅವಳೇ ಈಗ ನಾನು ವಿವಾಹದಿಂದ ಬಂಧನ ಮಾಡಿ ಕೊಳ್ಳುವ ಪದ್ಮಾವತಿಯು. ದೇವಿ! ಆ ನಿನ್ನ ಕೋರಿಕೆಯಂತೆ ನಿನ್ನ ಸಮ್ಮುಖ ಹಾಗು ಸಮ್ಮತಿಯಿಂದಲೇ ಆಕೆಯನ್ನೇ ಲಗ್ನ ಮಾಡಿಕೊಳ್ಳುವೆನು, ಎಂದನು.

ಅದಕ್ಕೆ ಲಕ್ಷ್ಮೀದೇವಿಯು—ಶ್ರೀನಿವಾಸಪ್ರಭು! ನನಗೆಲ್ಲ ಹಿಂದಿನ ಅವತಾರದ ನೆನಹು ಪ್ರಕಾಶವಾಯಿತು! ನನ್ನ ವಚನದಂತೆ ಆ ಪದ್ಮಾವತಿಯನ್ನು ಅರ್ಥಾತ್ ವೇದವತಿಯನ್ನು ವೈವಾಹಿಕ ವಿಧಿಯಿಂದ ಸ್ವೀಕರಿಸಿ ನನ್ನ ವಚನ ವನ್ನು ಸಫಲಗೊಳಿಸು' ಎಂದು ಬೇಡಿ ಆತನನ್ನು ವಂದಿಸಿದಳು.

ಪ್ರಿಯ ಮಡದಿಯ ಮಾತುಗಳಿಂದ ಮನೋರಥವನ್ನು ಪೂರ್ಣಗೊಳಿಸಿ ಕೊಂಡ ಹಾಗು ಆನಂದಿತ ಶ್ರೀನಿವಾಸನು ಶೇಷಾಚಲದಲ್ಲಿ ಲಕ್ಷ್ಮೀ ಸಮಾಗಮ ದಿಂದ ಶೋಭಿಸಿದನು.

# ೧೨ನೆಯ ಅಧ್ಯಾಯ



## ಶ್ರೀನಿವಾಸ ಕಲ್ಯಾಣ ಮಹೋತ್ಸವ

ಶ್ರೀಮಹಾಲಕ್ಷ್ಮಿಯನ್ನು ಕರೆಯಿಸಿಕೊಂಡನಂತರ ಶ್ರೀನಿವಾಸನಿಗಾಗಿದ್ದ ವೈವಾಹಿಕ ಬಯಕೆಯು ಬಲಗೊಂಡಿತು ಆದಷ್ಟು ತೀವ್ರವೆ ಮದುವೆಯ ಸಾಹಿತ್ಯಗಳನ್ನೆಲ್ಲ ಸಂಗಳಿಸಿಕೊಂಡು ಮಂಗಲಕಾರ್ಯಾರಂಭವನ್ನು ಕೈಕೊಳ್ಳಬೇಕೆಂಬ ಇಚ್ಛೆಯಿಂದ ಆತನು ಲಗ್ನದ ಎಲ್ಲ ಹಿರಿಯತನದ ಭಾರವನ್ನು ಹೊತ್ತ ಬ್ರಹ್ಮನನ್ನು ಕರೆಯಿಸಿದನು ಆತನಿಗೆ 'ಇನ್ನು ಯಾವದೊಂದು ಕಾರ್ಯಕ್ಕೂ ಅವಕಾಶವನ್ನು ಮಾಡಕೂಡದು ಸಮಾರಂಭಕ್ಕಾಗಿ ಅವಶ್ಯ ಬೀಳುವ ಎಲ್ಲ ಪಾತ್ರೆ-ಪಡಗಗಳನ್ನು ಕಲೆಹಾಕು ' ಎಂದು ಆಜ್ಞಾಪಿಸಿದನು. ಬ್ರಹ್ಮನು ಸಂತೋಷವುಳ್ಳವನಾಗಿ ಗರುಡ ಮೊದಲಾದ ಓಡಾಟದ ವೀರರನ್ನು ಹುರಿದುಂಬಿಸಿ ದೊರೆಯತಕ್ಕ ಎಲ್ಲ ಕಡೆಗಳಿಂದಲೂ ಪಾತ್ರೆಯ ಸಾಮಾನು ನುಗಳನ್ನು ತರಿಸಿದನು. ತೀರ್ಥದ ಸೌಟು ಮೊದಲಾಗಿ ದೊಡ್ಡ ದೊಡ್ಡ ಕಟಾಹಗಳವರೆಗಿನ ಪಾತ್ರೆಗಳನ್ನು ತನಗೆ ಬೇಕಾಗುವಷ್ಟಕ್ಕಿಂತಲೂ ಹೆಚ್ಚಾಗಿ ದೊರಕಿಸಿ ಅವನ್ನೆಲ್ಲ ವ್ಯವಸ್ಥಿತವಾಗಿ ಇಟ್ಟರು. ಕೇವಲ ನೀರುತುಂಬುವ ನೂರಾರು ಪಾತ್ರೆಗಳನ್ನು ಸಾಲಾಗಿರಿಸಿ ನೀರು ನಿಡಿಯ ಕಾರ್ಯವನ್ನು ಒಪ್ಪಿಸಿಕೊಂಡ ವರುಣದೇವನು ನೋಡನೋಡುವಷ್ಟರಲ್ಲಿ ತುಂಬಿ ಸೂಸಿಬಿಟ್ಟನು. ಸತಿಸಾವಿತ್ರಿ ಮೊದಲಾದ ಮುತ್ತೈದೆಯರು ವೃದ್ಧಸುವಾಸಿನಿ ಅರುಂಧತಿಯ ಆಜ್ಞೆಯಂತೆ ವಸ್ತ್ರಾಲಂಕಾರ ವಿಭೂಷಿತರಾಗಿ ಸಿದ್ಧ-ಸೈಯಾನಸ ಸ್ತ್ರೀಯರೊಡನೆ ಕೂಡಿಕೊಂಡು ಒರಳಕ್ಕಿಯ ಪೂಜೆಯನ್ನು ಮಂಗಲಕರವಾದ ಗೀತೆಯೊಂದಿಗೆ ಮಂಜುಳವಾಗಿ ಹಾಡಿ ಮುಗಿಯಿಸಿದರು ಶ್ರೀಕೃಷ್ಣನು ಕಾಲಕಾಲಕ್ಕೆ ಧಾರಣಮಾಡಿದ ಅವತಾರಿಕ ಕಥೆಗಳಿಂದ ಯುಕ್ತವಾದ ಸಾಂಗತ್ಯಗಳನ್ನೂ ಪದಪದ್ಯಗಳನ್ನೂ ಹಾಡುತ್ತ ಶೋಭಾನೆಯ ಮಂಗಲ ಆರತಿಗಳಿಂದ ಶ್ರೀನಿವಾಸನ ಕಲ್ಯಾಣ ಮಹೋತ್ಸವದ ಕಾರ್ಯದ ಶುಭಾರಂಭವನ್ನು ನಡೆಯಿಸಿದರು.

ಆ ಬಳಿಕ ಪುರೋಹಿತರು ಸ್ವಸ್ತಿವಾಚನದೊಂದಿಗೆ ಶ್ರೀನಿವಾಸನಿಗೆ ಮಂಗಲಸ್ನಾನವನ್ನು ಮಾಡಿಸಲು ದೇವ ಸುವಾಸಿನಿಯರಿಗೆ ತಿಳಿಸಿದರು. ಶ್ರೀನಿವಾಸನ ಸೊಸಂದಿರಾದ ಗಾಯತ್ರಿ, ಸಾವಿತ್ರಿ, ಸರಸ್ವತಿ, ರತಿ ಮೊದಲಾದವರೆಲ್ಲ ಬಕುಲಾವತಿಯರ ಹೇಳಿಕೆಯಂತೆ ಸುರಗೀ ನಡಗರವನ್ನು ಸಿದ್ಧಗೊಳಿಸಹತ್ತಿದರು ನವರತ್ನಖಚಿತವಾದ ಪೀಠವನ್ನು ಅದರ ನಾಲ್ಕೂ ನಿಟ್ಟಿನಲ್ಲಿ ನಾಲ್ಕು ಬಂಗಾರದ ಕಲಶಗಳನ್ನಿಟ್ಟು ಅವುಗಳನ್ನೊಂದನ್ನೊಂದಕ್ಕೆ ಪಂಚಸೂತ್ರಗಳೊಂದಿಗೆ ಸುರಿಗೆಯನ್ನು ಸುತ್ತಿ ಅಲಂಕರಿಸಿದರು. ಆ ಬಳಿಕ ಅವರೆಲ್ಲರು ಸುಗಂಧೋದಕ ಪೂರಿತ ಪಾತ್ರೆಗಳನ್ನು ಸಿದ್ಧಪಡಿಸಿಟ್ಟುಕೊಂಡರು. ಅವರಲ್ಲಿ ಕೆಲ ದಿಟ್ಟೆಯರಾದ ಸುವಾಸಿನಿಯರು ಶ್ರೀನಿವಾಸನ ಮುಂದೆ ಬಂದು ಶ್ರೀನಿವಾಸಾ ! ಜಗದೀಶಾ ! ಮಂಗಲಸ್ನಾನಕ್ಕಾಗಿ ಏಳು. ಈ ಸೂತ್ರಾವೃತ ಮಣಿಮಯ ಪೀಠವನ್ನು ಅಲಂಕರಿಸು ನಿನ್ನ ಸುರಗಿಯ ಶುಭಸ್ನಾನದಿಂದ ನೇತ್ರಸಾಫಲ್ಯವನ್ನು ಹೊಂದುವ ಕುರಿತು ಅಮರನಾರಿಯರೆಲ್ಲ ಒಟ್ಟಾಗಿ ನಿರೀಕ್ಷಿಸಲು ನಿಂತಿರುವರು. ನಿನಗೆ ಪರಿಮಳಯುಕ್ತ ತೈಲವನ್ನು ಪೂಸಿ ಅಭ್ಯಂಗ ಸ್ನಾನಮಾಡಿಸುವದನ್ನು ನೋಡಲು ವೃದ್ಧಮಾತುಃಶ್ರೀ ಬಕುಲಾವತಿಯರು ಬಯಕೆಗೊಂಡು ಕುಳಿತಿರುವರು" ಎಂದು ಕರೆಯ ಹತ್ತಿದರು. ಬ್ರಹ್ಮನೂ ಅಲ್ಲಿಗೆ ಬಂದು ಶ್ರೀನಿವಾಸ ! ಇಂದಿನ ಮುಂದಿನ ಕೆಲಸಗಳಿಗೆ ಅವಕಾಶ ಹೆಚ್ಚು ಬೇಕಾಗುವದರಿಂದ ತೀವ್ರವೇ ನೀನು ಮಂಗಲಸ್ನಾನ ಮಾಡೇಳು ಸುವಾಸಿನಿಯರೆಲ್ಲ ಸುರಗಿಯನ್ನು ಸುತ್ತಿಕ್ಕಿಕೊಂಡು ನೀನು ಬರುವದನ್ನೇ ಕಾಯುತ್ತಿರುವರು ಬೇಗನೆ ಸುರಗಿಯಲ್ಲಿ ಕುಳಿತು ಎರೆದುಕೊಂಡುಬಿಡು" ಎಂದು ಹೇಳಿದನು ಆಗ ಶ್ರೀನಿವಾಸನು ಬ್ರಹ್ಮನನ್ನು ಕುರಿತು— ಎಲೈ ಪ್ರಾಜ್ಞ ! ನನ್ನದೇ ಆಗುವ ಲಗ್ನದಲ್ಲಿ ಮಮತೆಯಿಂದ ನನಗೆ ಆಶೀರ್ವಚನಗಳನ್ನುಚ್ಚರಿಸಿ ತೈಲಾಭ್ಯಂಗ ಸ್ನಾನವನ್ನೂ ಅಭಿಷೇಚನ ಕ್ರಿಯೆಯನ್ನೂ ಮಾಡಿಸುವವರು ನನ್ನವರೆನ್ನುವವರು ಯಾರೂ ಇಲ್ಲವಲ್ಲ ! ಬ್ರಹ್ಮನೇ ಹಡೆದ ತಾಯ್ತಂದೆಗಳಿಲ್ಲದ ಪ್ರೋಷಿತವೀಶನು ಕೂಡ ಮಾತಾ ಪಿತೃಗಳುಳ್ಳ ದೀನದರಿದ್ರನಿಗಿಂತಲೂ ಕಡೆ ಎಂದು ಹೇಳಿದರ ಅದು ತಪ್ಪಾಗುವದಿಲ್ಲ. ಈ ಮಾತನ್ನು ಇದೀಗ ನನ್ನ ಅವಸ್ಥೆಯಿಂದಲೇ ಕಂಡುಕೊಳ್ಳು. ಈ ನನ್ನ ಜನ್ಮವನ್ನು ನಾನೇ ಧಿಕ್ಕರಿಸಿಕೊಳ್ಳಬೇಕಾಗಿದೆ 'ಏಸುರೊಕ್ಕವಿದ್ದ

ರೇನು ? ಇಲ್ಲದಿದ್ದರೇನು ? ತಾಯ್ತಂದೆ, ಅಕ್ಕ-ತಂಗಿ, ಅಣ್ಣ-ತಮ್ಮ, ಅತ್ತೆ-ಮಾವ, ಬೀಗ-ಬಿಜ್ಜ, ಇವರು ಜೊತೆಯಿದ್ದರೇನೇ ಸೊಗಸು ಈಗ ನನ್ನ ಮನುತೆಯುರಾರೂ ಇರುವದಿಲ್ಲ. ಇನ್ನು ಮುಂದಿನ ನನ್ನ ಗತಿಯ ವೈಚಿತ್ರ್ಯವೇನಿದೆ ಎಂಬದನ್ನು ತಿಳಿಯಲಿಕ್ಕೆ ಬರಲಾರದು. ಧರಣೀಯಂತಿರುವ ತಾಯಿಯೂ ಆಕಾಶದಂತಿದ್ದ ತಂದೆಯೂ ನನಗೀ ಜನ್ಮದಲ್ಲಿ ಸಾಧ್ಯವಾಗಲಿಲ್ಲ ಆದ್ದರಿಂದ ಸುಖವಿಲ್ಲ ಮತ್ತು ನನಗೆ ಸದ್ಗತಿ ಪ್ರಾಪ್ತವಾಗಲು ಸುತರಿಲ್ಲ, ಪ್ರೀತಿಯನ್ನು ವರ್ಧಿಸುವ ಬಂಧುಗಳಿಲ್ಲ ವಿಷ್ಣುವಿಗೆ ಸಮನಾದ ಶ್ರೇಷ್ಠ ದೇವನಿಲ್ಲ ಒಟ್ಟಿನ ಮೇಲೆ ನಾನು ಜಗತ್ತಿನಲ್ಲಿರುವ ಯಾವ ವಸ್ತುಗಳೂ ನನ್ನನ್ನು ಕಂಡಿರಲಿಲ್ಲ ಅಥವಾ ನಾನೇ ಅವುಗಳನ್ನು ಕಾಣಲಿಲ್ಲ ಈ ಎಲ್ಲ ವಿಚಾರಗಳಿಂದ ಬ್ರಹ್ಮನೇ ! ನನ್ನ ಜೀವವೇ ವ್ಯರ್ಥವಲ್ಲವೇ ? ಅಂದಮೇಲೆ ನನ್ನಂಥ ತುಂಬ ದರಿದ್ರನಿಗೆ ಸುರಗಿಯಂತೆ ! ಸ್ನಾನವಂತೆ ! ಇದೆಲ್ಲಕ್ಕೂ ಮೇಲಾಗಿ ಮದುವೆಯಂತೆ ! ಬ್ರಹ್ಮಾ ನಾನೊಲ್ಲೆನಪ್ಪಾ ! ಒಲ್ಲೆ ಇವಾವವೂ ನನಗೆ ಬೇಕಾಗಿಲ್ಲ ಇನ್ನು ಇದಕ್ಕಿಂತಲೂ ಗೌಪ್ಯವಾದ ಸ್ನಾನವನ್ನು ಹುಡಿಕಿ ಅಲ್ಲಿಯೇ ನನ್ನ ಜನ್ಮದ ಇತಿಶ್ರೀ.... ಎಂದು ನುಡಿಯುವಷ್ಟರಲ್ಲಿ ಬ್ರಹ್ಮರುದ್ರರು ಒಂದಾಗಿ—ಶ್ರೀನಿವಾಸ ! ಇದೇನು ಬಡಬಡಿಸುವಿ ? ಇದೆಲ್ಲವು ನಿನ್ನ ಮಾಯಾರೂಪದಲ್ಲಿ ನಮ್ಮನ್ನೆಲ್ಲ ಮರುಳುಗೊಳ್ಳಿಸುವ ನಿನ್ನ ಗತ್ತು. ನೀನಾಡುವ ಮಾತುಗಳಿಂದರ ಸುಳ್ಳಿನ ಸುರಿಮಳೆ ಬ್ರಹ್ಮನು ಆತನಿಗೆ—' ನಿನಗೆ ಮಕ್ಕಳಿಲ್ಲವೇ ? ಶ್ರೀನಿವಾಸ ! ಹಾಗಾದರೆ ನಾನಾರು ? ಮನ್ಮಥನು ನಿನಗೇನಾಗಬೇಕು ? ಈ ಸಂಬಂಧಗಳನ್ನೆಲ್ಲ ಹರಿದೊಗೆವೆಯಾ ? ನಿನ್ನ ಮೊಮ್ಮಗ ಈ ರುದ್ರನು ಮಾತ್ರ ನೀನು ಮೊಮ್ಮಗನೆಂದು ತಿಳಿಯದಿದ್ದರೆ ಮಾತ್ರ ಆತನೇ ದರಿದ್ರನು ಇವರಲ್ಲದೆ ಮರಿಮಗ ಷಡಾನನನೂ, ಮರಿಮಗ ವಾಯುದೇವನೂ ಸೊಸಂದಿರಾದ ಭಾರತಿ, ಸಾವಿತ್ರಿ ಮೊದಲಾದವರೂ ನಿನ್ನಿಂದ ಹೊರತರಾದರೆ ? ಶ್ರೀನಿವಾಸ ! ನೀನೇನು ತಿಳಿದು ನುಡಿಯುವಿ ? ಪರಮ ಪುರುಷನಾದ ನೀನು ವರಪರಮಲಕ್ಷ್ಮೀದೇವಿಯನ್ನು ಇದುವರೆಗೆ ಮರೆತುಬಿಟ್ಟಂತೆ ಇನ್ನು ಮರೆಯುವದು ಶಕ್ಯವಿಲ್ಲ ಈಗ ನೀನಾಡುವ ನುಡಿಗಳಲ್ಲಿ ಕೇವಲ ಹುಡುಗಾಟಿಕೆ, ಅಲ್ಲಲ್ಲ ! ಕ್ರೀಡೆಯ ಮಾತುಗಳೆಂದು ನಾನು ತಿಳಿಯುತ್ತೇನೆ. ಅದೇನೇ ಇರಲಿ, ಇನ್ನು ಏಳು ನಿನಗೆ ಅಭ್ಯಂಗನವನ್ನು ಮಾಡಿಸಲು ಮಾತೆಯಿಲ್ಲ

ದಿದ್ದರೂ ಜಗನ್ಮಾತೆಯಾದ ಈ ಲಕ್ಷ್ಮೀದೇವಿಯಿಂದ ಅಭ್ಯಂಗನ ಕ್ರಿಯೆಯನ್ನು ಮಾಡಿಸಿಕೊಳ್ಳು ಅದರಲ್ಲಿ ನಾಚಿಕೆಯೇಕೆ ? ಎಂದು ನುಡಿಯಲು ಆಗ ಲಕ್ಷ್ಮೀ ಸಹಿತ ಶ್ರೀನಿವಾಸರಲ್ಲಿ ಒಂದು ಮಂದಹಾಸ್ಯವು ವಿದ್ಯುಲ್ಲತೆಯಂತೆ ಮಿಂಚಿ ಮಾಯವಾಯಿತು ! ಇಷ್ಟೇಅಲ್ಲ ಬ್ರಹ್ಮನ ಆ ವಿಚಾರವು ಅವರಿಬ್ಬರಿಗೂ ಮನಸ್ಸಿಗೆ ಒಪ್ಪಿತವಾದಂತಾಯಿತೆಂದು ಹೇಳಬಹುದು.

ಅಷ್ಟರಲ್ಲಿ ಶ್ರೀನಿವಾಸನು ತನ್ನ ಪತ್ನಿ ಲಕ್ಷ್ಮೀದೇವಿಗೆ ಸಂಕೇತದಿಂದ ತನ್ನ ಮನೋಭಿಪ್ರಾಯವನ್ನು ತಿಳಿಸಲು ಕೂಡಲೆ ಚಾಣಾಕ್ಷಳಾದ ಆಕೆಯು ಎದ್ದು— ದೇವಾ ! ನಿನ್ನ ಇಂಗಿತವನ್ನರಿತೆ ನನ್ನಿಂದಲೇ ನೀನು ಅಭ್ಯಂಗ್ಯವನ್ನು ಬಯಸುವಿಯಲ್ಲವೇ ? ನಾನು ಅದಕ್ಕೆ ಸದಾಸಿದ್ಧಳಾಗಿರುವೆ. ಏಳಿರಿ. ಪೀಠವನ್ನು ಅಲಂಕರಿಸಿರಿ ನಾನು ನಿಮಗೆ ಎಣ್ಣೆ ಪೂಸಿ ಎರೆಯುವದನ್ನು ನನ್ನ ಸೇವೆಯೆಂದೇ ಭಾವಿಸಿರಿ ಎಂದು ಹೇಳಿದಳು

ಲಕ್ಷ್ಮೀದೇವಿಯಾಡಿದ ನುಡಿಗಳಿಂದ ಶ್ರೀನಿವಾಸನ ವಾತ್ಸಲ್ಯವು ಕುಂರಿತವಾಯಿತು. ಆತನು ಇನ್ನೊಂದು ನುಡಿ ನುಡಿಯದೆ ಆಗಲೇ ಹೋಗಿ ಸುರಗಿಯ ಪೀಠದಮೇಲೆ ಕುಳಿತನು ಪುರೋಹಿತರಿಂದ ಸ್ನಾನಕ್ಕೆ ಆಜ್ಞೆ ಪಡೆದನು ಲಕ್ಷ್ಮಿಯು ಪರಿಮಳಯುಕ್ತ ತೈಲದಿಂದ ತುಂಬಿದ ಸುವರ್ಣ ಪಾತ್ರೆಯನ್ನು ಕೈಯಲ್ಲಿ ತಕ್ಕೊಂಡು ಬಂದು ಶ್ರೀನಿವಾಸನಿಗೆ ಎಣ್ಣೆ ಹೂಸಿದಳು. ಹಾಗು— 'ಶ್ರೀನಿವಾಸ ! ಬಹುಜನ ಗಂಡುಮಕ್ಕಳನ್ನು ಹಡೆ; ಧನವಂತನಾಗು! ಚತುರ್ದಶಲೋಕವನ್ನಾಳು! ಎಂದು ಹಾರೈಸಿ ಹರಕೆಯಿತ್ತು ತೈಲವನ್ನಿಕ್ಕಿ ಶರೀರವನ್ನೆಲ್ಲ ಎಣ್ಣೆಯಿಂದ ಪೂಸಿದಳು. ಸುಗಂಧಪೂರಿತ ಕಲಶೋದಕದಿಂದ ಎರೆದು ತನ್ನ ಧನ್ಯತೆ ಬೀರಿದಳು ಬಳಿಕ ಸುವಾಸಿನಿಯರು ಶ್ರೀನಿವಾಸನಿಗೆ ಅಭಿಷೇಕ—ಕದಲಾರತಿಗಳನ್ನು ಮಾಡಿ ಹರಸಿದಳು. ನಂತರ ಶ್ರೀನಿವಾಸನು ಎಲ್ಲ ಅಲಂಕಾರಗಳಿಂದ ಯುಕ್ತನಾಗಿ ಬಂದು ಮಣಿಮಯ ದಾಸನವನ್ನು ಅಲಂಕರಿಸಿದನು ಆಗ ಇಂದ್ರಾದಿಸುರರೆಲ್ಲರೂ, ಋಷಿಗಳೂ; ದಿಕ್ಪಾಲಕರೂ ಮೊದಲಾಗಿ ಎಲ್ಲರೂ ಆತನನ್ನು ಕಣ್ಣುತುಂಬ ನೋಡಿ ಸಂತೋಷಬಟ್ಟರು.

ಆಬಳಿಕ ಶ್ರೀನಿವಾಸನು ಅನೇಕ ಬೆಲೆಯುಳ್ಳ ಆಭರಣಗಳಿಂದ ವಿಭೂ

ಷಿತನಾಗಿ ಕಶ್ಯಪಾದಿಋಷಿಗಳಿಗೆ ವಂದಿಸಿ ಸಂಧ್ಯಾವಂದನೆ ಮೊದಲಾದ ಧಾರ್ಮಿಕ ಕ್ರಿಯೆಗಳನ್ನೆಲ್ಲ ಮುಗಿಯಿಸಿದನು

ಕುಲಗುರು ವಶಿಷ್ಠರಿಂದ ಪುಣ್ಯಾಹವಾಚನವು ಯಥಾ ಯೋಗ್ಯವಾಗಿ ನೆರವೇರಿಸಲ್ಪಟ್ಟಿತು ಬ್ರಹ್ಮನು ಕೂಡಿದ ವಿಪ್ರವರ್ಗವನ್ನೆಲ್ಲ ಸಂತುಷ್ಟ ಪಡಿಸಿದನು. ಕಲ್ಯಾಣೋತ್ಸವಕ್ಕಾಗಿ ಬಂದ ದೇವತೆಗಳೆಲ್ಲ ಶ್ರೀನಿವಾಸನಿಗೆ ಧನ—ಕನಕ–ವಸ್ತ್ರಗಳನ್ನು ಆಹೇರ, ಮುಯ್ಯಿಗಳ ರೂಪದಿಂದ ಅರ್ಪಿಸಿದರು.

ಬಳಿಕ ವಶಿಷ್ಠರು ಶ್ರೀನಿವಾಸನ ಕುಲದೇವತೆಯಾದ 'ಶಮಿ'ವೃಕ್ಷಕ್ಕೆ ಆತನನ್ನು ಕರೆದುಕೊಂಡು ಹೋದರು ಅಲ್ಲಿ ವಿಧಾನೋಕ್ತವಾಗಿ ಶಮಿ ವೃಕ್ಷದ ಪೂಜೆಯನ್ನು ಆತನಿಂದ ಮಾಡಿಸಿದರು. ಆಗ ಶ್ರೀನಿವಾಸನು ಶಮಿ ದೇವತೆಯನ್ನು ಸ್ತುತಿಸುತ್ತ "ಶಮೀದೇವಿ! ನಿನ್ನಿಂದ ವೈರಿಗಳು ನಾಶಹೊಂದುವರು ನೀನು ಅರ್ಜುನನ ಧನುಸ್ಸನ್ನು ಧರಿಸಿರುವಿ, ಶ್ರೀರಾಮಚಂದ್ರನಿಗೆ ಪ್ರಿಯಳಾಗಿರುವಿ. ನೀನು ನನ್ನ ಸಂಚಿತಪಾಪಗಳನ್ನು ಪರಿಹಾರಮಾಡು. ಸದ್ಯ ನನಗೆ ಸುಪ್ರಾಪ್ತವಾದ ವೈವಾಹಿಕ ಪ್ರಸಂಗವನ್ನು ನಿರ್ವಿಘ್ನತೆಯಿಂದ ಸಾಂಗಗೊಳಿಸು. ಲಗ್ನಕಾರ್ಯದಲ್ಲಿ ಏನೊಂದು ಎರಡೂಪಕ್ಷಗಳಲ್ಲಿ ಮನಸ್ತಾಪವಾಗದಂತೆ ಕೊನೆಗಾಣಿಸು" ಎಂದು ಬೇಡಿಕೊಂಡನು ಹಾಗು ಅದರ ಸಣ್ಣ ಕೊಂಗೆಯೊಂದನ್ನು ತಂದನು ಬಳಿಕ ಆತನು ತನ್ನ ಕುಲದೇವತೆಯಾದ ಶಮಿವೃಕ್ಷದ ಶಾಖೆಯನ್ನು ಎಲ್ಲಿ ಸ್ಥಾಪಿಸುವದು? ಎಂದು ಗುರುವಶಿಷ್ಠರನ್ನು ವಿಚಾರಿಸಿದನು ಅವರ ಹಾಗು ತನ್ನ ವಿಚಾರದಿಂದ ಕುಲದೇವತೆಯನ್ನು ವರಾಹಮೂರ್ತಿಯ ಮಂದಿರದಲ್ಲಿ ಸ್ಥಾಪಿಸವ ನಿರ್ಧಾರ ಮಾಡಿಕೊಂಡು ಅದರಂತೆ ಆ ಮೂರ್ತಿಯಹತ್ತಿರ ವಿಚಾರಕ್ಕಾಗಿ ಹೋದರು.

ಶ್ರೀನಿವಾಸನು— "ವರಾಹಸ್ವರೂಪಿ ಮಹಾನುಭಾವನೇ, ದೇವ—ಗುರುಗಳ ಅನುಗ್ರಹದಿಂದ ನಾನು ವಿವಾಹವನ್ನು ಮಾಡಿಕೊಳ್ಳುವ ಅಪೇಕ್ಷೆಯುಳ್ಳವನಾಗಿರುವೆ ನೀವು ನಿಮ್ಮ ಧರ್ಮಪತ್ನಿ ಧರಾದೇವಿಯಿಂದಲೂ ನಿಮ್ಮ ಕಿಟಿಗಳ ಗಡಣದಿಂದಲೂ ಬಂದು ನನ್ನ ಕಲ್ಯಾಣೋತ್ಸವವನ್ನು ಸಹಾನುಭೂತಿ ಪೂರ್ವಕವಾಗಿ ಸಾಂಗಗೊಳಿಸಿ ಪೂರ್ಣಮಾಡುವಿರೆಂದು ಆಶಿಸುವೆನು. ನೀವು ನನ್ನ ಪ್ರೇಮದ ಹಿತಚಿಂತಕರಾದುದರಿಂದ ನಾನೇನು

ವಿಶೇಷ ಆಗ್ರಹಗೊಳಿಸಲಾರೆ. ನಿಮ್ಮ ಆಗಮನದಿಂದ ಮಂಗಲ ಕಾರ್ಯವು ಹೆಚ್ಚು ಶೋಭಾಯಮಾನವಾಗುವದೆಂದು ನನ್ನ ಭಾವನೆ– ಸುಜ್ಞರಾದ ನಿಮಗೆ ಹೆಚ್ಚು ಹೇಳಿಕೊಳ್ಳುವದು ಅಗತ್ಯವಿಲ್ಲ. ಈ ನನ್ನ ಮಂಗಲಕಾರ್ಯದಲ್ಲಿ ನೀವು ಭಾಗತೆಗೆದುಕೊಂಡು ಯಶಸ್ಸನ್ನು ಪಡೆಯುವಿರೆಂದು ಆಶಿಸುತ್ತೇನೆ" ಎಂದು ಶ್ರೀನಿವಾಸನು ಪ್ರತ್ಯಕ್ಷವಾಗಿ ಆಮಂತ್ರಣವಿತ್ತನು ಆ ಆಮಂತ್ರಣವಾಕ್ಯಗಳನ್ನು ಕೇಳಿ ವರಾಹಮೂರ್ತಿಯು ಶ್ರೀನಿವಾಸ! ನಿನ್ನ ಮದುವೆಯ ವಾರ್ತೆಯಿಂದ ನಮಗೆಲ್ಲರಿಗೂ ಅತ್ಯಂತ ಹರುಷವಾಯಿತು. ನಮ್ಮಕ್ಕಿಂತಲೂ ಹೊಟ್ಟೆಯ ಮಗನೆಂದೇ ಭಾವಿಸಿ ನಿನ್ನನ್ನು ಸಲುಹಿದ ಹಾಗು ಹಲವು ಬಯಕೆಯಿಂದ ನಿನ್ನ ಸೇವೆ ಕೈಕೊಂಡ ಆ ಬಕುಲಾವತಿದೇವಿಗೆ ಅತ್ಯಂತ ಆನಂದವಾಗಿರಲಿಕ್ಕೆ ಸಾಕು ನಿನ್ನ ಲಗ್ನದಲ್ಲಿ ಕನ್ಯಾ ನಿಶ್ಚಯದಿಂದ ಮೊದಲಾಗಿ ಪ್ರಮುಖ ಭಾಗವನ್ನು ತೆಗೆದುಕೊಂಡು ಓಡಾಡುವ ಆ ನಮ್ಮ ಬಕುಲಾವತಿ ಇದ್ದರೆ ನಾವೆಲ್ಲರೂ ನಿನ್ನ ಲಗ್ನದಲ್ಲಿ ಇದ್ದಂತಾಯಿತೆಂದು ತಿಳಿದುಕೊಳ್ಳು— ನಿನಗೆ ವೈವಾಹಿಕ ಸುಖವು ಪ್ರಾಪ್ತವಾಗಲಿ, ನಿನಗೂ ನಿನ್ನನ್ನು ಪ್ರೇಮದಿಂದ ವರಿಸಿ ನಿನ್ನ ಗೃಹಕ್ಕೆ ಭೂಷಿತಳಾಗಿ ಬರುವ ಪದ್ಮಾವತಿದೇವಿಗೂ ನಮ್ಮ ಋಷಿಗಣಗಳ ಪರಿಯಿಂದ ನಾನೇ ಶುಭಮಂಗಲವನ್ನು ಕೋರುತ್ತೇನೆ– ಶ್ರೀನಿವಾಸ, ನಾನು ಇಲ್ಲಿಯ ಸ್ಥಾನದಿಂದ ಅಂತರಿಸಿ ಬೇರೆಕಡೆಗೆ ಹೋಗುವದು ದುಸ್ತರವಾದುದರಿಂದ ನಿನ್ನ ಆಮಂತ್ರಣದಂತೆ "ನಾನು ನಿನ್ನ ಲಗ್ನಕ್ಕೆ ಬಂದಿರುವೆನು" ಎಂದು ಅರಿತು ಲಗ್ನಕಾರ್ಯವನ್ನು ನೆರವೇರಿಸಿಕೊಂಡು ಬಾ! ಶ್ರೀನಿವಾಸ! ಎಲ್ಲಸ್ಥೂ ನಿನಗೆ ಸುಖವಾಗಲಿ, ಹೋಗಿಬರು" ಎಂದು ನುಡಿದನು

ಶ್ರೀನಿವಾಸನು ವರಾಹಮೂರ್ತಿಯಲ್ಲಿ ಈಗ ಬಂದ ಮುಖ್ಯ ಕಾರ್ಯವೆಂದರೆ ಅವನ ಮಂದಿರದಲ್ಲಿ ದೇವತಾ ಪ್ರತಿಷ್ಠಾಪನೆಗಾಗಿ ಆತನ ಅಪ್ಪಣೆ ಪಡೆದುಕೊಳ್ಳುವದಕ್ಕೆ ಮಾತ್ರವಿತ್ತು. ಆದರೆ ಒಮ್ಮೆಲೇ ಆ ಮಾತಿನ ಪ್ರಸ್ತಾಪವೆತ್ತದೆ, ಲಗ್ನದ ಆಮಂತ್ರಣವನ್ನು ಕೊಡುವದನ್ನು ಮುಂದೆ ಮಾಡಿಕೊಂಡು [illegible] ದ [illegible] ರೀ ಆ [illegible] ಗದ ಒಂದೇ ಸಂಗತಿಯು ಮುಗಿ[illegible] [illegible] ಮೂರ್ತಿಯು ಶ್ರೀನಿವಾಸನಿಗೆ ಹೋಗಿಬರಲು ನಿರೋಪಕೊಟ್ಟನು ಆದ್ದರಿಂದ ಮುಖ್ಯ ಮಾತಿನ ವಿಚಾರವು ಹಾಗೇ ಉಳಿ

ಯಿತು ಮೂರ್ತಿಯನ್ನು ದೇವಸ್ಥಾಪನೆಗಾಗಿ ಕೇಳಬೇಕೇ ಕೇಳಬಾರದೇ ಎಂಬ ಸಂದಿಗ್ಧ ವಿಚಾರದಲ್ಲಿ ತೊಳಲಾಡಿ ಕಡೆಗೆ ಶ್ರೀನಿವಾಸನು— "ಒಳ್ಳೇದು ಮೂರ್ತಿ ನನ್ನ ಇನ್ನೊಂದು ವಿನಂತಿಯೇನಂದರೆ—ಮದುವೆಗಾಗಿ ಶಾಸ್ತ್ರವಿಧಿಯ ಪ್ರಕಾರ ಕುಲದೇವತೆಯ ಪ್ರತಿಷ್ಠಾಪನೆಯನ್ನು ಮಾಡಿಕೊಳ್ಳಬೇಕಾಗುವದು. ನನ್ನದು ಹುತ್ತಿನಮನೆ ಒಬ್ಬರಲ್ಲದ ಇನ್ನೊಬ್ಬರನ್ನು ಆ ಮನೆಯು ಒಳಗೆ ಕೊಳ್ಳುವದಿಲ್ಲ ಮೇಲಾಗಿ ಲಗ್ನಕ್ಕಾಗಿ ಸುರಲೋಕದಿಂದ ನನ್ನ ಬಂಧು—ಬಾಂಧವಾದಿಗಳೆಲ್ಲ ಬಂದುದರಿಂದ ಈ ಶೇಷಾಚಲದಲ್ಲಿ ಕಾಲಿಡಲು ಕೂಡ ಸ್ಥಳವಿಲ್ಲದಷ್ಟು ದಟ್ಟಣೆಯುಂಟಾಗಿದೆ ವಿಶ್ವಕರ್ಮನಿಂದ ನಿರ್ಮಿತ ಗೃಹಗಳೂ ನಭೋಮಂಡಲವನ್ನು ಕಿಕ್ಕಿರಿದು ತುಂಬಿವೆ ಹೀಗಾಗಿ ಕುಲದೇವತೆಯ ಪ್ರತಿಷ್ಠಾಪನೆಗೆ ಸ್ಥಳಾವಕಾಶವೇ ಉಳಿದಿಲ್ಲ ಆದುದರಿಂದ ನಿನ್ನ ಮಂದಿರದಲ್ಲಿಯೇ ಸ್ಥಾಪಿಸುವ ನನ್ನ ಗುರುಗಳ ವಿಚಾರದಿಂದ ನಿನ್ನಮುಂದೆ ಇಟ್ಟಿರುವೆ. ಇದಕ್ಕೆ ನಿನ್ನ ಒಪ್ಪಿಗೆ ದೊರೆಯುವದೇ? ಎಂದು ಕೇಳಿದನು. ಮೂರ್ತಿಯು ಇನ್ನೊಂದು ವಿಚಾರಮಾಡದೆ "ಅವಶ್ಯವಾಗಿ ನಿಮ್ಮ ದೇವತಾಸ್ಥಾಪನೆಗಾಗಿ ನನ್ನ ಮಂದಿರವನ್ನು ಉಪಯೋಗಿಸಿಕೊಳ್ಳಿರಿ ಮಂಗಲಕಾರ್ಯ ಸಮಾಪ್ತಿಯಾದನಂತರ ನನ್ನ ಮಂದಿರವನ್ನು ನನ್ನ ವಶಕ್ಕೆ ಕೊಟ್ಟುಬಿಡಿರಿ" ಎಂದು ಹೇಳಿ ತನ್ನ ಸೇವಕರಿಂದ ಆ ಮನೆಯನ್ನೆಲ್ಲ ಖಾಲಿ ಮಾಡಿಸಿ ಶ್ರೀನಿವಾಸನಿಗೆ ಒಪ್ಪಿಸಿದನು. ಬಳಿಕ ಶ್ರೀನಿವಾಸನು ಬಂಗಾರದ ಒಂದು ಕಲಶದಲ್ಲಿ ಮುತ್ತು ರತ್ನಾದಿಗಳನ್ನು ತುಂಬಿ ಅದನ್ನು ನವವಸ್ತ್ರದಿಂದ ಆಚ್ಛಾದಿಸಿ ವಿಧಿಯುಕ್ತ ಪೂಜೆ—ಪುರಸ್ಕಾರಗಳಿಂದ ಮೂರ್ತಿಯ ಮಂದಿರದಲ್ಲಿ ದೇವಸ್ಥಾಪನೆಯನ್ನು ಮಾಡಿ ತನ್ನ ವಲ್ಮೀಕ ಪ್ರದೇಶಕ್ಕೆ ಬಂದನು ಲಗ್ನದ ಪೂರ್ವವಿಧಿಗಳಲ್ಲಿ ಪುಣ್ಯಾಹವಾಚನದ ತರುವಾಯ ಕುಲದೇವತಾ ಪ್ರತಿಷ್ಠಾಪನೆಯ ವಿಧಿಯು ಅನಾಯಾಸವಾಗಿ ಕೊನೆಗಂಡಿತು.

ಇನ್ನು ಮದುವೆಗಾಗಿ ಆಕಾಶರಾಜನಿಂದ ಕರ ಬಂದ ಕೂಡಲೆ ಎಲ್ಲರೊಡನೆ ಶ್ರೀನಿವಾಸನು ಹೊರಡುವದನ್ನು ಗೊತ್ತುಮಾಡಿಕೊಂಡಿದ್ದನು ಆಕಾಶರಾಜನಿಂದ ಇನ್ನೂ ಕರ ಬರಲಿಲ್ಲ ದಿನದ ಮೊದಲಿನ ಪ್ರಹರ ಮುಗಿದು ಹೋಗಿದೆ ಮದುವೆಗಾಗಿ ಕೂಡಿದ ಸಹಸ್ರಾರು ಸುರಗಣಗಳೂ, ಮಾನವರೂ ಹೊತ್ತು ಬಹಳಾದುದರಿಂದ ಹಸಿದು ತೀವ್ರವೇ ಊಟದೊರೆಯ

ಬೇಕೆನ್ನುವರು ಹಿರಿಯತನವನ್ನೆಲ್ಲ ಹೊತ್ತ ಬ್ರಹ್ಮನು ಶ್ರೀನಿವಾಸನಿಗೆ ಅಡಿಗೆಯ ವಿಚಾರವನ್ನು ಕೇಳಿದನು ಶ್ರೀನಿವಾಸನು— ಬ್ರಹ್ಮನೆ! ನಾವು ಹೇಗೂ ಆಕಾಶರಾಜನಲ್ಲಿಗೆ ಹೋಗಬೇಕಲ್ಲೇ? ಏನೂ ಅವಕಾಶಮಾಡದೆ ನಾವು ಸ್ವಲ್ಪ ಹೊತ್ತು ಮೊದಲಿಗೇ ಹೊರಟು ಅಲ್ಲಿಗೆ ಹೋಗೋಣ ನಮಗೆಲ್ಲರಿಗೂ ಆಕಾಶರಾಜನ ಆಮಂತ್ರಣ ಬಂದೇ ಬರುತ್ತದೆ ನಿನ್ನ ಅಭಿಪ್ರಾಯದಂತೆ ಇಲ್ಲೇ ಅಡಿಗೆಯನ್ನು ಮಾಡಬಹುದು ಆದರೆ ನಮ್ಮಲ್ಲಿ ಎಲ್ಲ ಪದಾರ್ಥಗಳ ಸಂಚಿತವಿರಲಿಲ್ಲ ಆಹಾರ ಪದಾರ್ಥಗಳ ಕೊರತೆ ಬೀಳಬಹುದು ಇನ್ನೂ ಹಲವು ಬಗೆಯಿಂದ ನಮ್ಮ ಪನಿಂದು ಅನುಕೂಲವಾಗುವದಿಲ್ಲ ಆದ್ದರಿಂದ ಇಲ್ಲಿ ಊಟದ ವಿಚಾರವನ್ನೆತ್ತಬೇಡ ಎಂದು ತಿಳಿಸಿದನು ಆದರೆ ಬ್ರಹ್ಮನು 'ಶ್ರೀನಿವಾಸ'ಪ್ರಜಾಪಾಲನ-ದೇವಸ್ಥಾಪನೆಗಳಾಗಿ ಊಟಮಾಡದ ಊರಿಂದ ಅಂತರಿಸಿ ಹೋಗುವದು ಸರಿಯಲ್ಲ ಅದಕ್ಕಾಗಿ ಇಲ್ಲಿಯೇ ಪಾಕಸಿದ್ಧತೆಯಾಗಿ ಎಲ್ಲರ ಭೋಜನವು ಅವಶ್ಯವಾಗಿ ಆಗಲೇಬೇಕಾಗುವದು, ಎಂದು ನುಡಿದನು. ಆಗ ಶ್ರೀನಿವಾಸನು—ಬ್ರಹ್ಮನೇ ನಾನು ಹತ್ತು ಸಾವಿರ ವರುಷಗಳ ದೀರ್ಘ ಕಾಲಾವಧಿಯನ್ನು ಇಲ್ಲಿ ಸೂಕ ಕೈ-ಬಾಯಿಯಲ್ಲಿಯ ಗಂಟನ್ನೆಲ್ಲ ಕಳೆದುಕೊಂಡು ಈಗ ಕಂಗಾಲಸ್ಥಿತಿಗೆ ಮುಟ್ಟಿರುವದು ನಿನಗೆ ತಿಳಿದಿರಲಿಲ್ಲೇ? ಬುದ್ಧಿ ಪೂರ್ವಕವಾಗಿ ನನ್ನನ್ನು ಅಣಕಿಸುವದಕ್ಕಾಗಿ ಕೂಡಿದ ದೇವಮಾನವ ಗಣಕ್ಕೆಲ್ಲ ಭೋಜನದ ಸಿದ್ಧತೆಯನ್ನು ಮಾಡಿಸುವದೆಂದು ಬೊಗಳುವಿ. ಅದು ಹೇಗೆ ಸಾಧ್ಯವಾಗುವದು? ನನ್ನ ಸ್ಥಿತಿಯನ್ನರಿತು ಊಟದ ಮಾತೆತ್ತುವದು ನಿನ್ನ ಮೂರ್ಖತನವಲ್ಲವೇ? ಏನೇ ಆದರೂ ನಾವು ವರಪಕ್ಷದವರು. ಕನ್ಯೆಯ ತಂದೆಯು ನಮಗೆ ಎಲ್ಲ ರೀತಿಯಿಂದಲೂ ವರಾಮರಿಕೆ ಮಾಡುವನು. ಅದೇ ಅವನ ಧರ್ಮವು ಆತನು ಕೊಡುವ ಮರ್ಯಾದೆಯನ್ನು ಇನ್ನಿಷ್ಟು ಹೆಚ್ಚಾಗಿ ಬೇಡಿಕೊಂಡು ಸ್ವೀಕರಿಸುವದು ವರಪಕ್ಷದವರಾದ ನಮ್ಮ ಧರ್ಮ. ಇದಾವದನ್ನೂ ನೀನು ಅರಿಯದೆ ಊಟ ಊಟವೆಂದು ಬಡಬಡಿಸುವಿಯಲ್ಲ! ಎಂದು ಗದ್ದರಿಸಿದನು ಶ್ರೀನಿವಾಸನ ಯುಕ್ತಿವಾದಕ್ಕೆ ಬ್ರಹ್ಮನು ಉತ್ತರ ಕೊಡದ ತಾನು ಸ್ವೀಕರಿಸಿದ ಹಿರಿಯತನದ ಅನಧಿಕಾರವನ್ನು ಹಳಿದುಕೊಂಡು ಸುಮ್ಮನಾದನು. ಆಗ ಕೈಲಾಸಗಿರಿಯ ಶಂಕರನು ಎದ್ದು ಶ್ರೀನಿವಾಸನನ್ನು ಕುರಿತು—ದೇವೇಶ! 'ಮನೆಕಟ್ಟಿನೋಡು, ಮದುವೆ ಮಾಡಿನೋಡು'

ಎಂಬಲೋಕೋಕ್ತಿಯನ್ನು ನೀನು ಅರಿತಿರಲಿಲ್ಲವೇ? ಪುಣ್ಯಾಹವಾಚನಾದಿ ಮಂಗಲ ವಿಧಿಗಳನ್ನು ಮುಗಿಯಿಸಿಕೊಂಡು ಹಸಿದ ಹೊಟ್ಟೆಯಿಂದ ಪ್ರಯಾಣ ಬೆಳೆಸುವದು. ಯುಕ್ತವಲ್ಲೆಂದು ಬ್ರಹ್ಮನಾಡಿದ ನುಡಿಯು ಯೋಗ್ಯವಿದೆ. ಸಾಹಿತ್ಯಗಳ ಕೊರತೆಯಿದ್ದರೇನು? ಲಗ್ನಮಾಡಿಕೊಳ್ಳಲು ಸಿದ್ಧನಾದ ಮೇಲೆ ಖರ್ಚು-ವೆಚ್ಚಕ್ಕೆ ಹಿಂಜರಿದರೆ ಕಾರ್ಯವು ಕೊನೆಗಾಣುವದೆಂತು? ಅನ್ಯರಲ್ಲಿ ಸಾಲವನ್ನಾದರೂ ತಂದು ಕಾರ್ಯಭಾಗವನ್ನು ನಾಂಗಮಾಡಿಕೊಳ್ಳುವದು ಮರ್ಯಾದೆಗೆ ಭೂಷಣವು. ಎಂದು ತನ್ನ ಅಭಿಪ್ರಾಯವನ್ನು ಪ್ರಕಟ ಪಡಿಸಿದನು.

ಬ್ರಹ್ಮನ ಹಾಗು ಶಂಕರನ ಮಾತುಗಳಿಂದ ಶ್ರೀನಿವಾಸನಿಗೆ ತುಸು ಕೋಪ ಉಂಟಾಗಿ— 'ಶಂಕರ! ಅಜ್ಞನಾದ ನಿನಗೆ ಏನೂತಿಳಿಯದು ಸಾಲವನ್ನು ತಂದಾದರೂ ಕಾರ್ಯ ಮುಗಿಯಿಸಬೇಕನ್ನುವ ನೀನು—' ಸದ್ಯದ ನನ್ನ ದರಿದ್ರಾವಸ್ಥೆಯಲ್ಲಿ ಸಾಲಕೊಡುವರಾರು? ಇದರ ವಿಚಾರಮಾಡ ಬಾರದೆ? ಎಂದು ನುಡಿದನು ಆಗ ಶಂಕರನು ನೀನು ಋಣಪಡೆಯಲು ಸಿದ್ಧನಿದ್ದರೆ ನಿನಗೆಷ್ಟುಸಾಲಬೇಕು? ಧನಾಧಿಪತಿ ಕುಬೇರನಲ್ಲಿ ಅಗಣಿತ ದ್ರವ್ಯವಿದೆ ನಿನಗಷ್ಟೇ ಏಕ? ನಿನ್ನಂಥ ಹಲವಾರು ಜನರಿಗೆ ಸಾಕಷ್ಟು ಸಾಲಕೊಡುವಷ್ಟು ಧನವು ಆತನ ಬೊಕ್ಕಸದಲ್ಲಿರುವದು ಕೇವಲ ನಿನಗಾಗಿ ದ್ರವ್ಯಬೇಕಾದುದರಿಂದ ನೀನು ಆತನನ್ನು ಬೇಡಿದರಮಾತ್ರ ದೊರೆಯಬಹುದು. ಈ ಜಗತ್ತಿನಲ್ಲಿ ಧನವಿದ್ದವನಿಂದ ಬೇಡಿ ಕೊಳ್ಳುವದು ಅವಾಗದಿದ್ದರೆ ಕಸಿದು ಕೊಳ್ಳುವದು ಇವೇ ಎರಡು ಧನಸಂಗ್ರಹಕ್ಕೆ ತಕ್ಕ ಉಪಾಯಗಳು. ಪಾಪ ಭೀರುವಾದ ನೀನು ಕಸಿದುಕೊಳ್ಳಲಾರಿ ಅದನ್ನು ಬಿಡು ಕೇವಲ ಆತನನ್ನು ಬೇಡಿ ಧನವನ್ನು ಸಂಪಾದಿಸು ಅಪರಿಮಿತಯಥಾವತ್ತಾಗಿ ಕಾರ್ಯ ಗಳನ್ನು ಸಾಗಿಸಿ ವಿವಾಹವನ್ನು ಮಾಡಿಕೊಳ್ಳು. ಎಂದು ಖಂಡತುಂಡಾಗಿ ನುಡಿದನು.

ಒಬ್ಬರನ್ನು ಬೇಡುವವನು ಜೀವನ್ಮೃತನು. ಅವರ ಪ್ರಸಂಗವು ಮನುಷ್ಯನನ್ನು ಯಾವಾಗಲೂ ಒಂದೇಸ್ಥಿತಿಯಲ್ಲಿಡುವದಿಲ್ಲ ಹಿಂದಕ್ಕೆ ಇದೇ ಶ್ರೀನಿವಾಸನು ವರಾಹಮೂರ್ತಿಯಿಂದ ಕೇವಲ ನೂರು ಅಡಿ ಭೂಮಿಯನ್ನು ದೊರಕಿಸಲು ಬಾಯಿಬಿಟ್ಟು ಬೇಡಿದನು ಅದೂ ತನ್ನ ಜೀವವನ್ನು ಎಡಗೈ

ಯಲ್ಲಿ ಹಿಡಿದುಕೊಂಡೇ ಬೇಡಿದನು. ಆದರೆ ವಿಚಾರವಂತ ಮೂರ್ತಿಯು— 'ಶ್ರೀನಿವಾಸನಂಥ ದೊಡ್ಡ ಮನುಷ್ಯನು ನೂರುಅಡಿ ಭೂಮಿಯನ್ನು ಬೇಡುವದೆಂದರೇನು? ತಾನು ಕೊಡಬಾರದೆಂದರೇನು? ಎಂಬ ವಿಚಾರಮಾಡಿ ಕೂಡಲೇ ನೂರು ಅಡಿ ಭೂಮಿಯನ್ನು ಕೊಡಲಿಲ್ಲವೇ? ಒಟ್ಟಿನಲ್ಲಿ ಹೇಳುವದಾದರೆ ಬೇಡದೆ ಯಾರೂ ಕೊಡುವದಿಲ್ಲ ಈ ಹಿಂದಿನ ಅನುಭವವು ಶ್ರೀನಿವಾಸನನ ಸ್ಮರಣೆಗೆ ತಾಗಿ ಈಗಲೂ ಕುಬೇರನ ಹತ್ತಿರ ಹಣ ಬೇಡಲು ಮನಸ್ಸು ಮಾಡಿದನು ಆ ಸಂಕಲ್ಪದಿಂದಲೇ ಕುಬೇರನನ್ನು ಕರೆಯಿಸಿಕೊಂಡು 'ಸ್ವಾಮಿ ಪುಷ್ಕರಿಣಿಯ ಪಶ್ಚಿಮಕ್ಕಿರುವ ಅಶ್ವತ್ಥಮರದ ಬುಡದಲ್ಲಿ ಕೊಡ—ಕೊಂಬುವವ್ಯವಹಾರದ ವಿಚಾರ ನಡೆಯಿತು ಶ್ರೀನಿವಾಸನು ತನ್ನ ಲಗ್ನದ ನಿಮಿತ್ತವನ್ನು ಮುಂದೆಮಾಡಿ ಆ ಕುಬೇರನಲ್ಲಿ ಹಣವನ್ನು ಸಾಲವಾಗಿ ಕೇಳಿದನು ಹಾಗು ಅದನ್ನು ತಾನು ತಪ್ಪದೆ ಮುಟ್ಟಿಸುವೆನು ಎಂದು ಹೇಳಿ ಆತನ ಮುಖದಿಂದ ಬರುವ ಉತ್ತರದ ಮಾರ್ಗ ನಿರೀಕ್ಷಿಸುತ್ತಿನಿಂತನು

ಕುಬೇರನು ಭೂಲೋಕದ ಸಾಮಾನ್ಯ ಸಾಹುಕಾರನಂತಲ್ಲ ಸುರಲೋಕದ ಶ್ರೇಷ್ಠ ಸಿರಿವಂತನಾತನು ಆತನಿಂದ ಸಾಲ ಕೊಳ್ಳದ ದೇವತೆಗಳೇ ಇರಲಿಲ್ಲ ಶ್ರೀನಿವಾಸನೊಬ್ಬನು ಮಾತ್ರ ಆತನ ಸಾಹುಕಾರಿಕೆಯ ಬಲೆಯಲ್ಲಿ ಇದುವರೆಗೆ ಬಿದ್ದಿರಲಿಲ್ಲ ಈಗ ಮಾತ್ರ ಆ ಕಾಲ ಬಂದೊದಗಿತು

ಶ್ರೀನಿವಾಸನು ಸಾಲ ರೂಪವಾಗಿ ಧನವನ್ನು ಯಾಚಿಸಿದ ಕೂಡಲೆ ಕುಬೇರನು— 'ದೇವಾ! ಶ್ರೀನಿವಾಸಾ! ನನ್ನಲ್ಲಿರುವ ಧನರಾಶಿಯೆಲ್ಲವೂ ನಿನ್ನದೇ ಆಗಿರುವದು ಒಂದು ಕವಡಿಯು ಕೂಡ ನನ್ನದಲ್ಲ. ಆ ಧನರಾಶಿಯ ಕಾವಲಿಗೆಂದು ನೀನು ನೇಮಿಸಿದ ಸೇವಕನು ಮಾತ್ರ ನಾನು. ನನ್ನಲ್ಲಿ ಹಣವನ್ನು ಕೇಳಿದ ನೀನು ಕೇವಲ ದರಿದ್ರ ಸ್ವರೂಪವನ್ನು ವ್ಯಕ್ತಪಡಿಸಿ ಲೌಕಿಕರ ವಿಡಂಬನೆಯನ್ನು ಮಾಡಿದಂತಿದೆ ಅದೇನೇ ಇರಲಿ ಈ ಧನವೆಲ್ಲ ನಿನ್ನ ಅಧಿಕಾರಕ್ಕೊಳಪಟ್ಟಿದ್ದು. ನಾನೂ ಕೂಡ ನಿನ್ನವನೇ. ಬೇಕಾದಷ್ಟು ಧನವನ್ನು ಕೊಂಡು ನೀನು ಉಪಯೋಗಿಸಬಹುದು ನಿನ್ನನ್ನು ತಡೆಯಲು ನನಗಾಗಲಿ ಇನ್ನೊಬ್ಬರಿಗಾಗಲಿ ಯಾರಿಗೂ ಅಧಿಕಾರವಿಲ್ಲ." ಎಂದು ನುಡಿದನು. ಬಳಿಕ ಶ್ರೀನಿವಾಸನು— 'ನರವಾಹನನಾದ ಕುಬೇರನೆ!

ಈ ನಿನ್ನ ವಿಚಾರವು ಯೋಗ್ಯವಾದರೂ ಈ ಕಲಿಯುಗಕ್ಕೆ ಮಾತ್ರ ತಕ್ಕುದಾದು ದಲ್ಲ ನಾನು ಒಂದು ದಿವ್ಯ ಪುರುಷದಲ್ಲಿ ನನ್ನ ದಶಾವತಾರಗಳನ್ನು ಪ್ರಕಟ ಪಡಿಸುವೆನು ಆ ನನ್ನ ಪ್ರತಿ ಅವತಾರ ಸಮಯದಲ್ಲಿ ನನಗೆ ಅವಶ್ಯವಿದ್ದ ಧನಕ್ಕೆ ನಾನು ನನ್ನ ಮನೆಯ ದ್ರವ್ಯವನ್ನು ಬಳಸುವದಿಲ್ಲ ಹಾಗು ಭೂಗತ ನಿಧಿಯನ್ನೂ ಉಪಯೋಗಿಸುವದಿಲ್ಲ ಯುಗಪ್ರತಿಯೊಂದಕ್ಕನುಸಾರವಾಗಿಯೂ ದೇಶ ಕಾಲಾನುಸಾರವಾಗಿಯೂ ನಡೆವ ಕ್ರಮದಂತೆ ನನಗೆ ದ್ರವ್ಯವನ್ನು ನನ್ನು ಕೊಡು ಹಾಗು ತಿರುಗಿ ಅದನ್ನು ತೆಗೆದುಕೊಳ್ಳು" ಎಂದು ಹೇಳಿದನು ಶ್ರೀನಿವಾಸನ ಲೌಕಿಕ ರೀತಿಯ ನುಡಿಗಳನ್ನು ಕೇಳಿ ಕುಬೇರನು— 'ಶ್ರೀನಿವಾಸ! ಯುಗಾನುಸಾರವಾಗಿ ವರ್ತಿಸುವ ನಿನಗೆ ನನ್ನ ಧನವನ್ನು ಹೇಗೆ ಕೊಡಲಿ ? ಅದನ್ನು ನೀನು ತಿರುಗಿ ಮುಟ್ಟಿಸುವ ಬಗೆ ಹೇಗೆ ?" ಎಂದು ಧನ ಮೋಹ-ಮಮತೆಯುಳ್ಳವನಾಗಿ ನುಡಿದನು ಅಲ್ಲಿದ್ದ ಆತನು— ಶ್ರೀನಿವಾಸ! ನೀನು ನಿನ್ನ ಸ್ವಹಸ್ತಲಿಖಿತದಿಂದ ಒಂದು ಲೇಖನವನ್ನು ನನಗೆ ಬರೆದು ಕೊಡು ಅದಕ್ಕೆ ಯೋಗ್ಯವೆನ್ನಿಸುವ ಈ ಶಂಕರ-ಬ್ರಹ್ಮನಂಥವರ ಸಾಕ್ಷಿಯನ್ನು ಹಾಕಿಸು ಆ ಮೇಲೆ ನಿನಗೆ ಧನಕೊಡುವ ವಿಚಾರ ' ಎಂದು ತಿಳಿಸಿದನು

ಸಂಪತ್ತಿನ ಮೇಲೆ ನಿರ್ಮೋಹಿತನಾಗಿದ್ದ ಕುಬೇರನಲ್ಲಿ ಒಮ್ಮೆಲೇ ವಿಚಾರವು ಬದಲಾಗಿ ಧನಲುಬ್ಧತೆಯುಂಟಾಯಿತು ಶ್ರೀನಿವಾಸನಿಗೆ 'ಲೇಖ ವನ್ನು ಮಾಡಿಕೊಡು' ಇತ್ಯಾದಿ ಲೌಕಿಕಪದ್ಧತಿಯನ್ನು ಉಪಯೋಗಿಸಿ ಮಾತಾಡಿದನು ಅದಕ್ಕೆ ಶ್ರೀನಿವಾಸನು ಬ್ರಹ್ಮನನ್ನು ಕುರಿತು ' ಈ ಕುಬೇರ ಸಾವುಕಾರನಿಗೆ ಲೇಖವನ್ನು ಹೇಗೆ ಮಾಡಿಕೊಡಬೇಕು? ನನ್ನಂಥ ದರಿದ್ರನ ಲೇಖವನ್ನು ಮನ್ನಿಸುವದು ಶಕ್ಯವಿದೆಯೋ ಎಂದು ಕೇಳಿದನು ಅದಕ್ಕೆ ಬ್ರಹ್ಮನು—'ಶ್ರೀನಿವಾಸ! ನಿನ್ನ ಲಗ್ನದ ಕಾರಣವನ್ನು ಉಲ್ಲೇಖಿಸಿ ಕುಬೇರನಿಂದ ಹದಿನಾಲ್ಕುಲಕ್ಷ ರಾಮಮುದ್ರೆಯ ವರಹಗಳನ್ನು ಸಾಲವಾಗಿ ಕೊಂಡಿರುವೆ, ಅದನ್ನು ಅದರ ಬಡ್ಡಿಸಹಿತವಾಗಿ ಮುಟ್ಟಿಸುವೆ ಕುಬೇರನು ಕೊಟ್ಟಧನವು ಇಂದಿನದಿನವೆಂದರೆ ವಿಲಂಬ ಸಂವತ್ಸರದ ವೈಶಾಖ ಶುಕ್ಲಪಕ್ಷದ ಸಪ್ತಮಿಯ ತಿಥಿಯಲ್ಲಿ ಇಂಥಿಂಥವರ ವಿದ್ಯಮಾನದಲ್ಲಿ ನನಗೆ ಮುಟ್ಟಿದವು ಎಂದು ಬರೆದು ಅದರ ಕೆಳಗೆ ನಿನ್ನ ಅಂಕಿತವನ್ನೂ ಸಾಕ್ಷಿದಾರರ ಅಂಕಿತವನ್ನೂ ಬರೆಯಿಸಿ ಕುಬೇರನಿಗೆ ಕೊಟ್ಟು ಧನ ಪಡೆಯಬಹುದು. ಎಂದು ಹೇಳಿದನು

ಬ್ರಹ್ಮನ ಹೇಳಿಕೆಯಂತೆ ಸಾಲಪತ್ರವು ಸಿದ್ಧವಾಯಿತು. ಅದಕ್ಕೆ ಆ ಅಶ್ವತ್ಥವೃಕ್ಷದ ಸನ್ನಿಧಿಯಲ್ಲಿ ನಡೆದ ವಿಚಾರದಲ್ಲಿದ್ದ ಬ್ರಹ್ಮನ ಹಾಗು ಶಂಕರನ ಸಾಕ್ಷಿಯ ಅಂಕಿತಗಳು ಹಾಕಲ್ಪಟ್ಟವು. ಉಳಿದ ಮೂರನೆಯ ಸಾಕ್ಷಿಯಾಗಿ ಅಲ್ಲಿರುವ ಅಶ್ವತ್ಥವೃಕ್ಷವೇ ಎಂದು ತಿಳಿಯಲಾಯಿತು. ಆ ಬಳಿಕ ಕುಬೇರನಿಂದ ೧೪ ಲಕ್ಷ ವರಹಗಳು ಶ್ರೀನಿವಾಸನಿಗೆ ಸಲ್ಲಿಸಲಾಯಿತು.

ಕುಬೇರನಿಂದ ತಕ್ಕೊಂಡ ಧನವನ್ನು ಶ್ರೀನಿವಾಸನು ಅದನ್ನು ತನ್ನ ಲಗ್ನಕ್ಕಾಗಿ ವೆಚ್ಚ ಮಾಡುವ ಕುರಿತು ಆ ಕುಬೇರನ ಕೈಯಲ್ಲಿಯೇ ನೀಡಿದನು. ಎಲ್ಲ ಸಾಹಿತ್ಯವನ್ನು ಸಂಗ್ರಹಿಸುವ ಕೆಲಸವನ್ನು ಒಪ್ಪಿಕೊಂಡ ಕುಬೇರನು ಆ ಕೂಡಲೆ ಆ ಧನದಿಂದ ಎಲ್ಲ ಸಾಮಾನು ಸಾಹಿತ್ಯಗಳನ್ನು ತಂದನು. ಪಾಕ ಕ್ರಿಯೆಗಾಗಿ ನಿಯಮಿಸಲ್ಪಟ್ಟ ಅಗ್ನಿಯನ್ನು ಕರೆದು ಶ್ರೀನಿವಾಸನು—'ವೈಶ್ವಾನರನೆ ಎಲ್ಲ ಸಾಮಾನು ಸಾಹಿತ್ಯಗಳನ್ನು ತೆಗೆದುಕೊಂಡು ಅಡುಗೆಯನ್ನು ಸಿದ್ಧಪಡಿಸು. ನಿನಗೆ ಅವಶ್ಯವಿರುವ ಅಡಿಗೆಯ ಪಾತ್ರೆಗಳು ಸಾಕಷ್ಟು ನಮ್ಮಲ್ಲಿಲ್ಲ. ಅದಕ್ಕಾಗಿ ನೀನು ಬೇರೆ ಪಾತ್ರೆಗಳನ್ನು ಉಪಯೋಗಿಸಬೇಕಾಗಿಲ್ಲ. ಈ ನಮ್ಮ ಸ್ವಾಮಿ ಪುಷ್ಕರಣಿ ತೀರ್ಥದಲ್ಲಿಯೇ ಅನ್ನವನ್ನು ಸಿದ್ಧಗೊಳಿಸು. ಅರ್ಥಾತ್ ಆ ತೀರ್ಥವೇ ನಿನಗೆ ಅನ್ನದ ಪಾತ್ರೆಯಾಗಿರುವದೆಂದು ತಿಳಿ. ಅದರಂತೆ ಪಾಪವಿನಾಶಿನಿಯಲ್ಲಿ ಸಾರವನ್ನು, ಆಕಾಶಗಂಗೆಯಲ್ಲಿ ಪರಮಾನ್ನವನ್ನೂ, ದೇವತೀರ್ಥದಲ್ಲಿ ಕಾಯಿ–ಪಲ್ಯೆಯನ್ನೂ ಮಾಡು. ಇನ್ನು ತುಪ್ಪವನ್ನು ಬಿಸಿಮಾಡಲು ತುಂಬುರ ತೀರ್ಥವನ್ನು ಬಳಸು. ಕುಮಾರಧಾರಿಕೆಯಲ್ಲಿ ಭಕ್ಷ್ಯಗಳನ್ನೂ ಪಾಂಡು ತೀರ್ಥದಲ್ಲಿ ಅಪ್ಪವನ್ನೂ ಉಳಿದ ಎಲ್ಲ ತೀರ್ಥಗಳನ್ನು ಕಂದ–ಮೂಲಾದಿ ವ್ಯಂಜನ ಪದಾರ್ಥಗಳನ್ನು ಸಿದ್ಧಪಡಿಸಿಕೊಳ್ಳಲು ಉಪಯೋಗಿಸು' ಎಂದು ಹೇಳಿದನು. ಶ್ರೀನಿವಾಸನು ಅಡಿಗೆಯ ಪಾತ್ರೆಗಳ ಬಗ್ಗೆ ಯೋಚಿಸಿದ ಈ ಯೋಜನೆಯನ್ನು ದೇವ–ಋಷಿಗಳೆಲ್ಲ ಒಪ್ಪಿ ಆತನನ್ನು ಹೊಗಳಿದರು. ಪಾಕಶಾಸ್ತ್ರನಿಪುಣನೆಂದು ವೇದ ಪ್ರಸಿದ್ಧನಾದ ಅಗ್ನಿಯು ಹಾ. ಹಾ. ಎನ್ನುವಷ್ಟರಲ್ಲೇ ಎಲ್ಲ ಅಡಿಗೆಯನ್ನು ಸಿದ್ಧಪಡಿಸಿದನು. ಅನುಕೂಲ ಸಾಹಿತ್ಯಗಳೂ ಸಾಕಾಗುವಷ್ಟು ಪಾತ್ರೆಗಳೂ, ಕುಶಲನಾದ ಅಡಿಗೆಯವನೂ ಹೀಗೆ ಮೂರರ ಸಂಯೋಗವಾಗಲು ರುಚಿಕಟ್ಟಾದ ಅಡಿಗೆ ಶೀಘ್ರ ಸಿದ್ಧವಾಗುವದರಲ್ಲೇನು ಸಂಶಯವು? ಯುಗಾನುವರ್ತಿ ಶ್ರೀನಿವಾಸನ

ವಿಚಿತ್ರ ಕರ್ಮಗಳು ಆಗ ಎಲ್ಲರಿಗೂ ಅದ್ಭುತವಾಗಿಯೂ ಆಶ್ಚರ್ಯಯುಕ್ತವಾಗಿಯೂ ತೋರಿದವು

ಪಾಕಶಾಸ್ತ್ರ ಪ್ರವೀಣನಾದ ಅಗ್ನಿಯಿಂದ ಅಂದಿನ ಅಡಿಗೆಯೆಲ್ಲವೂ ಸಿದ್ಧವಾಯಿತು ನಂತರ ಆತನು ಶ್ರೀನಿವಾಸನ ಬಳಿಗೆ ಬಂದು—'ಸ್ವಾಮಿ! ನಿಮ್ಮ ಅನುಗ್ರಹದಿಂದ ಅಡಿಗೆಯೆಲ್ಲವನ್ನೂ ಸಿದ್ಧಪಡಿಸಿರುವೆನು ಇನ್ನು ದೇವ-ಬ್ರಾಹ್ಮಣ-ಋಷಿಗಳನ್ನೆಲ್ಲ ಭೋಜನಕ್ಕಾಗಿ ಆಮಂತ್ರಿಸಿರಿ' ಎಂದು ಸೂಚಿಸಿದನು ಕೂಡಲೆ ಶ್ರೀನಿವಾಸನು ಷಡಾನನನನ್ನು ಕರೆದು— ನೀನು ಶೀಘ್ರವಾಗಿ ಹೋಗಿ ಸಮಸ್ತ ದೇವತೆಗಳನ್ನೂ ಋಷಿ—ಬ್ರಾಹ್ಮಣರನ್ನೂ ಊಟಕ್ಕೆ ಕರೆದುಕೊಂಡು ಬಾ' ಎಂದು ಹೇಳಿ ಕಳಿಸಿದನು ಅವರೆಲ್ಲರು ಬಂದ ಕೂಡಲೆ ಶಂಕರನು ಅವರವರ ಯೋಗ್ಯತೆಗನುಸಾರವಾಗಿ ಕುಳ್ಳಿರಿಸಿ ಎಲೆ ಹಾಕಿಸಿದನು ಅವರು ಕುಳಿತ ಭೋಜನಸಾಲು ಪಾಂಡ ತೀರ್ಥದಿಂದ ಶ್ರೀಶೈಲಗಿರಿಯವರೆಗೆ ನಿಡಿದಾಗಿದ್ದಿತು ಮೊದಲು ಕುಲದೇವತೆಗೂ ಇಷ್ಟದೇವತೆಗಳಿಗೂ ನೈವೇದ್ಯ ಸಮರ್ಪಣವಾಯಿತು ಬಳಿಕ ಶ್ರೀನಿವಾಸನು ಭೋಜನಕ್ಕೆ ಬಂದ ದೇವಬ್ರಾಹ್ಮಣಾದಿಗಳನ್ನು ಪೂಜೆಮಾಡಿ ಸರ್ವರಿಗೂ ತೀರ್ಥ ಅಕ್ಷತೆಗಳನ್ನು ಕೊಟ್ಟನು

ನಾಲ್ದಿಡಿದು ಎಲೆಗಳನ್ನು ಹಾಕಿದನಂತರ ದಿಕ್ಪಾಲಕರೆಲ್ಲರು ಉಪ್ಪು ಮೊದಲುಮಾಡಿ ಯಾವತ್ತು ಪದಾರ್ಥಗಳನ್ನು ವ್ಯವಸ್ಥಿತವಾಗಿ ಬಡಿಸಿದರು. ಬ್ರಹ್ಮನು ಎಲ್ಲ ಎಲೆಗಳಿಗೆ ತುಪ್ಪವನ್ನು ಹಾಕಿದನು ಬಡಿಸುವದಾದ ನಂತರ ಪುರೋಹಿತರು ಶ್ರೀನಿವಾಸನನ್ನು ಕರೆದು ಆತನ ಕೈಯಲ್ಲಿ ಗಂಧ-ಕುಸುಮ-ಅಕ್ಷತೆಗಳನ್ನು ಕೊಟ್ಟು 'ಏಕೋವಿಷ್ಣು' ಎಂಬ ಮಂತ್ರವನ್ನುಚ್ಚರಿಸುತ್ತ ಆತನಿಂದ ಅರ್ಘ್ಯವನ್ನು ಬಿಡಿಸಿದರು ಹಾಗು ಎಲ್ಲರು 'ಲಕ್ಷ್ಮೀರಮಣ ಗೋವಿಂದಾ ಗೋವಿಂದ' ಎಂದು ನಾಮವನ್ನು ಗರ್ಜಿಸಿ ಭೋಜನಕ್ಕೆ ಸುರುಮಾಡಿದರು ಎಲ್ಲರೂ ಹಸಿದುದರಿಂದ ತಮ್ಮ ತಮ್ಮ ಎಲೆಗಳನ್ನೇ ನಿರೀಕ್ಷಿಸುತ್ತ ಬಡಿಸಿದ ಪ್ರತಿಯೊಂದು ಪದಾರ್ಥದ ರುಚಿಯನ್ನು ನೋಡುವದರಲ್ಲಿ ತಲ್ಲೀನರಾದರು. ಊಟಕ್ಕೆ ಬಡಿಸುವವರೆಲ್ಲರೂ ಉಣ್ಣುವ ಪ್ರತಿಯೊಬ್ಬನ ಎಲೆಯಲ್ಲಿ ಏನೊಂದು ಪದಾರ್ಥವು ಕೊರತೆಯಾಗದಂತೆ ನೋಡಿಕೊಳ್ಳುತ್ತಿದ್ದರು. ಅಮೃತೋಪಮವಾದ ಅಂದಿನ ಅನ್ನದ ರುಚಿಯೂ, ಮಧು-ಮಧುರ

ವಾದ ಪಾಯಸಾದಿ ಪಕ್ವಾನ್ನಗಳೂ, ನಾಸಿಕಕ್ಕೆ ಕಂಪಾಗಿ ನಾಲಗೆಗೆ ರುಚಿಯಾಗಿ ಮನಸಣಿಯುವಂತೆ ಬಡಿಸಿದ ತುಪ್ಪವೂ ಸುರಲೋಕದ ದೇವ-ದೇವತೆಗಳನ್ನು ಸಂತೃಪ್ತಿಗೊಳಿಸಿದವು. ಬ್ರಹ್ಮಾದಿಸುರರೆಲ್ಲರು ಭೂಲೋಕದ ಭೋಜನದ ಸೊಬಗನ್ನು ಬಲುವಾಗಿ ವರ್ಣಿಸುತ್ತ ಆಕಂಠ ಪರಿಯಂತವೂ ಉಂಡುತೇಗಿದರು. ಊಟವಾದನಂತರ ಶ್ರೀನಿವಾಸನಿಂದ ಎಲ್ಲರಿಗೂ ತಾಂಬೂಲ ಕೊಡಲ್ಪಟ್ಟಿತು. ಬ್ರಾಹ್ಮಣರೆಲ್ಲ ದಕ್ಷಿಣೆ ದಾನಗಳಿಂದ ಸಂತುಷ್ಟತೆ ಹೊಂದಿದರು.

ದೇವಬ್ರಾಹ್ಮಣ ಮೊದಲಾದವರ ಭೋಜನದ ತರುವಾಯ ಶ್ರೀನಿವಾಸನ ಆಪ್ತೇಷ್ಟವರ್ಗವೂ ಮೊದಲಿನ ಪಙ್ಕ್ತಿಗೆ ಉಣ್ಣಲು ಬಡಿಸಿದ ಅಷ್ಟದಿಕ್ಪಾಲರೂ ಅಗ್ನಿ-ಗರುಡ-ಶೇಷ ಮೊದಲಾದವರೂ ಇನ್ನೊಂದು ಪಙ್ಕ್ತಿಯಾಗಿ ಊಟ ಮಾಡಿದರು. ಎಲ್ಲ ಪ್ರಾಣಿಮಾತ್ರಗಳ ಭೋಜನೋತ್ತರದಲ್ಲಿ ಕಟ್ಟಕಡೆಗೆ ಉಂಡವರೆಂದರೆ ಶ್ರೀನಿವಾಸ—ಲಕ್ಷ್ಮೀದೇವಿಯರೂ, ಬಕುಲಾವತಿಯೂ ಇವರೇ ಎಂದು ಹೇಳಬೇಕಾಗಿಲ್ಲ.

ಇಷ್ಟೆಲ್ಲ ಭೋಜನದ ಸಂಭ್ರಮವು ಕೊನೆಗಾಣುವಷ್ಟರಲ್ಲಿ ಸೂರ್ಯಾಸ್ತಸಮಯವು ಪ್ರಾಪ್ತವಾಯಿತು. ಆಕಾಶರಾಜನಿಂದ ಪುರೋಹಿತನು ಫಲಾಕ್ಷತೆಯಿಂದ ಸಹಿತವಾಗಿ ಬೀಗರನ್ನು ಕರೆಯಲು ಬಂದನು. ಬಂದ ಬ್ರಾಹ್ಮಣನನ್ನು ಯಥೋಚಿತವಾಗಿ ಸತ್ಕಾರ ಮಾಡಲ್ಪಟ್ಟಿತು. ರಾತ್ರಿಯಾಗಲು ವಿವಾಹಕ್ಕಾಗಿ ಬಂದ ಯಾವತ್ತೂ ದೇವ-ಮಾನವರು ಆಶೇಷಾಚಲ ಪ್ರದೇಶದಲ್ಲೆಲ್ಲ ಕಡೆಗೂ ಕಂದರ, ವೃಕ್ಷ, ಗಂಹರಗಳನ್ನದೆ ಸ್ಥಳ ಸಿಕ್ಕಲ್ಲಿ ಸುಖನಿದ್ರೆಯಿಂದ ಅಂದಿನ ರಾತ್ರಿಯನ್ನು ಕಳೆದರು. ಶ್ರೀನಿವಾಸ ಲಕ್ಷ್ಮೀದೇವಿಯರೂ ವಲ್ಮೀಕ ಪ್ರದೇಶದಲ್ಲಿಯೇ ಇದ್ದರೆಂದು ಹೇಳಬೇಕಾಗಿಲ್ಲ. ಮರುದಿನ ಆಕಾಶರಾಜನ ನಗರಕ್ಕೆ ಪ್ರಯಾಣಬೆಳೆಸಬೇಕಾದುದು. ಆಕಾಶರಾಜನಿಂದ ಕರೆಬಂದ ಕೂಡಲೆ ನಿರ್ಧಾರವಾಯಿತು. ಬೆಳಗಾಯಿತು ಎಲ್ಲರಿಗಿಂತಲೂ ಮೊದಲೇ ಶ್ರೀನಿವಾಸನು ಎಚ್ಚರವಾಗಿ ಎದ್ದನು. ಲಗ್ನಕ್ಕಾಗಿ ಹೊರಡಲು ಬ್ರಹ್ಮನಿಂದ ಎಲ್ಲರಿಗೂ ಸೂಚಿಸಿದನು. ಆ ಕೂಡಲೆ ಮುಂಜಾವಿನ ಮಂಗಲವಾದ್ಯಗಳ ಮಂಜುಳ ನಿನಾದವು ಅಲ್ಲೆಲ್ಲ ಕಡೆಗೂ ವ್ಯಾಪಿಸಿ ಬಿಟ್ಟಿತು. ಆ ಸಪ್ಪಳವನ್ನು ಕೇಳಕೇಳುತ್ತಲೆ ಎಲ್ಲರೂ ನಿದ್ರೆತಿಳಿದೆದ್ದರು. ಪ್ರಾತರ್ವಿಧಿ

ಯನ್ನು ಶೀರಿಸಹತ್ತಿದರು ಕೆಲವರು ತೀರ್ಥಸ್ನಾನಕ್ಕಾಗಿಯೂ ಇನ್ನೂ ಕೆಲವರು ಸುವರ್ಣಮುಖರೀ ನದಿಗೆ ಸ್ನಾನಾಂಗ ತರ್ಪಣಕ್ಕಾಗಿಯೂ ಹೋದರು. ಮುಪ್ಪಿನ ಪುರುಷರೂ, ಹಲವು ನಾರಿಯರೂ, ಅಶಕ್ತತೆಯಿಂದ ಶೀತಲೋದಕ ಸ್ನಾನ ರುಚಿಸದವರೂ ಶ್ರೀನಿವಾಸನ ಸ್ನಾನಗೃಹದಲ್ಲಿಯೇ ಪರಿಮಳ ಯುಕ್ತ ಉಷ್ಣೋದಕದಿಂದ ಸ್ನಾನಗಳನ್ನು ಮುಗಿಯಿಸಿಕೊಂಡರು ಹೀಗೆ ಎಲ್ಲರ ಸ್ನಾನ ಪದ್ಧತಿಯು ಅರುಣೋದಯ ಸೂರ್ಯೋದಯಗಳ ನಡುವಿನ ಕಾಲಾವಧಿಯಲ್ಲಿಯೇ ಮುಗಿಯಿತು ಆ ಬಳಿಕ ಎಲ್ಲರೂ ಹೊರಡಲು ತಮ್ಮ ತಮ್ಮ ವಸ್ತ್ರಾಭರಣಗಳಿಂದ ಭೂಷಿತರಾಗಿ ನಿರ್ಗಮನದ ವೇಳೆಯನ್ನು ಕಾದು ಕುಳಿತರು. ವಾಹನಗಳ ಸೌಕರ್ಯವಿದ್ದವರೆಲ್ಲ ತಮ್ಮ ತಮ್ಮ ವಾಹನಗಳನ್ನು ಅಳವಡಿಸಿಕೊಂಡರು ಬ್ರಹ್ಮನು ತನ್ನ ಹಂಸವನ್ನು ಆರೋಹಿಸಿ ಸಿದ್ಧನಾದನು ಶಂಕರನು ತನ್ನ ನಂದಿಯನ್ನೇರಿ ನಿಂತನು ಇದರಂತೆ ಉಳಿದ ದೇವತೆಗಳೂ ತಮ್ಮ ತಮ್ಮ ವಾಹನಗಳನ್ನೇರಿ ಪ್ರಯಾಣೋತ್ಸುಕರಾಗಿ ನಿಂತರು ದೇವಸ್ತೋಮವೂ, ಋಷಿಗಣವೂ, ಮಾನವರೂ ಎಲ್ಲರೂ ಸಜ್ಜಾದನಂತರ ಸಾಕ್ಷಾತ್ ಶ್ರೀನಿವಾಸನು ಲಕ್ಷ್ಮೀಸಹಿತವಾಗಿ ಗರುಡನನ್ನು ಆಹ್ವಾನಿಸಿ ಆತನ ಸ್ಕಂಧವನ್ನು ಆರೋಹಿಸಿ ಎಲ್ಲರಿಗೂ ಮುಂದೆ ಸಾಗಲು ಸೂಚಿಸಿದನು ಶ್ರೀನಿವಾಸನ ಮುಂಭಾಗದಲ್ಲಿ ಬ್ರಹ್ಮನೂ ಬಲಗಡೆಗೆ ಶಂಕರನೂ ಎಡಭಾಗದಲ್ಲಿ ವಾಯುವೂ ಶೋಭಾಯಮಾನರಾಗಿ ಹೊರಟರು. ಷಡಾನನನು ಆತನ ಹಿಂದಿನಿಂದಲೇ ಸಾಗಿದನು ಮಾತೃಸ್ವರೂಪಳಾದ ಬಕುಲಾವತಿ ಮೊದಲಾದ ಸ್ತ್ರೀಯರು ವಿಮಾನವನ್ನೇರಿ ನಡೆದರು.

ಈ ಪ್ರಕಾರವಾಗಿ ಎಲ್ಲ ದೇವ, ಋಷಿ, ಮಾನವರೆಲ್ಲ ಸಡಗರದಿಂದ ಶ್ರೀನಿವಾಸನ ಕಲ್ಯಾಣೋತ್ಸವಕ್ಕಾಗಿ ಹೊರಟು ವೇಂಕಟಾಚಲದಿಂದ ಇಳಿದು ಪ್ರಯಾಣಬಳಿಸಿದರು. ಅವರ ಸಂಮರ್ದವು ಹೆಚ್ಚಾಯಿತು ಆದರಿಂದ ಆಕಾಶ ರಾಜನ ಪಟ್ಟಣಕ್ಕೆ ಹೋಗುವಮಾರ್ಗವು ಕಿಕ್ಕಿರಿದುತುಂಬಿ ಮಹಾಪೂರ ಬಂದ ಪ್ರವಾಹಿಯು ನಾಗರರಾಜನಲ್ಲಿಗೆ ಹೋಗೇವದೋ ಏನೋ ಎಂಬಂತೆ ಗಂಭೀರವಾಗಿ ತೋರುತ್ತಿತ್ತು. ಮಾರ್ಗದ ಎರಡೂ ಬದಿಗಳನ್ನು ತುಂಬಿ ಹೋಗುತ್ತಿರುವ ಆ ಜಂಗುಳಿಯಲ್ಲಿ ಕೆಲವರು ಬೀಳುವರು, ಕೆಲವರು ಏಳುವರು. ಬೇರೆ ಕೆಲವರು ಸರಸವಾಡುತ್ತ, ಪದ-ಪದ್ಯಗಳನ್ನು ಹಾಡುತ್ತ, ನಡೆಯು

ವರು. ಆ ಪಟ್ಟಣೆಯಲ್ಲಿ ಎಷ್ಟೋ ಜನರು ತಮ್ಮ ಸಾಮಾನು ಸಲಕರಣೆಗಳನ್ನು ಕಳೆದುಕೊಂಡರು. ಸಂಗಡಿಗರಿಂದ ಅಗಲಿನಡೆದರು ಹಸಿವೆ ನೀರಡಿಕೆಗಳಿಂದ ಕೆಲವರು ಮುಂದಡಿಯಿಡದಾದರು ಹಲವರು ಉಪಹಾರಕ್ಕಾಗಿ ಕೆಲವರು ಫಲಾಹಾರನಿಮಿತ್ತವಾಗಿ ನೀರುಕಂಡಲ್ಲಿ ಕುಳಿತು ಜಂಗುಳಿಯೊಡನೆ ಮುಂದೆ ನಾಗಿವರು. ನಾರೀವರ್ಗದಲ್ಲಿ ಬಹುಜನರು ತಮ್ಮ ತಮ್ಮ ಕೂಸುಗಳನ್ನೆತ್ತಿಕೊಂಡು ಭಾರವಾಗಿ ಹೆಜ್ಜೆಇಡುತ್ತನಡೆದರು. ಎಂದೂ ತಮ್ಮ ಮಂದಿರಗಳನ್ನು ಬಿಟ್ಟು ಕದಲದ ನಾರಿಯರು ಬಿಸಿಲಿನಿಂದ ಬೆಂದು ತಳಮಳಿಸಿದರು ಒಟ್ಟಿನ ಮೇಲೆ ಕಲ್ಯಾಣೋತ್ಸವಕ್ಕಾಗಿ ಹೊರಟವರೆಲ್ಲ ತಮಗೆ ಮಾರ್ಗದಲ್ಲಿ ಸುಖವೆನ್ನಿಸಿದರೂ, ಎಷ್ಟೇ ಕಷ್ಟವೆನ್ನಿಸಿದರೂ ಅದಾವುದನ್ನು ಲಕ್ಷ್ಯಕ್ಕೆ ತಾರದೆ ಸೊಗಸು ಸಂಭ್ರಮ ಬೀರುತ್ತಲೇ ಮುಂದೆ ಮುಂದೆ ಮಾರ್ಗ ಕ್ರಮಿಸುತ್ತಿದರು.

ಈ ಪ್ರಕಾರವಾಗಿ ತನ್ನೊಡನೆ ನಾಗುತ್ತಿರುವ ಜನರಿಂದ ಸಹಿತನಾಗಿ ಶ್ರೀನಿವಾಸನು ಮಾರ್ಗವಲ್ಲಿ ಹತ್ತಿದ 'ಪದ್ಮತೀರ್ಥ' ವೆಂಬ ಮಹಾತೀರ್ಥದ ವರೆಗೆ ಬಂದನು ಅಲ್ಲಿಯೇ ಕೃಷ್ಣದ್ವೈಪಾಯನರ ಪುತ್ರ ಶುಕಮುನಿಗಳ ಆಶ್ರಮವಿತ್ತು. ಶ್ರೀನಿವಾಸನ ನಡಗರದ ಜನಗುಂಪನ್ನು ಕಂಡು ಆ ಋಷಿಯು ತನ್ನ ಆಶ್ರಮದಿಂದ ಹೊರಬಿದ್ದು ನೇರವಾಗಿ ಶ್ರೀನಿವಾಸನ ಎದುರಿಗೆ ಬಂದು ಆತನಿಗೆ ಸಾಷ್ಟಾಂಗ ಪ್ರಣಿಪಾತ ಮಾಡಿ— 'ದೇವ! ಶ್ರೀನಿವಾಸ! ನೀನು ವೇದಗಳಿಗೆ ಅಗಮ್ಯನು ಬ್ರಹ್ಮ–ರುದ್ರಾದಿಗಳು ನಿನ್ನ ಮಹತಿಯನ್ನರಿಯರು. ಇಂಥ ನಿನ್ನನ್ನು ಕಾಣುವ ಬಯಕೆಯಿಂದಲೇ ಹಲದಿನ ತಪವನ್ನಾಚರಿಸಿದೆನು ಆ ತಪದ ಫಲವು ಇಂದು ಸಕಲ ದೇವಗಣಗಳಿಂದ ಕೂಡಿದ ಲಕ್ಷ್ಮೀಸಹಿತನಾದ ನಿನ್ನ ದರ್ಶನದಿಂದ ನನಗೆ ದೊರೆಯಿತು ಇನ್ನು ನನ್ನ ಬಯಕೆಯೆಂದರೆ 'ಆಶ್ರಮವಾಸಿಗಳಾದ ನಾವು ಈಗ ನಿನಗೆ ಕೊಡುವ ಕಂದಮೂಲಗಳನ್ನು ಭಕ್ಷಿಸಿ ನಮ್ಮ ಆತಿಥ್ಯವನ್ನು ಸ್ವೀಕರಿಸಬೇಕು' ಎನ್ನಲು ಶ್ರೀನಿವಾಸನು— 'ನಾವು ಇಂದು ಆಕಾಶರಾಜನಲ್ಲಿಯೇ ಹೋಗಿ ಭೋಜನ ಮಾಡುವೆವು ಮೇಲಾಗಿ ನನ್ನ ಈ ಪರಿವಾರಕ್ಕೆಲ್ಲ ನೀನು ಕೊಡುವ ಕಂದ ಮೂಲದಿಂದ ತೃಪ್ತಿಯಾಗುವದೆಂತು?' ಎನ್ನಲು ಆ ವ್ಯಾಸ ಕುಮಾರನಾದ ಶುಕನು—'ದೇವಾ! ನಾನು ದರಿದ್ರನು ನೀನು ದರಿದ್ರರಾದವರಿಗೆ ಪ್ರಿಯನು. ಅಂದಮೇಲೆ ನಾನು ನೀಡುವ ಫಲದಾನದಿಂದ ನೀನೊಬ್ಬನು ತೃಪ್ತನಾದರೆ ಜಗತ್ತೆಲ್ಲ ತೃಪ್ತ

ಮಾಡಂತೆ ಆಗುತ್ತದೆಂಬ ಭಾವನೆ ನನ್ನಲ್ಲಿದುವದು' ಎಂದು ನುಡಿದನು. ಶುಕನ ಈ ಭಾವನಾಪ್ರಧಾನವಾದ ಮಾತುಗಳನ್ನು ಶ್ರೀನಿವಾಸನ ಬಳಿಯಲ್ಲಿ ಇರುವ ಬಕುಲಾವತಿಯು ಕೇಳಿ ಶ್ರೀನಿವಾಸನಿಗೆ— 'ಶ್ರೀನಿವಾಸ! ಈ ಶುಕ ಮುನಿಯು ಪದ್ಮಾವತಿಯನ್ನು ನಿನಗೆ ನಿಶ್ಚಯಿಸುವ ಸಮಯದಲ್ಲಿ ತನ್ನ ಬುದ್ಧಿಯಿಂದ ಆಕಾಶರಾಜನ ಮನಸ್ಸೊಪ್ಪಿಸಿದನು ಈಗ ಇವನ ಆತಿಥ್ಯವನ್ನು ನೀನು ಸ್ವೀಕರಿಸಲೇ ಬೇಕು. ಎನ್ನಲು ಶ್ರೀನಿವಾಸನು 'ಹಾಗೇಆಗಲಿ' ಎಂದು ಶುಕನಿಗೆ ತಿಳಿಸಿದನು. ಆಗ ಶುಕನು ಆತನನ್ನು ತನ್ನ ಆಶ್ರಮಕುಟೀರವೊಳಕ್ಕೆ ಕರೆದೊಯ್ದು ಕುಳ್ಳಿರಿಸಿ ಪೂಜೆಮಾಡಿದನು. ಹಾಗು ತಾನು ಸಿದ್ಧಗೊಳಿಸಿದ ಉತ್ತರಣೆಯ ಅನ್ನವನ್ನೂ ಹುಳಿನಾರನ್ನೂ ಶ್ರೀನಿವಾಸನಿಗೂ, ಲಕ್ಷ್ಮೀದೇವಿ—ಬಕುಲಾವತಿಯರಿಗೂ ಉಣ್ಣಲುಬಡಿಸಿದನು. ಅವರೆಲ್ಲರೂ ಉಂಡು ತೇಗಿದರು.

ಶ್ರೀನಿವಾಸನೊಡನೆ ಬಂದ ಋಷಿಗಳಲ್ಲಿ ಕೆಲವರಿಗೆ—' ಶುಕನು ಕೇವಲ ಶ್ರೀನಿವಾಸ-ಲಕ್ಷ್ಮೀದೇವಿಯರಿಗಷ್ಟೇ ಊಟಕ್ಕೆ ಕರೆದು ನಮ್ಮನ್ನು ಕರೆಯಲಿಲ್ಲವಲ್ಲ!' ಎಂದು ತಳಮಳಿಸಿ ಶುಕನಮೇಲೆ ಸಿಟ್ಟಾಗಿ ಮನಸಿನಲ್ಲಿ ಕುದಿಯ ಹತ್ತಿದರು. ಸರ್ವಾಂತರ್ಯಾಮಿ ಶ್ರೀನಿವಾಸನು ಋಷಿಗಳ ಈ ಮನೋಭಾವನೆಯನ್ನರಿತನು. ತಾನು ಆ ಕೂಡಲೆ ಕುಟೀರದಿಂದ ಹೊರಬಂದು ಢರ್ರನೇ ತೇಗಿದನು ಆ ಕೂಡಲೇ ಎಲ್ಲ ದೇವಋಷಿ ಬ್ರಾಹ್ಮಣರ ಹಾಗೂ ಕಲ್ಯಾಣೋತ್ಸವಕ್ಕಾಗಿ ಹೊರಟುಬಂದ ಸಣ್ಣದೊಡ್ಡವರೂ ತಾವೂಉಂಡು ತೃಪ್ತರಾದವರಂತೆ ತೇಗಿದರು. ಆಗ ಎಲ್ಲರಿಗೂ ಹಸಿವೆಯು ಮರವೆಯಾಯಿತು. ತಾವು ವ್ಯರ್ಥವಾಗಿ ಶುಕನಿಗೆ ದೋಷವಿತ್ತೆವಲ್ಲ! ನಿಜವಾಗಿ ನಮಗಾರಿಗೂ ಹಸಿವೆ—ತೃಷೆಗಳಿಲ್ಲ. ಸಂಪೂರ್ಣತೃಪ್ತಿ ನಮಗಿದೆ. ಎಂದು ಋಷಿಗಳು ನುಡಿದು ಇದೆಲ್ಲವೂ ಶ್ರೀನಿವಾಸನ ಕೃತಕರಣವು— ಎಂದು ಆತನನ್ನು ಸ್ತುತಿಸಿದರು. ಮತ್ತು ತಾವೂ ಶುಕಮುನಿಯನ್ನು ಕಂಡು— 'ಋಷಿವರ್ಯ! ಸರ್ವಾಂತರ್ಯಾಮಿಯನ್ನು ತೃಪ್ತಬಡಿಸಿ ನೀನು ಕೃತಕೃತ್ಯನಾದೆ. ವ್ಯರ್ಥವಾಗಿ ನಿನಗೆ ನಾವು ಕೊಟ್ಟ ದೋಷಕ್ಕಾಗಿ ನಾವು ನಿನ್ನಲ್ಲಿ ಕ್ಷಮೆ ಬೇಡುವೆವು' ಎಂದು ನುಡಿದರು. ಬಳಿಕ ಶುಕಮುನಿಯು ಅವರೊಡನೆ ಸರಸವಾಡಿ ಅಂದಿನದಿನವು ಅವರನ್ನೆಲ್ಲ ಆಗ್ರಹಪೂರ್ವಕ ತನ್ನ ಆಶ್ರಮದಲ್ಲಿಯೇ ಉಳಿಸಿಕೊಂಡು ಉಪಚರಿಸಿದನು.

ಮರುದಿನವು ಎಲ್ಲರೂ ಪಂಚ ಪಂಚ ಉಷಃಕಾಲಕ್ಕೆದ್ದು ಪದ್ಮತೀರ್ಥದಲ್ಲಿ ಸ್ನಾನಮಾಡಿ ತಮ್ಮ ತಮ್ಮ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮುಗಿಯಿಸಿಕೊಂಡು ಮುಂದೆ ಪ್ರಯಾಣ ಬೆಳಸಿದರು ಶ್ರೀನಿವಾಸನು ಶುಕಮುನಿಯಿಂದ ನಿರೋಪಪಡೆದು ಅವರಿಗೂ ಕಲ್ಯಾಣೋತ್ಸವಕ್ಕಾಗಿ ಬರಲು ನಿವೇದಿಸಿ ಎಲ್ಲರೊಡನೆ ಮುಂದೆ ಸಾಗಿದನು

ಎಲ್ಲರೂ ಮುನ್ನಾದಿನದಂತೆ ಚಕ್ಕಂದದಿಂದ ಹಾಡಿಗುಂಪ ಸರಸಸವಿನುಡಿಗಳನ್ನಾಡುತ್ತ ನಡೆದರು. ಅಂದು ಸೂರ್ಯನು ಪಶ್ಚಿಮಸಾಗರವನ್ನು ಸೇರುವ ಸಮಯಕ್ಕೆ ಆಕಾಶರಾಜನ ಪಟ್ಟಣದ ಸನಿಹಕ್ಕೆ ಬಂದರು ಕರೆಯಲು ಬಂದ ಪುರೋಹಿತನು ತಾನು ಮುಂದೆ ಹೋಗಿ ಆಕಾಶರಾಜನಿಗೆ ವೇಂಕಟಾಚಲದಿಂದ ಶ್ರೀನಿವಾಸನು ಸಡಗರ ವೈಭವದಿಂದ ಹೊರಟು ಶುಕಮುನಿಯಾಶ್ರಮದಲ್ಲಿ ನಿನ್ನಿನದಿವಸವನ್ನು ನೂಕಿ ಇಂದು ಇದೇ ಈಗ ಬಂದಿರುವನು ಉತ್ತರದಿಕ್ಕಿನ ತಮ್ಮ ಪುರೋದ್ಯಾನದಲ್ಲಿ ಅವರನ್ನೆಲ್ಲ ಇರಿಸಿ ನಾನು ತಮಗೆ ಅದನ್ನು ಸೂಚಿಸಲು ಬಂದಿರುವೆನೆಂದು ಹೇಳಿದನು ಬಳಿಕ ಆಕಾಶರಾಜನು ಗಡಬಿಡಿಯಿಂದ ತನ್ನ ಆಪ್ತವರ್ಗದವರನ್ನೂ ಮಂತ್ರಿಗಳೇ ಮೊದಲಾದವರನ್ನೂ ಕರೆಯಿಸಿದನು ಆತನ ತಮ್ಮ ತೋಂಡಮಾನನ ಪ್ರಾಮುಖ್ಯತೆಯಲ್ಲಿ ಊರಿನ ಎಲ್ಲ ಶ್ರೇಷ್ಠಿ ಸಾಹುಕಾರರೂ, ರಾಜ ಮನ್ನಣೆಯವರೂ ಅಲ್ಲಿಗೆಬಂದರು ಕುಲಗುರು ಬೃಹಸ್ಪತಿಯು ಎಲ್ಲ ವೇದಪಿತ್ ಭೂಸುರರೊಂದಿಗೆಯೂ ಧರಣೀದೇವಿಯು ಪುರಪ್ರಮುಖ ನಾರಿಯರ ಗಡಣದಿಂದಲೂ ಸಜ್ಜಾಗಿ ಮಂಗಲಕಾರಕ ಅಲಂಕಾರಯುಕ್ತ ಪದಾರ್ಥಗಳನ್ನು ಹಿಡಿದುಕೊಂಡು ಎದುರ್ಗೊಂಡು ಒರಲು ಹೊರಟು ನಿಂತರು ಆಗ ಆಕಾಶರಾಜನು ಭದ್ರಗಜವೊಂದನ್ನು ಶೃಂಗರಿಸಿ ತರಿಸಿ ಅದರಮೇಲೆ ಪದ್ಮಾವತಿಯನ್ನು ಕುಳ್ಳಿರಿಸಿಕೊಂಡು ಎಲ್ಲರಿಗೂ ನಗರದ ಉದ್ಯಾನಕ್ಕೆ ಬೀಗರನ್ನು ಎದುರ್ಗೊಂಡು ಬರಲು ನಾಗಲು ಹೇಳಿ ತಾನೂ ಹೊರಟನು. ಮುಂದೆ ಹಲವು ಮಂಗಲವಾದ್ಯಗಳು ಆಕಾಶಮಂಡಲವನ್ನು ಭೇದಿಸುವಂತೆ ಧ್ವನಿ ಮಾಡಹತ್ತಿದವು. ಅವರ ಹಿಂದೆ ಆಕಾಶರಾಜನ ಸೈನ್ಯವೆಲ್ಲ ಶೃಂಗಾರವಾಗಿ ಸೇನಾಪತಿಯ ಆಜ್ಞೆಯಂತೆ ಶಿಸ್ತಿನಿಂದ ನಡೆಯಹತ್ತಿತು. ಅವರ ತರುವಾಯ ತೋಂಡದಮಾನನು ನಗರ ಪ್ರಮುಖರಿಂದ ಕೂಡಿ ಸಾಗಿದನು ಗುರು– ಬೃಹಸ್ಪತ್ಯಾಚಾರ್ಯರು

ವೇದಮಂತ್ರಗಳನ್ನುಚ್ಚರಿಸುವ ಋಷಿ–ಬ್ರಾಹ್ಮಣರ ಸಮೂಹದಿಂದ ಕೂಡಿ ಅವರ ಹಿಂದಿನ ಸಾಲಿನಲ್ಲಿ ಸಾಗಿದರು. ಅವರ ತರುವಾಯ ಪದ್ಮಾವತೀ ದೇವಿಯೇರಿದ ಭದ್ರಗಜವೂ ಅವರಹಿಂದೆ ಧರಣೀದೇವಿ ಮೊದಲಾದ ಸ್ತ್ರೀಯರೂ ಆ ಬಳಿಕ ತನ್ನ ಮಂತ್ರಿ–ಸರದಾರ ಮಾನಕರಿಗಳೊಡನೆ ಆಕಾಶ ರಾಜನೂ ಅಳಿಯನಾಗುವ ಶ್ರೀನಿವಾಸನನ್ನು ಎದುರ್ಗೊಂಡುಬರಲು ಸಂಭ್ರಮ ದಿಂದ ಹೊರಟರು. ಈ ಪ್ರಕಾರವಾದ ಸೊಬಗಿನಿಂದ ನಗರವನ್ನು ದಾಟಿ ಆ ಸಂಭ್ರಮದ ಮೆರವಣಿಗೆಯು ಪುರೋದ್ಯಾನವನ್ನು ಸಮೀಪಿಸಿ ಬರಹತ್ತಿತು.

ತಮ್ಮನ್ನು ಎದುರುಗೊಳ್ಳಲು ಬರುವ ಆಕಾಶರಾಜನ ಸೊಬಗಿನ ಸನ್ನಾಹವನ್ನು ದೂರದಲ್ಲೇ ನಿರೀಕ್ಷಿಸಿ ಶ್ರೀನಿವಾಸನು ತನ್ನ ಎಲ್ಲ ಪರಿವಾರ ವನ್ನು ಸಜ್ಜಾಗಲು ಎಚ್ಚರಿಸಿದನು. ಸಮೀಪಿಸಿ ಬಂದ ಆಕಾಶರಾಜನ ಕಡೆಯ ಮೆರವಣಿಗೆಯ ಗುಂಪನ್ನು ನೋಡಿ ದೇವೇಂದ್ರನು ತನ್ನ ಕೋಟ್ಯಾನು ಕೋಟಿ ಅಮರರೆಲ್ಲರಿಗಿಂತಲೂ ಆಕಾಶರಾಜನ ಈ ಪರಿವಾರವೆಲ್ಲ ಸಂಖ್ಯೆ ಯಿಂದ ಮಿಗಿಲಾಗಿರಬಹುದೆಂದು ತರ್ಕಿಸಿದನು. ದೇವ–ಋಷಿಗಳೆಲ್ಲ ಗಗನ ಮಂಡಲದಲ್ಲಿರುವ ಅಸಂಖ್ಯ ತಾರೆಗಳ ಕಾಂತಿಯನ್ನು ಹಿಂದೊಗೆವ ರೋಹಿಣೀ ತಾರೆಯಂತೆ ಶೋಭಿಸುತ್ತಿರುವ ಗಜವಾಹಿನೆ ಪದ್ಮಾವತಿಯನ್ನು ದೂರದಿಂದಲೇ ಕಂಡು "ಶ್ರೀನಿವಾಸನಿಗ ತಕ್ಕ ಕನ್ಯೆಯೆಂದರೆ ಪದ್ಮಾವತಿಯು" ಎಂದು ತಮ್ಮ ಸ್ಪಷ್ಟವಾದ ನುಡಿಯನ್ನು ನುಡಿಯಹತ್ತಿದರು. ದೇವಋಷಿ ಸ್ತ್ರೀಯ ರೆಲ್ಲರೂ ಆ ಪದ್ಮಾವತಿಯನ್ನು ಆಕೆಯು ಇನ್ನೂ ಆನೆಯಮೇಲಿರುವಾಗಲೆ ಹುಬ್ಬುಗೈಹಚ್ಚಿ ವಿಸ್ಮಯಕರವೆ ಒಮ್ಮೆ ಆಕೆಯಕಡೆಗೆ ನೋಡುವರು. ಒಮ್ಮೆ ಶ್ರೀನಿವಾಸನ ವಕ್ಷದಲ್ಲಿ ಕುಳಿತ ಲಕ್ಷ್ಮೀದೇವಿಯನ್ನು ನಿರೀಕ್ಷಿಸುವರು. ಅವರಿ ಗೆಲ್ಲ ಆ ಎರಡೂ ರೂಪಗಳ ಚೆಲುವಿಕೆಯು ಒಂದೇ ತೆರನಾಗಿ ಕಂಡು ಇವಳು "ಲಕ್ಷ್ಮಿಯು" "ಅವಳು ಪದ್ಮಾವತಿಯು" ಎಂದು ವಿಂಗಡಿಸುವದು ಅವರಿಗೆ ದುಸ್ತರವಾಯಿತು. ಬಕುಲಾವತಿಯಂತೂ ಆನೆಯನ್ನೇರಿ ಕುಳಿತ ಪದ್ಮಾವತಿ ಯನ್ನು ತನ್ನ ಕನೀನಿಕೆಯನ್ನು ಸಣ್ಣದು ದೊಡ್ಡದನ್ನಾಗಿ ಮಾಡಿ ನೋಡಿ ತನ್ನ ಬಯಕೆಯೀಡೇರಿತೆಂದು ಭಾವಿಸಿದಳು. ಶ್ರೀನಿವಾಸ—ಲಕ್ಷ್ಮೀದೇವಿ ಯರು ಗರುಡನ ಸ್ಕಂಧದಲ್ಲಿಯೇ ಪದ್ಮಾವತಿಯನ್ನು ಕಂಡು ಪರಸ್ಪರ ನೋಡುತ್ತ ಮುಗುಳ್ನಗೆ ಬೀರಹತ್ತಿದರು.

ಈ ಪ್ರಕಾರವಾಗಿ ಆಕಾಶರಾಜನ ಕಡೆಯ ಯಾವತ್ತು ಪರಿವಾರ ದವರು ಮೆರವಣಿಗೆಯೊಂದಿಗೆ ಪುರೋದ್ಯಾನಕ್ಕೆ ಬಂದು ಶ್ರೀನಿವಾಸನನ್ನು ಕಂಡರು. ತನ್ನರಥದಿಂದಿಳಿದು ಮುಂದೆ ಬಂದ ಆಕಾಶರಾಜನನ್ನು ಕಂಡು ದೇವೇಂದ್ರನು ಆತನ ಎದುರುಹೋಗಿ ಆತನ ಹಸ್ತಾಂದೋಲನವನ್ನುಮಾಡಿ ಆತನನ್ನು ಶ್ರೀನಿವಾಸನ ಹತ್ತಿರ ಕರೆದೊಯ್ದನು ಗರುಡಾರೂಢನೂ ಶ್ವೇತ ಛತ್ರದಿಂದ ಶೋಭಿತನೂ, ಯುವಕನೂ, ಸುಂದರನೂ ಮತ್ತು ಮನಹರ ಮುಖಕಮಲನೂ ಆಗಿರುವ ಶ್ರೀನಿವಾಸನನ್ನು ಆಕಾಶರಾಜನಿಗೆ ದರ್ಶನ ಮಾಡಿಸಿದನು. ಆತನನ್ನು ಕಂಡು ಆಕಾಶರಾಜನು ತನ್ನ ಮನಸ್ಸಿನಲ್ಲಿ ' ನಾನೇ ಧನ್ಯನು ' ಎಂದು ಸಂತೋಷಪಟ್ಟನು. ಆಜಾನುಬಾಹುವಾಗಿ ಗಂಭೀರ ಮುಖಮುದ್ರೆಯುಳ್ಳ ಆಕಾಶ ರಾಜನನ್ನು ನಾರದರ ಸೂಚನೆಯಂತೆ ಶ್ರೀನಿವಾಸನು ಗರುಡನಿಂದ ಕೆಳಗಿಳಿದು ವಂದಿಸಿದನು ಮತ್ತು ನಾರದ ನನ್ನು ಕುರಿತು—' ನಾರದರೇ ನನ್ನ ಪೂರ್ವಕೃತ ಪುಣ್ಯದಿಂದ ಈ ಆಕಾಶ ರಾಜನು ನನಗೆ ಸಂಬಂಧಿಕನಾದನು. ಅದರಿಂದ ನಾನು ಧನ್ಯನಾದೆ ' ಎಂದು ಉದ್ಗಾರತೆಗೆದನು. ಬಳಿಕ ಆಕಾಶರಾಜನು ಪದ್ಮಾವತಿಯನ್ನು ಗಜದಿಂದ ಅವರೋಹಿಸಿಕೊಂಡು ಬರಲು ಸೂಚಿಸಿ ತಾನು ದ್ವಾರ ತೋರಣವನ್ನು ದಾಟಿ ಬಂದನು. ಹಾಗು ಅಮೂಲ್ಯ ವಸ್ತ್ರಾಭರಣಗಳಿಂದಲೂ, ಪರಿಮಳವನ್ನು ಹರಡುವ ಪುಷ್ಪಾದಿಗಳಿಂದಲೂ ಶ್ರೀನಿವಾಸನ ಪಾದಗಳನ್ನು ತೊಳೆದು ಪೂಜೆ ಮಾಡಹತ್ತಿದನು. ಆನೆಯಿಂದಿಳಿದು ಬಂದ ಪದ್ಮಾವತಿಯು ತನ್ನ ಮೇಲುದ ವನ್ನು ಸ್ವಲ್ಪಸರಿಸಿ. ಆಕಾಸ ರಾಜನಿಂದ ಪೂಜೆಗೊಳ್ಳುವ ಶ್ರೀನಿವಾಸನನ್ನು ಪಾದದಿಂದ ಶಿರಸ್ಸಿನ ಮೇಲಿನ ರತ್ನಮಯ ಕಿರೀಟನವರೆಗೆ ಓರೆಗಣ್ಣಿನಿಂದ ನೋಡಿದಳು. ಮತ್ತು ಹರುಷದಿಂದ ಪುಲಕಾಂಕಿತಳಾದಳು. ಇತ್ತ ಶ್ರೀನಿವಾಸನೂಸಹ ತನ್ನ ಹತ್ತಿರಿರುವ ದೇವತೆಗಳೊಡನೆ ಮಾತನಾಡುತ್ತಲೇ ಪದ್ಮಾವತಿಯ ಕಡೆಗೆ ದೃಷ್ಟಿ ಚೆಲ್ಲಿದನು. ಆಗ ಅವನಲ್ಲುಂಟಾದ ಮೋಹ ಕತೆಯನ್ನು ಅವನಿಗೆ ಮರೆಮಾಡುವದು ಅಸಾಧ್ಯವಾಯಿತು. ಆದರೂ ಆಕಾಶರಾಜನ ಕುಶಲ–ಕ್ಷೇಮುಗಳನ್ನು ವಿಚಾರಿಸುವ ಔಪಚಾರಿಕ ನುಡಿ ಗಳಲ್ಲಿಯೇ ಅದನ್ನು ಸಾಧಿಸಿಕೊಂಡನು. ಆದರೂ ಅವನಿಂದ ' ಪದ್ಮಾವತಿ ಯನ್ನು ಈಗಲೇ ದೃಷ್ಟಿಸಕೂಡದು ' ಎಂದು ಬಂಧಿತವಾಗಿದ್ದ ಆತನ ಕಣ್ಮನ

ಗಳು ಆತನ ನಿಯಂತ್ರಣವನ್ನು ಪೂರ್ಣ ಮನ್ನಿಸದಾದವು. ಅವನ ಮನಸ್ಸಿನ ಪ್ರಚೋದನೆಯಿಂದ ಕಣ್ಣುಗಳು ಮತ್ತೆ ಮತ್ತೆ ಕಳ್ಳ ನೋಟವನ್ನು ಅವಲಂಬಿಸಿದವು. ಹಾಗು ಲೋಹ ಚುಂಬಕವು ಸೆಳೆದು ಕೊಳ್ಳುವ ಕಬ್ಬಿಣಶಲಾಕೆಯಂತೆ ಪದ್ಮಾವತಿಯ ಕಂಗಳ ನೋಟವನ್ನು ತಮ್ಮ ಕಡೆಗೆ ಜಗ್ಗಿಕೊಳ್ಳ ಹತ್ತಿದವು ಹೀಗೆ ಅಲ್ಲಿ ಅಂದರೆ ಶ್ರೀನಿವಾಸ—ಪದ್ಮಾವತಿಯರ ಪ್ರಥಮ ಸಂದರ್ಶನ ಸ್ಥಳದಲ್ಲಿ ಅವರೀರ್ವರ ದೃಷ್ಟಿಯುದ್ಧದ ಹೋರಾಟವೆಸಗಿತು. ಆದರೆ ಈ ಹೋರಾಟವು ಉಳಿದ ಯುದ್ಧಗಳಂತೆ ಮಾತ್ರ ಪ್ರತ್ಯಕ್ಷವಾಗಿರಲಿಲ್ಲೆಂಬದನ್ನು ಹೇಳಬೇಕಾಗಿಲ್ಲ

ಆ ಸಮಯದಲ್ಲಿ ಎರಡೂ ನಿಟ್ಟಿನ ಪರಿವಾರದವರು—ಅರ್ಥಾತ್ ಬೀಗ-ಬೀಗರು ಶಿಷ್ಟ ಸಾಂಪ್ರದಾಯಿಕವಾಗಿ ಒಬ್ಬರು ಇನ್ನೊಬ್ಬರನ್ನು ಅಲಿಂಗಿಸುತ್ತ ಹಾಗು ಉಪಚರಿಸುತ್ತ ನಡೆದರು ಎರಡೂ ಕಡೆಯ ಸ್ತ್ರೀ ಸಮುದಾಯಗಳಲ್ಲಿಯೂ ಕೂಡ ಇದೇ ಪ್ರಕಾರನಡೆಯಿತು. ಈ ಎದುರುಗೊಳ್ಳುವ ಕ್ರಿಯೆಯು ಸಾಗಿದಾಗಲೇ ಒಂದರ್ಧ ನಿಮಿಷದ ಹಿಂದೆ ಸ್ಪಷ್ಟವಾಗಿ ತೋರುತ್ತಿದ್ದ ಎರಡು ಬೀಗರ ತಂಡುಗಳು ಈಗ ಅವೆರಡೂ ಕೂಡಿ ಒಂದೇ ಗುಂಪಾಗಿಬಿಟ್ಟಿತು. ಅರಿಯದವರಿಗೆ ಇವರು ಶ್ರೀನಿವಾಸನ ಕಡೆಯವರು. ಅವರು ಆಕಾಶರಾಜನ ಕಡೆಯವರು ಹೀಗೆ ಗುರುತಿಸುವದು ಕಠಿಣವಾಯಿತು.

ಈ ಪ್ರಕಾರ ಎದುರುಗೊಳ್ಳುವ ಸಡಗರವು ಮುಗಿದನಂತರ ಆಕಾಶರಾಜನು ಶ್ರೀನಿವಾಸನನ್ನೂ ಪದ್ಮಾವತಿಯನ್ನೂ ರಥದಲ್ಲಿ ಕುಳ್ಳಿರಿಸಿಕೊಂಡು ಎರಡೂ ಕಡೆಯ ಸಮಸ್ತ ಪರಿವಾರದೊಡನೆ ನಗರದೊಳಕ್ಕೆ ಸೇರಿದನು. ಪುರಪ್ರವೇಶವಾದ ಕೂಡಲೆ ಶ್ರೀನಿವಾಸ-ಪದ್ಮಾವತಿಯರನ್ನು ಗ್ರಾಮದೇವತೆಯ ಮಂದಿರಕ್ಕೆ ಕರೆದೊಯ್ದನು ಅಲ್ಲಿ ಅವರು ರಥದಿಂದ ಇಳಿದು ದೇವಿಗೆ ಸಾಷ್ಟಾಂಗ ಪ್ರಣಿಪಾತಮಾಡಿದರು ಶ್ರೀನಿವಾಸನು ದೇವಿಯ ಸಮ್ಮುಖದಲ್ಲಿ ಕೈಜೋಡಿಸಿಕೊಂಡು ನಿಂತು— 'ದೇವಿ! ಈ ಪದ್ಮಾವತಿಯೇ ನನ್ನನ್ನು ವರಿಸಿ ನನ್ನ ಮೋಹದ ಮಡದಿಯಾಗುವಂತೆ ಕೃಪೆಯಮಾಡು' ಎಂದು ಪ್ರಾರ್ಥಿಸಿದನು. ಪದ್ಮಾವತಿಯೂ ಸಹ ದೇವಿಗೆ ಅರಿಸಿಣ-ಕುಂಕುಮಗಳನ್ನೇರಿಸಿ- ತಾಯಿ ! ಜಗದಂಬೆ ! ಸೌಭಾಗ್ಯದಾಯಿನಿ ! ಈ ಜನ್ಮದಲ್ಲಿಯೂ ಜನ್ಮ-ಜನ್ಮಾಂತರದಲ್ಲಿಯೂ ಈ ಶ್ರೀನಿವಾಸ ಪ್ರಭುವೇ ನನ್ನ ಪತಿಯಾಗುವಂತೆ

ಹರಕೆಯಿತ್ತು ನಮ್ಮನ್ನು ಸಂರಕ್ಷಿಸಬೇಕು' ಎಂದು ಬೇಡಿಕೊಂಡು ದೇವಿಗೂ ಪತಿಯಾಗಲಿರುವ ಶ್ರೀನಿವಾಸನಿಗೂ ನಮಸ್ಕಾರಮಾಡಿದಳು. ಇಷ್ಟಾದ ಬಳಿಕ ಅವರಿಬ್ಬರು ತಮ್ಮ ತಮ್ಮ ವಾಹನಗಳಲ್ಲಿ ಮೆರವಣಿಗೆಯೊಂದಿಗೆ ಪುರದ ಮಧ್ಯದಲ್ಲಿ ಪ್ರವೇಶಿಸಿದರು. ಮೆರವಣಿಗೆಯಲ್ಲಿ ಸಾವಿರಾರು ಪ್ರಕಾರ ಮಾನವಾದ ದೀವಟಿಗೆಗಳು ಬೆಳದಿಂಗಳಿನ ಆಕಾಶದಲ್ಲಿಯ ತಾರೆಗಳಂತೆ ಹೊಳೆಯುತ್ತಿದ್ದವು. ವೀಣಾ-ವೇಣು ಮೊದಲಾದ ವಾದ್ಯಘೋಷಗಳು ಚತುರ್ದಿಕ್ಕುಗಳನ್ನು ಭೇದಿಸಿ ಸಾಗುವಂತೆ ಮೊಳಗುತ್ತಿದ್ದವು. ಗಂಧರ್ವರಗಾಯನ, ವಂದಿಮಾಗಧ ಮೊದಲಾದವರ ಸ್ತುತಿ ಪಠನವೂ ಅವ್ಯಾಹತವಾಗಿ ನಡೆದಿದ್ದವು. ಋಷಿಗಳೂ ಬ್ರಾಹ್ಮಣರೂ ಉದ್ಘೋಷಿಸುವ ವೇದಮಂತ್ರಗಳಿಂದಲೂ ಇಂದ್ರಾದಿದೇವತೆಗಳುಚ್ಚರಿಸುವ ಧನ್ಯವಾದಗಳಿಂದಲೂ ದುಮುದುಮುವೆನ್ನುತ್ತ ಮೆರವಣಿಗೆಯು ಮುಂದೆ ಸಾಗುತ್ತಲಿತ್ತು. ಈ ಪ್ರಕಾರ ನಡೆವ ಮೆರವಣಿಗೆಯು ಹಲವು ಬಗೆಯಿಂದ ಶೃಂಗರಿಸಿದ ರಾಜ ವೀಥಿಯಲ್ಲಿ ಬರುತ್ತಿರಲು ಪುರನಾರಿಯರು ಅಲ್ಲಲ್ಲಿ ವಧೂವರರಿಗೆ ಆರತಿಯನ್ನೆತ್ತಿ ಮುತ್ತಿನ ಅಕ್ಷತೆಗಳನ್ನು ಹಾಕುತ್ತಿದ್ದರು. ಶೋಭೆಯಿಂದ ಒಪ್ಪುವ ಶ್ರೀನಿವಾಸ-ಪದ್ಮಾವತಿಯರನ್ನು ನಗರದ ಆಬಾಲವೃದ್ಧರೆಲ್ಲ ಕಣ್ಮನ ದಣಿಯುವಂತೆ ನೋಡಿ ನೋಡಿ ತಮ್ಮ ನೇತ್ರ ಸಾಫಲ್ಯವನ್ನು ಮಾಡಿಕೊಂಡರು. ಈ ಪ್ರಕಾರದ ಸಂಭ್ರಮದಿಂದ ಸಾಗುತ್ತ ಕಡೆಗೆ ಕೇವಲ ಶ್ರೀನಿವಾಸನಿಗಾಗಿ ವಿಶ್ವಕರ್ಮನಿಂದ ನಿರ್ಮಿತವಾದ ಮನೋಹರವಾದ ಮಂದಿರಕ್ಕೆ ಮೆರವಣಿಗೆ ಬಂದು ತಲುಪಿತು. ಶ್ರೀನಿವಾಸನೂ ಆತನ ಕಡೆಯ ಯಾವತ್ತು ದೇವ-ಮಾನವರೂ ಆ ಮಂದಿರವನ್ನು ಒಳಹೊಕ್ಕು ಹಲವು ಮಂದಿರಗಳಲ್ಲೆಲ್ಲ ಇಳಿದುಕೊಂಡರು. ಇದಿರ್ಗೊಳ್ಳಲಿಕ್ಕೆ ಹೋಗಿದ್ದ ಆಕಾಶರಾಜನ ಪರಿವಾರವೆಲ್ಲವೂ ಬೀಗರನ್ನು ಬಿಡಾರಗಳಲ್ಲಿರಿಸಿದ ನಂತರ ತಮ್ಮ ತಮ್ಮ ಮನೆಗಳಿಗೆ ಹೋದರು. ರಾಜನು ಸಹಿತವಾಗಿ ರಾಜಪರಿವಾರವೆಲ್ಲವೂ ಅರಮನೆಗೆ ಹಿಂತಿರುಗಿತೆಂಬುದನ್ನು ಹೇಳಬೇಕಾಗಿಲ್ಲ.

ಇಷ್ಟರಲ್ಲಿ ಅಂದಿನ ದಿನದ ಕಾರ್ಯಕ್ರಮವು ಮುಗಿಯಲು ಐದುಗಳಿಗೆ ರಾತ್ರಿಯಾಯಿತು. ಆ ಬಳಿಕ ರಾಜ ಬಂಧು ತೊಂಡಮಾನನು ಉಪಚಾರಕ್ಕಾಗಿ ಬೀಗರಬಿಡಾರಕ್ಕೆ ಬಂದನು. ಶ್ರೀನಿವಾಸನನ್ನು ಕಂಡು—'ಶ್ರೀನಿವಾಸ! ತಮ್ಮ ಪರಿವಾರಕ್ಕೆ ಅವಶ್ಯವಿರುವ ಉಪಚಾರಗಳೇನಿರುವವೆಂಬುದನ್ನು ತಿಳಿಸುವವರಾಗಬೇಕು. ಯಥಾಶಕ್ತಿಯಾಗಿ ತಮ್ಮೆಲ್ಲರ ಇಚ್ಛೆಯನ್ನು ಪೂರೈಸುವೆವು'

ಎಂದು ವಿನಂತಿಯನ್ನು ಮಾಡಿಕೊಂಡನು. ಆಗ ಶ್ರೀನಿವಾಸನು ಬ್ರಹ್ಮನ ಮುಖಾಂತರವಾಗಿ— 'ನಾವು ಶ್ರೀನಿವಾಸ—ಲಕ್ಷ್ಮೀದೇವಿಯರಿಂದ ಸಹಿತವಾಗಿ ಎಲ್ಲರೂ ಹಸಿದಿರುವೆವು. ಅಪರರಾತ್ರಿಯು ಪ್ರಾಪ್ತವಾಗುವದರೊಳಗೇ ಎಲ್ಲರ ಭೋಜನವಾಗತಕ್ಕದ್ದು' ಎಂಬದಾಗಿ ತೋಂಡಮಾನನಿಗೆ ತಿಳಿಸಿದನು. ಆ ಕೂಡಲೆ ತೋಂಡಮಾನನು ಪಾಕಕರ್ಮ ಪ್ರವೀಣನಾದ ಅಗ್ನಿಯಿಂದ ಅಡಿಗೆಯನ್ನು ಸಿದ್ಧಮಾಡಿಸಿದನು. ಶ್ರೀನಿವಾಸ—ಲಕ್ಷ್ಮೀದೇವಿ—ಬಕುಲಾವತಿಯರನ್ನೂ ಎಲ್ಲ ದೇವತೆಗಳನ್ನೂ ಬ್ರಾಹ್ಮಣ—ಋಷಿಗಳನ್ನೂ ಊಟಕ್ಕೆಬ್ಬಿಸಿ ತಾನು ತನ್ನ ಜನರೊಂದಿಗೆ ಬಡಿಸಿ ಎಲ್ಲರನ್ನು ಸಂತುಷ್ಟಪಡಿಸಿದನು. ಭೋಜನೋತ್ತರದಲ್ಲಿ ತಾಂಬೂಲಾದಿಗಳಿಂದ ಎಲ್ಲರನ್ನು ಸತ್ಕರಿಸಿದನು. ಅಳಿಯನಾಗುವ ಶ್ರೀನಿವಾಸನನ್ನೂ ಲಕ್ಷ್ಮೀದೇವಿಯನ್ನೂ ವಸ್ತ್ರಾದಿಗಳಿಂದ ವಿಶಿಷ್ಟವಾಗಿ ಮರ್ಯಾದಿಸಿದನೆಂಬದನ್ನು ಮತ್ತೆ ಹೇಳಬೇಕಾಗಿಲ್ಲ.

ಇಷ್ಟಾದ ಬಳಿಕ ತೋಂಡಮಾನನು ಬೀಗರಲ್ಲಿಂದ ಅರಮನೆಗೆ ತಿರುಗಿದನು. ರಾತ್ರಿಯು ಬಹಳಾದುದರಿಂದಲೂ ಬೀಗರೆಲ್ಲರೂ ಮಾರ್ಗಾಯಾಸದಿಂದ ಬಳಲಿದುದರಿಂದಲೂ ಕರೆಯದಲೆ ಬಂದ ನಿದ್ರಾದೇವಿಯು ಅವರನ್ನು ಪೀಡಿಸ ಹತ್ತಿದಳು. ಕೊನೆಗೆ ಅವರೆಲ್ಲರು ಆಕೆಗೆ ಸೋತಂತಾಗಿ ತಾವು ಇಳಿದ ಮಂದಿರಗಳಲ್ಲಿ ಮಲಗಿ ಸುಖವಾಗಿ ನಿದ್ರೆಹೋದರು.

ಮರುದಿನದುದಯದಲ್ಲಿ ಶ್ರೀನಿವಾಸನು ಹಾಸಿಗೆಯಿಂದೆದ್ದು ಮುಖಮಾರ್ಜನಾದಿಗಳನ್ನೆಲ್ಲ ಮುಗಿಯಿಸಿಕೊಂಡನು. ಅಷ್ಟರಲ್ಲಿ ಪುರೋಹಿತರಾದ ವಸಿಷ್ಠಮುನಿಗಳು ಬಂದು—ಶ್ರೀನಿವಾಸ! ಇಂದು ರಾತ್ರಿಯು ಹದಿಮೂರು ಗಳಿಗೆ ಕಳೆದನಂತರ ವಿವಾಹಕ್ಕೆ ತಕ್ಕ ಮುಹೂರ್ತವು ಕೂಡುವದು. ಅದಕ್ಕಾಗಿ ನೀನು, ಲಕ್ಷ್ಮೀದೇವಿ, ತಾಯಿ ಬಕುಲಾವತಿ, ಬ್ರಹ್ಮ ಹಾಗು ಪುರೋಹಿತನಾದ ನಾನು ಈ ಐಯ್ವರನ್ನು ಹೊರತುಪಡಿಸಿ ಉಳಿದೆಲ್ಲರ ಭೋಜನವಾಗಬೇಕು. ಅದರಂತೆ ವಧುಪಕ್ಷದಲ್ಲಿ, ವಧುವು, ಆಕೆಯ ತಾಯಿ–ತಂದೆಗಳೂ, ಕಕ್ಕ ತೋಂಡಮಾನನು ಹಾಗು ಅವರ ಪುರೋಹಿತನು ಹೀಗೆ ಐದುಜನರು ಕನ್ಯಾದಾನ ಮಾಡಿಕೊಡದೆ ಭೋಜನ ಮಾಡಬಾರದು. ಈ ನೇಮವನ್ನು ಕುಬೇರನ ಮುಖಾಂತರ ಆಕಾಶ ರಾಜನಿಗೆ ಸೂಚಿಸಿ ಅಡುಗೆಯನ್ನು ಸಿದ್ಧಪಡಿಸಲು ತಿಳಿಸಬೇಕು' ಎಂದು ನಿವೇದಿಸಿದನು. ಆ ಕೂಡಲೆ

ಶ್ರೀನಿವಾಸನು ತನ್ನ ಪುರೋಹಿತನ ವಾಕ್ಯವನ್ನು ಕುಬೇರನಿಂದ ಆಕಾಶ ರಾಜನಿಗೆ ತಿಳಿಸಿದನು ಈ ಮಾತು ಆಕಾಶರಾಜನಿಗೆ ಒಪ್ಪಿತವಾಯಿತು. ಅದರಂತೆ ಅಡಿಗೆಮಾಡಿಸಿ ಬೀಗರ ಕಡೆಯವರನ್ನೂ ತನ್ನವರನ್ನೂ ಭೋಜನ ಮಾಡಿಸಿ ಸತ್ಕರಿಸಿದನು

ಬಳಿಕ ವಿವಾಹಮುಹೂರ್ತವು ಸಮೀಪಿಸಿತೆಂಬದನ್ನು ಕನ್ಯಾಪಕ್ಷದ ಪುರೋಹಿತನು ಹಾಕಿದ ಗಳಿಗೆಬಟ್ಟಲಿ ಸಹಾಯದಿಂದ ಅರಿತು ಆಕಾಶರಾಜನು ವೈಭವದಿಂದ ತನ್ನ ಎಲ್ಲರೊಡನೆ ಬೀಗರಲ್ಲಿಗೆ ಅಳಿಯನನ್ನು ಲಗ್ನಕ್ಕೆ ಕರೆಯಲು ಹೋದನು.

ಆಕಾಶರಾಜನ ಅರಮನೆಯಮುಂದಿನ ಭವ್ಯ ಪಟಾಂಗಣದಲ್ಲಿಯೇ ವಿಶ್ವ ಕರ್ಮನಿಂದ ವಿವಾಹಮಂಟಪವು ಸಿದ್ಧವಾಗಿತ್ತು ಕೇವಲ ವಧೂ–ವರರಿಗೆ ನಿರ್ಮಿಸಿದ ಬೋರಜಗುಲಿಯು ಎತ್ತರವಾಗಿ ಕಟ್ಟಲ್ಪಟ್ಟು ಮಂಟಪದ ಯಾವ ಬದಿಯಿಂದ ನಿರೀಕ್ಷಿಸಿದರೂ ವಧೂ–ವರರ ಮುಖಗಳುತೋರುವಂತೆ ಒಳ್ಳೆ ಜಾಣ್ಮೆಯನ್ನುಪಯೋಗಿಸಿ ರಚಿಸಲಾಗಿತ್ತು ಆ ಮಂಟಪದಲ್ಲಿ ದೇವತೆಗಳು, ಋಷಿಗಳು, ಬ್ರಾಹ್ಮಣರು, ರಾಜಮನೆತನದವರು, ಮಂತ್ರಿಮೊದಲಾದರು, ನಗರ ಶ್ರೇಷ್ಠಿ-ಸಾವುಕಾರರು, ರೈತ–ರಾಹಣಿಯವರು, ಭಿಕ್ಷುಕರು, ವಾದ್ಯನುಡಿ ಸುವವರು ಈ ಎಲ್ಲ ಭಿನ್ನ ಬಿನ್ನ ತರಗತಿಯವರಿಗೆ ತಕ್ಕಂತೆ ಸ್ಥಳಗಳ ಏರ್ಪಾಡಾಗಿತ್ತು. ಸ್ತ್ರೀಯರಿಗಾಗಿ ಅವರಲ್ಲಿಯ ತಾರತಮ್ಯದಂತೆಯೂ ಭದ್ರ ಸ್ಥಾನಗಳು ಗೊತ್ತು ಮಾಡಲ್ಪಟ್ಟಿದ್ದವು ಇದಲ್ಲದೆ ಮಂಟಪದಲ್ಲಿಯ ನೇತಾಡುವ ಝುಮರಿನ ದೀವಿಗೆಗಳು ಮಾಣಿಕ ಶಲಾಕೆಗಳನ್ನು ಚಲ್ಲುತ್ತಿರುವವೋ ಏನೋ ಅನ್ನುವಂತೆ ಪ್ರಕಾಶಮಾನವಾಗಿ ಮಂಟಪದ ತುಂಬೆಲ್ಲ ಶೋಭಿಸುತ್ತಿದ್ದವು ನಕ್ಷತ್ರ ಮಾಲೆಯಂತೆ ಶೋಭಿಸುತ್ತಿದ್ದ ಬಂಗಾರದ ಹಣತೆಗಳಲ್ಲಿ ಹಚ್ಚಿದ ನಾಲು ದೀವಿಗೆಗಳೂ, ತರತರದ ಬಣ್ಣದಿಂದ ಬೆರೆತ ಸುವಾಸಿಕ ನೀರಿನ ಕಾರಂಜಿಗಳೂ ಅಲ್ಲಲ್ಲಿ ಮಂಟಪದ ಶೋಭೆಗಾಗಿ ಭಿತ್ತಿಗೆ ತೂಗಹಾಕಿದ ತಸಬೀರುಗಳೂ ಆ ಮಂಟಪಕ್ಕೆ ಮಿತಿಮೀರಿದ ಭೂಷಣವನ್ನುಂಟು ಮಾಡಿದ್ದವು. ಮಂಟಪದ ನೆಲಕ್ಕೆ ಹಾಕಿದ್ದ ಚಾತುರ್ಯದರ್ಶಕ ರಂಗವಲ್ಲಿಯ ನಕ್ಷೆಗಳು ಅಲ್ಲಿಯ ಎಲ್ಲರ ಲಕ್ಷ್ಯವನ್ನು ಸಳದೊಯ್ಯುತ್ತಿದ್ದವು ಮಂಟಪದ ಆ ಭೂಪ್ರದೇಶದಲ್ಲಿ ಹಾಸಿದ ರತ್ನಗಂಬಳಿಗಳು ಪದ್ಮಾವತಿಯ ತಾಯಿ ಭೂದೇವಿಗೆ ಉಡುಗೊರೆಯಾಗಿ ನೀಡಿದ ವಸ್ತ್ರಗಳಂತೆ ಕಂಗೊಳಿಸುತ್ತಿದ್ದವು

ತಾನಿಳಿದ ಮನೆಯಿಂದ ಮದುಮಗನು ಬಂದ. ಅವನೊಡನೆ ಅವನ ಜನರೆಲ್ಲರೂ ಕರೆಯ ಹೋದ ರಾಜನೂ ಪರಿವಾರದವರೂ ಬಂದರು. ಮೇಲೆ ವರ್ಣಿಸಿದ ಮಂಟಪಕ್ಕೆ ಎಲ್ಲರೂ ಪ್ರವೇಶ ಮಾಡಿದರು ಅಲ್ಲಿಯ ಶಿಸ್ತನ್ನು ಕಾಯಲು ತೋಂಡಮಾನನಿಂದ ನಿಯಮಿಸಿದ ಸ್ವಯಂಸೇವಕರು ಎಲ್ಲರನ್ನೂ ಅವರವರ ಉಚಿತಾಸನದಲ್ಲಿ ಕುಳ್ಳಿರಿಸಿದರು ಸುರಲೋಕದ ಅಮರ–ಅಮರಿಯರಲ್ಲಿ ಮೊದಲೇ ಬಾರಲಿಕ್ಕಾಗದ ಕಲ ದೇವತೆಗಳು ತಮ್ಮ ತಮ್ಮ ವಿಮಾನಗಳನ್ನೇರಿ ತತ್ಕಾಲಕ್ಕೆ ಬಂದು ಅಂತರಿಕ್ಷದಲ್ಲಿ ಸ್ಥಿತರಾದರು.

ಈ ಪ್ರಕಾರ ಕಲ್ಯಾಣೋತ್ಸವಕ್ಕಾಗಿ ಎಲ್ಲರೂ ಬಂದು ವಿವಾಹ ಮಂಟಪದಲ್ಲಿ ಬಂದು ವಿರಾಜಮಾನರಾದರು

ಆಗ ಆಕಾಶರಾಜನ ಪುರೋಹಿತನು ಅಲಂಕೃತರಾಗಿ ಬಂದ ರಾಜ–ರಾಣಿಯರನ್ನು ಶ್ರೀನಿವಾಸನು ಕುಳಿತ ಮಣಿಮಯ ಪೀಠದ ಬದಿಯಲ್ಲಿ ಕುಳ್ಳಿರಿಸಿದನು ಹಾಗು ಅವರಿಂದ "ನಾವು ಶ್ರೀನಿವಾಸನಿಗೆ ಪದ್ಮಾವತಿಯನ್ನು ಕನ್ಯಾದಾನವಾಗಿ ಧಾರೆಯೆರೆದು ಕೊಡುತ್ತೇವೆ" ಎಂಬ ಸಂಕಲ್ಪವನ್ನು ವಿಧಿಪೂರ್ವಕ ಮಾಡಿಸಿದನು ಮಧುಪರ್ಕವನ್ನೂ ಅಳಿಯನ ಪಾದಪ್ರಕ್ಷಾಲನೆಯನ್ನೂ ಮಾಡಿಸಿದನು ಶ್ರೀನಿವಾಸನ ಪಾದೋದಕದಿಂದ ತಮ್ಮ ಜನ್ಮ ಸಾಫಲ್ಯವಾಯಿತೆಂದು ರಾಜ–ರಾಣಿಯರು ಅದನ್ನು ತಮ್ಮ ಶಿರಸ್ಸಿಗೆ ಧಾರಣ ಮಾಡಿದರು. ಇದಾದಬಳಿಕ ದಿವ್ಯಾಲಂಕೃತೆಯಾದ ಪದ್ಮಾವತಿಯನ್ನು ಕರೆತಂದು ಶ್ರೀನಿವಾಸನ ಸಮ್ಮುಖದಲ್ಲಿ ಕುಳ್ಳಿರಿಸಿದ. ಆಗ ಕನ್ಯೆಯಕಡೆಯ ಪುರೋಹಿತ ಬೃಹಸ್ಪತ್ಯಾಚಾರ್ಯರು— "ಅತ್ರಿಋಷಿಯಿಂದ ನಡೆದು ಬಂದ ಪರಂಪರೆಯಲ್ಲಿ ಜನಿಸಿದ ಸುವೀರನ ಮೊಮ್ಮಗಳೂ, ಆಕಾಶರಾಜನ ಮಗಳೂ ಆಗಿರುವ "ಪದ್ಮಾವತಿ, ಎಂಬ ಹೆಸರಿನ ಸಾಲಂಕೃತಳಾದ ಕನ್ಯೆಯನ್ನು ಶ್ರೀನಿವಾಸನೇ ನೀನು ಪಾಣಿಗ್ರಹಣದಿಂದ ಅಂಗೀಕರಿಸು" ಎಂದು ದೀರ್ಘೋಚ್ಚಾರ ಮಾಡಿದನು. ಅದರಂತೆ ವರ ಪಕ್ಷದ ಪುರೋಹಿತ ವಶಿಷ್ಠರು— "ವಶಿಷ್ಠ ಗೋತ್ರಜನಾದ ಯಯಾತಿರಾಜನ ಮರಿಮಗನೂ, ಶೂರಸೇನನ ಮೊಮ್ಮಗನೂ, ವಸುದೇವನ ಪುತ್ರನೂ ಆಗಿರುವ ವೇಂಕಟೇಶನಿಗೆ ಹೇಮಾಲಂಕೃತಳಾದ "ಪದ್ಮಾವತಿ" ಎಂಬ ಹೆಸರಿನ ವಧುವನ್ನು ನಾವು ಅಂಗೀಕರಿಸುತ್ತೇವೆ. ಈ ಪ್ರಕಾರ ಕನ್ಯೆಯ ಹಾಗು ವರನ ಗೋತ್ರ–

ಪ್ರವರಗಳನ್ನು ಉಚ್ಚರಿಸಿ ಎರಡೂ ನಿಟ್ಟಿನ ಪುರೋಹಿತರು ವಧೂ–ವರರ ನಡುವೆ "ಅಂತಃಪಟ"ವನ್ನು ಹಿಡಿದರು ಬಳಿಕ ವಿವಾಹಕಾಲ ನಿರೀಕ್ಷಣೆಯಿಂದ "ಸುಮುಹೂರ್ತೇ ಸಾವಧಾನ" ಎಂದು ಘೋಷಿಸಿ–ಪುರೋಹಿತರು ಮಂಗಳಾಷ್ಟಕವನ್ನು ಮೇಲಿತ್ತರ ಸ್ವರದಿಂದ ಉಚ್ಚರಿಸಹತ್ತಿದರು ಅಷ್ಟರಲ್ಲಿ ಕಲ್ಯಾಣೋತ್ಸವಕ್ಕಾಗಿ ಬಂದವರೆಲ್ಲರಿಗೆ ಮದು–ಮಕ್ಕಳಮೇಲೆ ಹಾರಿಸಲು ಅಕ್ಷತೆಗಳನ್ನು ನೀಡಿದರು ವಿವಾಹಕಾಲವನ್ನು ನೋಡಿ ಆ ವೇಳೆಗೆ ತಕ್ಕಂತೆ ಮಂಗಲಾಷ್ಟಕ ಪದ್ಯಗಳನ್ನುನುಡಿದರು ಗಳಿಗೆಬಟ್ಟಲು ಮುಳುಗುತ್ತಿರಲು, ವಾದ್ಯಗಳೆಲ್ಲ ಬಾರಿಸುತ್ತಿರಲು, ಕೂಡಿದವರೆಲ್ಲ ಅಕ್ಷತೆಯನ್ನು ಹಾರಿಸಲು ಆತುರರಾಗಿ ಮದು–ಮಕ್ಕಳಮೇಲೆ ದೃಷ್ಟಿಯನ್ನಿಟ್ಟು ನೋಡುತ್ತಿರಲು ಆಗಲೇ "ತದೇವಲಗ್ನಂ ಸುದಿನಂ"ಎಂಬ ಮಂತ್ರವು ಘೋಷಿಸ ಪುರೋಹಿತರ ಮುಖದಿಂದ ಹೊರಬಿದ್ದಿತು ಸ್ಪರ್ಧೆಯಿಂದ ಅದನ್ನೇ ಕಾಯುತ್ತಿದ್ದ ಮದುಮಕ್ಕಳು ಒಬ್ಬರಮೇಲೊಬ್ಬರು ಜೀನಗಳನ್ನು ಹಾರಿಸಿದರು. ಶ್ರೀನಿವಾಸನೇ ಮೊದಲು ಪದ್ಮಾವತಿಯ ತಲೆಯಮೇಲೆ ಅಕ್ಷತೆಯನ್ನು ಹಾಕಿದನು ಕೂಡಿದವರೆಲ್ಲರೂ ಅಕ್ಷತೆಯನ್ನು ಅವರೀರ್ವರಮೇಲೆ ಸುರಿಸಿದರು. ಅಂತರಿಕ್ಷದಲ್ಲಿ ನಿಂತ ದೇವತೆಗಳು ಹೂಮಳೆಗರೆದರು ಇಂತು ಶ್ರೀನಿವಾಸನ ಕಲ್ಯಾಣೋತ್ಸವವು ಸಕಲರಿಗೂ ಸಂತೋಷಕರವಾಗಿ ಪರಿಣಮಿಸಿತು

ಅಕ್ಷತಾರೋಪಣದ ತರುವಾಯ ಆಕಾಶರಾಜನು ಶುದ್ಧವಾದ ಅಂತಃಕರುಣದಿಂದ ಶ್ರೀನಿವಾಸನನ್ನು ಕುರಿತು— 'ದೇವ ದೇವೋತ್ತಮನಾದ ಶ್ರೀನಿವಾಸಾ! ಈ ನನ್ನ ಪುತ್ರಿಯನ್ನು ಕನ್ಯಾದಾನವಂದು ನಿನಗೆ ಅರ್ಪಿಸುವೆನು, ಅಂಗೀಕರಿಸುವುದು ಎಂದು ನುಡಿಯುತ್ತ ಮಂತ್ರ ಪೂತವಾದ ಸ್ವಾಮಿ ಪುಷ್ಕರಣಿ ತೀರ್ಥ ಜಲವನ್ನು ತನ್ನ ಕರಾಂಜುಳಿಯಲ್ಲಿಂದ ಧರಣೀದೇವಿಯಿಂದ ಸುರಿಸಿಕೊಂಡು ಶ್ರೀನಿವಾಸನ ಬೊಗಸೆಗೆ ಎರೆದನು ದೇವಾ! ಈ ಸಾಲಕೃಂತ ಪದ್ಮಾವತಿಯನ್ನು ಸ್ವೀಕರಿಸು. ಎಂದು ಕಂಕಣದಿಂದ ಬಂಧಿತವಾಗಿದ್ದ ಶ್ರೀನಿವಾಸನ ಕೈಯಲ್ಲಿ ಕಂಕಣದಿಂದ ಭೂಷಿತ ಪದ್ಮಾವತಿಯ ಕೈಯನ್ನು ಕೊಟ್ಟನು. ಈ ಪ್ರಕಾರ ಶ್ರೀನಿವಾಸನು ಪದ್ಮಾವತಿಯ ಪಾಣಿಗ್ರಹಣವನ್ನು ಮಾಡಿದನು ಮತ್ತು ತನ್ನ ಕರಗಳಿಂದಲೇ ಆಕೆಗ ಮಂಗಲಸೂತ್ರವನ್ನು ಬಂಧಿಸಿದನು ಮುತ್ತೈದೆಯರೆಲ್ಲ ತಮ್ಮನ್ನು ನಮಸ್ಕರಿಸಿದ




ಪದ್ಮಾವತೀ- ಶ್ರೀನಿವಾಸರ ಕಲ್ಯಾಣ ಮಹೋತ್ಸವವು

ಪದ್ಮಾವತಿಯನ್ನು ಮುತ್ತೈದೆಯಾಗು, ಪುತ್ರವತಿಯಾಗು, ಜಗನ್ಮಾತೆಯಾಗು ಎಂದು ಹರಿಸಿದರು. ಗುರುಹಿರಿಯರೆಲ್ಲ ಮಾಂಗಲ್ಯಸೂತ್ರಭೂಷಿತಳಾದ ಆಕೆಗೆ ಹರುಷಾನ್ವಿತರಾಗಿ ಆಶೀರ್ವಚನ ನುಡಿದರು.

ಆ ಬಳಿಕ ಆಕಾಶರಾಜನು ಕೋಟಿ ಸಂಖ್ಯೆಯ ಬಂಗಾರದ ಮೋಹರು ಗಳನ್ನು ವರದಕ್ಷಿಣೆಯಾಗಿಯೂ ಅನೇಕ ರತ್ನಾಭರಣ–ವಸ್ತ್ರಗಳೊಂದಿಗೆ ವರ ಭೂಷಣವನ್ನು ಕೊಟ್ಟು ಹಿರಿಹಿರಿ ಹಿಗ್ಗಿದನು ಮಾವನು ಕೊಟ್ಟ ಕಿರೀಟು ಮೊದಲಾದವನ್ನು ಶ್ರೀನಿವಾಸನು ಆಗಲೇ ಧರಿಸಿಕೊಂಡು ಶೋಭಾಯಮಾನ ನಾದನು. ಇದಲ್ಲದೆ ಆಕಾಶರಾಜನಿಂದ ಕೊಡಲ್ಪಟ್ಟ ಸುವರ್ಣಮಯ ಪಾತ್ರೆ ಗಳೆಲ್ಲವನ್ನು ಶ್ರೀನಿವಾಸನು ಆಗಲೆ ಬಕುಲಾವತಿಯ ಕೈಗೆ ಕೊಟ್ಟನು. ಆ ಬಳಿಕ ಪುರೋಹಿತ ವಶಿಷ್ಠರು ವಿವಾಹದ ಮುಖ್ಯ ವಿಧಿಯಾದ ಲಾಜಾ ಹೋಮವನ್ನು ಸಂಪೂರ್ಣಗೊಳಿಸಿದರು ರಾಜ ಪುರೋಹಿತನ ಸ್ವಸ್ತಿವಾಚ ನವೂ ಋಷಿ ಬ್ರಾಹ್ಮಣರ ಆಶೀರ್ವಚನ ವೇದಮಂತ್ರಗಳೂ ಉಚ್ಚರಿಸಲ್ಪಟ್ಟು ಅವರಿಂದ ರತ್ನ–ಮೌಕ್ತಿಕಾಕ್ಷತೆಗಳು ಮದುಮಕ್ಕಳ ಮೇಲೆ ಎರಚಲ್ಪಟ್ಟವು. ಇಷ್ಟಾದ ಬಳಿಕ ಆಕಾಶರಾಜನು ಬ್ರಾಹ್ಮಣಾದಿ ಯಾಚಕ ವರ್ಗವನ್ನೆಲ್ಲ ಭೋಜನ, ದಕ್ಷಿಣೆ, ತಾಂಬೂಲಾದಿಗಳಿಂದ ತೃಪ್ತಿಗೊಳಿಸಿದನು. ತಾನೂ ಶ್ರೀನಿವಾಸನ ಹಾಗೂ ಅವನ ಆಪ್ತರಿಂದೊಡಗೂಡಿ ಭೋಜನವನ್ನು ಮಾಡಿ ದನು ಈ ಪ್ರಕಾರ ವಿವಾಹದಿನದ ಮುಖ್ಯಕಾರ್ಯಗಳೆಲ್ಲ ನೆರವೇರಿಸಲ್ಪಟ್ಟವು.

ಮರುದಿನದಿಂದ ಸತತವಾಗಿ ನಾಲ್ಕು ದಿನ ಭೋಜನ ಸಮಾರಂಭಗಳು ನಡೆದವು. ಐದನೆಯ ದಿನದಲ್ಲಿ ವಿವಾಹದ ಮುಕ್ತಾಯ ಸಮಾರಂಭಗಳಾದ 'ನಾಗವಲ್ಲಿ'ಯೂ ' ಕೂಸನ್ನೊಪ್ಪಿಸುವದೂ ಇವೆಲ್ಲವು ಯಥಾಸಾಂಗವಾಗಿ ಪೂರ್ತಿಗೊಂಡವು. 'ಪದ್ಮಾವತಿ'ಯನ್ನು ಶ್ರೀನಿವಾಸನಿಗೆ ಒಪ್ಪಿಸುವಾಗಂತೂ ಆಕಾಶರಾಜ–ಧರಣೀದೇವಿಯರ ಹಾಗು ತೊಂಡಮಾನ ಮೊದಲಾದ ರಾಜ ಸಂಬಧಿಂಕರ ಕಂಗಳಿಂದ ಬಾಷ್ಪಗಳುದುರಿ ಧಾರೆಗಟ್ಟಿ ಹರಿದವು. ಆಗಿನ ಅವ ರೆಲ್ಲರ ಹೃದಯ ಸ್ಥಿತಿಯನ್ನು ಹೆಮ್ಮಕ್ಕಳನ್ನು ಹೆತ್ತು ಹೆರವರ ಮನೆಗೆ ಲಗ್ನ ಮಾಡಿ ಕೊಟ್ಟು ದೂಡುವ ಹಡೆದವರಲ್ಲಾಗುವ ಸ್ಥಿತಿಯಿಂದ ಕಂಡುಕೊಳ್ಳ ಬಹುದು.

ಇಷ್ಟಾದ ಬಳಿಕ ಅಳಿಯನನ್ನೂ ಮಗಳನ್ನೂ ಕಳಿಸುವ ಕೊನೆಯ ದಿನ ದಲ್ಲಿ ಆಕಾಶರಾಜನಿಂದ 'ಕಳವೂಟದ ಸಮಾರಂಭವು ಮಾಡಲ್ಪಟ್ಟಿತು.

ಶ್ರೀನಿವಾಸನು ಸಾಮಾನ್ಯರಂತೆ ತಿರುಪತಿಕೆಯನ್ನು ಬಿಟ್ಟು, ಮಾವನಿಂದ ಇನ್ನೂ ಸಂಪತ್ತನ್ನು ಹಿರಿದುಕೊಂಡು ಊಟಕ್ಕೆ ಹೋಗಬೇಕೆಂದು ತನ್ನ ಜೊತೆಯವರ ಸಹಿತವಾಗಿ ಸಟೆಗೊಂಡು ಭೋಜನಕ್ಕೆ ವಿಷ್ಣುತರುವ ಅಜ್ಞ ನಾದ ಅಳಿಯನಾಗಿರಲಿಲ್ಲ 'ತನ್ನ ಮಗಳ ಲಗ್ನದಲ್ಲಿ ಮನಸ್ವಿಯಾಗಿ ಖರ್ಚು ವೆಚ್ಚ ಮಾಡಿ ಕೊನೆಗೆ ಕಳವೂಟದ ದಿನದಲ್ಲಿ 'ಇನ್ನೂ ತನಗೆ ಅದು ಬೇಕು, ಇದುಬೇಕು, ಎಂದು ಬಾಯಿತಗೆದು ಬೇಡುವ ಅಳಿಯನನ್ನು ಸ್ವಲ್ಪದ ರಿಂದಲೇ ತೃಪ್ತಿನಡಿಸಲು ಅಸಮರ್ಥರಾದ ಸಾಮಾನ್ಯಮಾವಂದಿರಂತೆ ಆಕಾ ಶರಾಜನಾಗಿರಲಿಲ್ಲ ಕಳವೂಟ ತೀರಿಸಿಕೊಂಡು ಹೊರಡುವ ಅಳಿಯನ ಸಂಗಡ ಆಕಾಶರಾಜನು ಅಕ್ಕಿ ಹೆಸರಿನಿಂದ ತುಂಬಿದ ನೂರಾರು ಚೀಲಗಳು, ಸಾವಿರ ಹಾಲಿನಿಂದ ತುಂಬಿದ ಪಾತ್ರೆಗಳು ಅದೇ ಪ್ರಮಾಣದಿಂದ ಮೊಸರು, ತುಪ್ಪ, ಸಕ್ಕರೆ, ಜೇನುತುಪ್ಪ ಇವೆಲ್ಲ ಸಾಮಿತ್ರಿಗಳನ್ನು ಸಿದ್ಧಪಡಿಸಿ ಬಂಡಿ ತುಂಬ ಆತನಿಗೆ ಒಪ್ಪಿಸಿದನು ಸಾವಿರ ಗಜಗಳೂ ಹತ್ತುಸಾವಿರ ಕುದುರ ಗಳೂ, ಐದು ಸಾವಿರ ಆಕಳುಗಳೂ ಅಲ್ಲದೆ ಅನೇಕ ದಾಸ-ದಾಸಿಯರೂ ಅಳಿಯ ಶ್ರೀನಿವಾಸನಿಗೆ ಆಕಾಶರಾಜನಿಂದ ಕೊಡಲ್ಪಟ್ಟವು. ಇವುಗಳ ಹೊರತು ಹಲವು ತರದ ವಸ್ತ್ರಗಳು, ಮೃದುಮನೋಹರವಾದ ಪರ್ಯಂಕಗಳು, ಇನ್ನೂ ಎಷ್ಟೋ ನೂಗನಿನ ಒಡವಗಳು ಮಾವನಿಂದ ಶ್ರೀನಿವಾಸನಿಗೆ ಸಲ್ಲಿದವು

ಆ ಬಳಿಕ ಶ್ರೀನಿವಾಸ-ಪದ್ಮಾವತಿ ಮೊದಲಾಗಿ ಎಲ್ಲರು ವೇಂಕಟ ಗಿರಿಗೆ ತೆರಳಲುಸುವಾದರು ಆಕಾಶರಾಜ ಧರಣೀದೇವಿ ಮೊದಲಾಗಿ ಎಲ್ಲ ಆಪ್ತರುಗಳು ಅವರನ್ನು ಸಂಭ್ರಮದಿಂದ ಕಳಿಸಲು ನಡೆದರು ನಗರದಾಟಿ ತುಸು ದೂರಿನಲ್ಲಿದ್ದ ತೀರ್ಥಜಲಾಶಯವೊಂದರ ಸಮಿಪಕ್ಕೆ ಬಂದ ಕೂಡಲೆ ಒಬ್ಬರನ್ನೊಬ್ಬರು ಪ್ರೀತಿ ಸೂಚಕ ಮಾತುಗಳಿಂದಲೂ ನಮಸ್ಕಾರ-ಚಮತ್ಕಾ ರಗಳಿಂದಲೂ ಬೀಳ್ಕೊಡ ಹತ್ತಿದರು ಆಕಾಶರಾಜನು ಶ್ರೀನಿವಾಸನೆದುರು ತನ್ನಲ್ಲಿ ಸುಪ್ತವಾಗಿದ್ದ 'ತನ್ನ ಧನ್ಯತೆ'ಯನ್ನು ಶಬ್ದಗಳಿಂದ ಪ್ರಕಟಿಸಿದನು ಶ್ರೀನಿವಾಸನು ಇದುವರೆಗೂ ಲೌಕಿಕಕ್ಕೆ ಸರಿಯಾಗಿ ವರ್ತಿಸಿದನೇ ಹೊರತು ತನ್ನ ದೇವತ್ವವನ್ನು ಪ್ರಕಟಿಸಿರಲಿಲ್ಲ ತನ್ನನ್ನು ದೂರದವರೆಗೆ ಕಳಿಸಲು ಬಂದ ಆಕಾಶರಾಜನನ್ನು ಲೌಕಿಕರಂತೆ ಪದ್ಮಾವತಿಯಿಂದ ಸಹಿತವಾಗಿ ವಂದಿಸಿ ಆತನಿಂದ 'ದೀರ್ಘಾಯುಷಿಯರಾಗಿರಿ' ಎಂದು ಆಶೀರ್ವಾದಪಡೆದರು.

ಆ ಬಳಿಕ ಶ್ರೀನಿವಾಸನು ಆಕಾಶರಾಜನನ್ನು ಕುರಿತು— ರಾಜ! ನೀನು ನನ್ನಿಂದ ಬಯಸತಕ್ಕದ್ದೇನು? ಎಂದು ತನ್ನ ದೇವವಾಣಿಯಿಂದ ಕೇಳಿದನು ಆಕಾಶರಾಜನು ಇದನ್ನರಿಯದೆ, ಶ್ರೀನಿವಾಸ! ನಿನಗೆ ಬೇಕಾದಷ್ಟು ನೀಡುವ ಸಾಮರ್ಥ್ಯವಿದ್ದ ನಾನು ನಿನ್ನಿಂದ ಬಯಸುವದೇನು? ನಿಮಗೆ ಇನ್ನೂ ಕೊರತೆಯುಂಟಾದಲ್ಲಿ ಕಾಲಕಾಲಕ್ಕೆ ತಿಳಿಸಿ ನನ್ನಿಂದ ಪಡೆಯಬಹುದು ಎಂದು ತನ್ನ ಸಂಪತ್ತಿನ ಮದವನ್ನು ಸ್ಪಷ್ಟವಾಗಿ ಪ್ರದರ್ಶಿಸಿದನು ಆಗ ಶ್ರೀನಿವಾಸನು ಮನಸಿನಲ್ಲಿ ರಾಜನಲ್ಲಿ ಇನ್ನೂ ಪೂರ್ಣ ಪ್ರಜ್ಞೆಯುಂಟಾಗಿರಲಿಲ್ಲ ಆತನನ್ನು ಎಚ್ಚರಗೊಳಿಸಿ ಉದ್ಧರಿಸಬೇಕು ಎಂದು ದಯಾಮೂರ್ತಿಯಾದ ಆತನು— ಆಕಾಶರಾಜನ ಮದ ಬೆರೆತ ಮಾತನ್ನು ಕೇಳಿ ತಾನೊಂದು ಹಾಸ್ಯವನ್ನು ಹೊರಸೂಸಿದನು ಅಷ್ಟರಿಂದಲೇ ಆಕಾಶರಾಜನ ಚಿತ್ತಪರಿವರ್ತನವಾಗಿ "ದೇವಾ ಶ್ರೀನಿವಾಸ! ದಯಮಾಡು; ನಾನು ಇದುವರೆಗೆ ನಿನ್ನಲ್ಲಿ ದೇವತ್ವವನ್ನೆಣಿಸಲಿಲ್ಲ ಇದು ನನ್ನ ಅಜ್ಞಾನವೇ ಎಂದು ಹೇಳಿಕೊಳ್ಳುವೆನು" ಎಂದು ನುಡಿಯುತ್ತಿರುವಷ್ಟರಲ್ಲಿಯೇ ಶ್ರೀನಿವಾಸನು— ರಾಜ! ನಿನಗೀಗಲೆ ಸಾಯುಜ್ಯ ಪದವಿಯನ್ನು ನೀಡಿರುವೆನು ಎಂದು ತನ್ನ ಅನುಗ್ರಹವನ್ನು ಬೀರಿದನು ಅಷ್ಟರಿಂದಲೇ ಆಕಾಶರಾಜನಲ್ಲಿಯ ಮೋಹವು ನಷ್ಟವಾಗಿ ಅಳಿಯ–ಮಗಳು ಇವರನ್ನು ಮುಂದೆ ಪ್ರಯಾಣ ಬೆಳೆಸಲು ಬಿಟ್ಟು, ತಾನು ತನ್ನ ಅರಮನೆಗೆ ಹಿಂತಿರುಗಿದನು ಶ್ರೀನಿವಾಸನುತನ್ನ ಎಲ್ಲ ಪರಿವಾರದೊಡನೆ ಹೊರಟು ಸುವರ್ಣಮುಖರೀ ನದಿಯನ್ನು ದಾಟಿ ಅಗಸ್ತ್ಯಾಶ್ರಮಕ್ಕೆ ಬಂದು ಅಲ್ಲಿ ವರ್ಷಾರ್ಘದವರೆಗೆ ವಾಸ ಮಾಡಿದನು ಉಳಿದೆಲ್ಲ ದೇವ–ಋಷಿ ಮೊದಲಾದ ಕಲ್ಯಾಣೋತ್ಸವಕ್ಕಾಗಿ ಬಂದವರನ್ನೆಲ್ಲ ಮರ್ಯಾದಿಸಿ ಅವರವರ ಸ್ಥಾನಗಳಿಗೆ ಹೋಗಲು ಅಪ್ಪಣೆಯಿತ್ತನು.

ಶ್ರೀಲಕ್ಷ್ಮೀದೇವಿಯೂ ಲಗ್ನಸಮಾರಂಭಕ್ಕೆ ಬಂದ ಇತರರಂತೆ ತಾನೂ ಶ್ರೀನಿವಾಸನ ಅಪ್ಪಣೆಯನ್ನು ಪಡೆದು ಕರವೀರಪುರಕ್ಕೆ ಹೊರಟುಹೋದಳು.

ಈ ಪ್ರಕಾರ ಕಲ್ಯಾಣಮಹೋತ್ಸವಕ್ಕಾಗಿ ಬಂದವರೆಲ್ಲರೂ ಆನಂದದಿಂದ ಹಿಂದಿರುಗಿಹೋದನಂತರ ಶ್ರೀನಿವಾಸನು ಅಂದಿನಿಂದ ಆರುತಿಂಗಳುಗಳ ಪರಿಯಂತವೂ ಪದ್ಮಾವತಿಯೊಡನೆ ಸುಖವಾಸ್ತವ್ಯದಿಂದ ಅಗಸ್ತ್ಯಾಶ್ರಮದಲ್ಲಿ ಇರಹತ್ತಿದನು.

ಆಯಿತು! ಇಲ್ಲಿಗೆ ಶ್ರೀನಿವಾಸ ಕಲ್ಯಾಣದ ಸಮಾಪ್ತಿಯಾಯಿತು! ಶ್ರೀನಿವಾಸನ ಲೀಲೆಯೂ ಲಕ್ಷ್ಮೀದೇವಿಯ ಛಲವೂ ಎಲ್ಲವೂ ಈ ಕಲ್ಯಾಣ ವೊಂದರಿಂದಲೆ ಕೊನೆಗೊಂಡವು. ಪದ್ಮಾವತಿಯ ಯುಗಾಂತರದ ಆಸೆಯು ಅರ್ಥಾತ್ ಸೀತಾದೇವಿಯು ವೇದವತಿಯನ್ನು ಲಗ್ನ ಮಾಡಿಕೊಳ್ಳಲು ಶ್ರೀ ರಾಮನಿಗೆ ಬೇಡಿಕೊಂಡ ಆಕೆಯ ವಿನಂತಿಯೂ ಈ ಕಲಿಯುಗದ 'ಶ್ರೀನಿವಾಸ ಕಲ್ಯಾಣ' ದಿಂದ ಮಾನ್ಯ ಮಾಡಲ್ಪಟ್ಟಿತು ಯಶೋದಾ ಮಾತೆಯು ಮಗ ನಾದ ಶ್ರೀಕೃಷ್ಣನ ವಿವಾಹ ಸಮಾರಂಭವನ್ನು ನೋಡಿ ಸಂತೋಷ ಪಡುವ ಆಸೆಯು ಆಕೆಯ ಆ ದ್ವಾಪರಯುಗದ ಜನ್ಮದಲ್ಲಿ ಈಡೇರದೆ ಈ ಯುಗದಲ್ಲಿ ಬಕುಲಾವತಿಯ ಸ್ವರೂಪದಿಂದ ಸಾಕ್ಷಾತ್ ಕೃಷ್ಣನೇ ಆದ ಶ್ರೀನಿವಾಸನನ್ನು ತನ್ನ ಸೇವೆಯಿಂದ ಸಲುಹಿ ಆತನ ಲಗ್ನಕ್ಕಾಗಿ ತಾನೇ ಪ್ರಯತ್ನಪಟ್ಟು ಕನ್ಯೆ ನಿಶ್ಚಯಿಸಿ ಲಗ್ನ ಮಾಡಿ ಆ ಯುಗದಲ್ಲಿ ಮರೆಯಾಗಿದ್ದ ತನ್ನ ಬಯಕೆಯನ್ನು ಈ ಕಲ್ಯಾಣದಿಂದ ಪೂರ್ಣ ಮಾಡಿಕೊಂಡಳು ಜನಕರಾಜನು ಆಕಸ್ಮಿಕ ವಾಗಿ ಪ್ರಾಪ್ತವಾಗಿದ್ದ ದುಃಖ ಪರಂಪರೆಗಳು ಕಲಿಯುಗದಲ್ಲಿ ಜರುಗಿದ 'ಶ್ರೀನಿವಾಸ ಕಲ್ಯಾಣ'ದ ಕಥೆಯನ್ನು ಶತಾನಂದ ಋಷಿಗಳಿಂದ ಶ್ರವಣಮಾಡಿ ತನಗಾದ ದುಃಖಗಳನ್ನೆಲ್ಲ ಸುಖಗಳನ್ನಾಗಿ ಮಾರ್ಪಡಿಸಿಕೊಂಡು ದಿವ್ಯಲೋಕ ವನ್ನು ಪಡೆದು ಶಾಶ್ವತ ಶಾಂತಿಯನ್ನು ಹೊಂದಿದನು ಪ್ರಾಚೀನ ಕಾಲದಲ್ಲಿ ನೈಮಿಷಾರಣ್ಯದಲ್ಲಿ ಶೌನಕಾದಿ ಋಷಿಗಳು ಶ್ರೀ ವಿಷ್ಣುವಿನ ಮಹಿಮೆಯನ್ನು ಕೇಳಿ ತೃಪ್ತಿ ಪಡೆಯಲು ಆತುರವುಳ್ಳವರಾಗಿ ಸೂತ ಪುರಾಣಿಕರ ಮುಖದಿಂದ ಈ ಕಲಿಯುಗದಲ್ಲಿ ನಡೆದ 'ಶ್ರೀನಿವಾಸ ಕಲ್ಯಾಣ'ದ ಕಥೆಯನ್ನು ಕೇಳಿ ತಮ್ಮ ಅಪೇಕ್ಷೆಯನ್ನೆಲ್ಲ ಪೂರ್ಣ ಮಾಡಿಕೊಂಡರು

ಇವರೆಲ್ಲರಂತೆ ಈ 'ಶ್ರೀನಿವಾಸ ಕಲ್ಯಾಣ' ವನ್ನು ಓದಿ, ಪಾರಾಯಣ ಮಾಡಿದವರೆಲ್ಲರೂ ತಮ್ಮ ಅಭೀಷ್ಟಚಿಂತನೆಯನ್ನು ಪೂರ್ಣ ಪಡೆಯುವರು, ಈ ಶ್ರೀನಿವಾಸಕಲ್ಯಾಣವನ್ನು ಸ್ಮರಿಸಿಕೊಳ್ಳುವ ಎಲ್ಲರಿಗೂ ಆಯುರಾರೋಗ್ಯ ಸಂಪತ್ತುಗಳುಲಭಿಸಿ ಅವರು ಸರ್ವಕಾಲವೂ ಆನಂದಗಿರಿಯಲ್ಲಿ ವಾಸವಾಗುವ ರೆಂಬದರಲ್ಲಿ ಸಂದೇಹವಿಲ್ಲ.

**–ಶ್ರೀಮದ್ವೇಂಕಟಾಚಲವಾಸಿ ಶ್ರೀನಿವಾಸಗೋವಿಂದಾ ಗೋವಿಂದ–**

—ಶ್ರೀಕೃಷ್ಣಾರ್ಪಣಮಸ್ತು—